# ಸಾಹಿತ್ಯ ಮತ್ತು ಜನಪ್ರಿಯತೆ :

## ಬಿ.ಆರ್.ಲಕ್ಷ್ಮಣರಾವ್ ಅವರ ಸಾಹಿತ್ಯವನ್ನು ಅನುಲಕ್ಷಿಸಿ

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವ ವಿದ್ಯಾಲಯಕ್ಕೆ

ಸಲ್ಲಿಸುತ್ತಿರುವ ಮಹಾಪ್ರಬಂಧ



ಸಂಶೋಧಕರು

ಅನುಸೂಯ.ಟಿ.ಟಿ.

ಮಾರ್ಗದರ್ಶಕರು

ಡಾ. ಎ. ಸುಬ್ಬಣ್ಣ ರೈ

ಪ್ರಾಧ್ಯಾಪಕರು





ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೧೨

# ಸಾಹಿತ್ಯ ಮತ್ತು ಜನಪ್ರಿಯತೆ :

# ಬಿ.ಆರ್.ಲಕ್ಷ್ಮಣರಾವ್ ಅವರ ಸಾಹಿತ್ಯವನ್ನು ಅನುಲಕ್ಷಿಸಿ

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವ ವಿದ್ಯಾಲಯಕ್ಕೆ

ಸಲ್ಲಿಸುತ್ತಿರುವ ಮಹಾಪ್ರಬಂಧ


**ಸಂಶೋಧಕರು**

ಅನುಸೂಯ.ಟಿ.ಟಿ.

**ಮಾರ್ಗದರ್ಶಕರು**

ಡಾ. ಎ. ಸುಬ್ಬಣ್ಣ ರೈ

ಪ್ರಾಧ್ಯಾಪಕರು





ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೧೨

## ಘೋಷಣಾ ಪತ್ರ

'ಸಾಹಿತ್ಯ ಮತ್ತು ಜನಪ್ರಿಯತೆ : ಬಿ.ಆರ್. ಲಕ್ಷ್ಮಣರಾವ್ ಅವರ ಸಾಹಿತ್ಯವನ್ನು ಅನುಲಕ್ಷಿಸಿ' ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು ಡಾ. ಎ. ಸುಬ್ಬಣ್ಣ ರೈ, ಪ್ರಾಧ್ಯಾಪಕರು, ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರೆ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ದಿನಾಂಕ: ೧೧-೦೫-೨೦೧೨
ಸ್ಥಳ: ವಿದ್ಯಾರಣ್ಯ

ಅನುಸೂಯ ೧೧/೫/೧೨

**ಅನುಸೂಯ ಟಿ.ಟಿ.**
ಸಂಶೋಧಕರು,
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

## ದೃಢೀಕರಣ ಪತ್ರ

ಅನುಸೂಯ ಟಿ.ಟಿ., ಇವರು **'ಸಾಹಿತ್ಯ ಮತ್ತು ಜನಪ್ರಿಯತೆ : ಬಿ.ಆರ್. ಲಕ್ಷ್ಮಣರಾವ್ ಅವರ ಸಾಹಿತ್ಯವನ್ನು ಅನುಲಕ್ಷಿಸಿ'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದಾರೆ. ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: ೧೧-೦೫-೨೦೧೨
ಸ್ಥಳ: ವಿದ್ಯಾರಣ್ಯ

**ಡಾ. ಎ. ಸುಬ್ಬಣ್ಣ ರೈ**
ಪ್ರಾಧ್ಯಾಪಕರು ಮತ್ತು ಸಂಶೋಧನ ಮಾರ್ಗದರ್ಶಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ

ಪ್ರಾರಂಭದ ಸಾಹಿತ್ಯದಿಂದ ಇಂದಿನವರೆಗೆ ರಚಿತವಾಗಿರುವ ಎಲ್ಲಾ ಬಗೆಯ ಸಾಹಿತ್ಯವು ಜನಪ್ರಿಯತೆ ಎಂಬುದನ್ನು ಒಳಗೊಂಡಿರುತ್ತದೆ. ರಾಮಾಯಣ, ಮಹಾಭಾರತ ಕಾವ್ಯಗಳಿಂದ, ಪಂಪಾದಿ ಕವಿಗಳಿಂದ ಇಂದಿನವರೆಗಿನ ಸಾಹಿತ್ಯದ ಎಲ್ಲಾ ಪ್ರಕಾರಗಳಿಗೂ ಜನಪ್ರಿಯತೆ ಎಂಬ ಮಾತು ಅನ್ವಯವಾಗುತ್ತದೆ. ಆಧುನಿಕ ಸಾಹಿತ್ಯದ ನವೋದಯ ಪ್ರಗತಿಶೀಲ, ನವ್ಯ, ದಲಿತ ಬಂಡಾಯ, ಎಲ್ಲಾ ಪಂಥಗಳಲ್ಲಿಯೂ ಜನಪ್ರಿಯತೆಯ ಅಂಶ ಒಳಗೊಂಡಿರುವುದನ್ನು ಕಾಣಬಹುದು. ಜಾನಪದ ಸಾಹಿತ್ಯಕ್ಕೂ ಈ ಮಾತು ಅನ್ವಯವಾಗುತ್ತದೆ. ಜನಪ್ರಿಯ ಎಂಬುದು ಜನ ಮತ್ತು ಪ್ರಿಯ ಎಂಬ ಎರಡು ಭಾಷಾ ಘಟಕಗಳಿಂದ ಕೂಡಿ ಜನಪ್ರಿಯತೆ ಎಂದಾಗಿದೆ. ಜನಪ್ರಿಯತೆ ಎಂಬುದರ ಸಾಮಾನ್ಯ ಅರ್ಥವೇನೆಂದರೆ ಹೆಚ್ಚಿನ ಜನರಿಗೆ ಪ್ರಿಯವಾಗುವುದು, ಹೆಚ್ಚಿನ ಜನರ ಮೆಚ್ಚುಗೆ ಗಳಿಸುವುದು, ಅಪಾರ ಜನರಿಗೆ ಇಷ್ಟವಾಗುವುದು, ಹೆಚ್ಚೆಚ್ಚು ಜನರನ್ನು ತಲುಪುವುದು ಎಂದು ಹೇಳಬಹುದು. ಜನಪ್ರಿಯ ಸಾಹಿತ್ಯವೆಂದರೆ ಹೆಚ್ಚಿನ ಓದುಗ ಸಮೂಹವನ್ನು ಹೊಂದಿರುವ ಸಾಹಿತ್ಯ ಎಂದಾಗುತ್ತದೆ. ಸಾಹಿತ್ಯವು ಸಂಸ್ಕೃತಿಯ ಭಾಗವಾಗಿರುವಂತೆಯೇ ಕಲೆ ಎಂಬುದಾಗಿಯೂ ಪರಿಗಣಿಸಲಾಗುತ್ತದೆ. ಕಲೆಯ ಉದ್ದೇಶ ಮನರಂಜನೆ ಎಂದಾಗುವುದಾದರೆ ಸಾಹಿತ್ಯವು ಕಲೆ ಎಂದುಕೊಂಡಾಗ ಅದು ಮನಸ್ಸಿಗೆ ಆನಂದವನ್ನುಂಟುಮಾಡುವುದು ಆಗಿದೆ. ಹೀಗೆ ಸಾಹಿತ್ಯ ಮತ್ತು ಜನಪ್ರಿಯತೆಗೆ ಅಂತಃಸಂಬಂಧವಿದೆ. ಈ ಜನಪ್ರಿಯತೆ ಎಂಬುದು ಒಂದೇ ರೀತಿಯಾಗಿರುವುದಿಲ್ಲ. ಅದು ಬದಲಾಗುತ್ತಿರುತ್ತದೆ. ಕಾಲದಿಂದ ಕಾಲಕ್ಕೆ, ಜನಾಂಗದಿಂದ ಜನಾಂಗಕ್ಕೆ ಒಂದೇ ರೀತಿಯಾಗಿರದೆ ಬದಲಾಗುತ್ತಿರುತ್ತದೆ. ಜನಪ್ರಿಯತೆ ಎಂಬ ಮಾತು ಸಂಗೀತ, ನೃತ್ಯ, ನಾಟಕ, ಸಿನಿಮಾ, ಸಮೂಹ ಮಾಧ್ಯಮ ಇತ್ಯಾದಿ ಎಲ್ಲಾ ಬಗೆಯ ಕಲೆಗಳಿಗೂ ಹಾಗೆಯೇ ಸಾಹಿತ್ಯದ ಯಾವುದೇ ಪಂಥ, ಪ್ರಕಾರಕ್ಕೂ ಅನ್ವಯವಾಗುತ್ತದೆ. ಸಾಹಿತ್ಯದಲ್ಲಿ ಜನಪ್ರಿಯತೆಯ ಮಾನದಂಡವೇನೆಂಬುದನ್ನು ಖಚಿತವಾಗಿ ಹೇಳುವುದು ಕಷ್ಟಸಾಧ್ಯವಾದರೂ ಕೂಡ ಸಾಹಿತ್ಯದ ಗುರಿ, ಉದ್ದೇಶ ವಸ್ತು ವಿಷಯ ಧ್ಯೇಯ ಧೋರಣೆ, ಶೈಲಿ ಇವೆಲ್ಲವೂ ಜನಪ್ರಿಯತೆಯನ್ನು ನಿರ್ಧರಿಸುವ ಅಂಶಗಳಾಗುತ್ತವೆ ಎಂದು ಹೇಳಬಹುದು.

ಆಧುನಿಕ ಸಾಹಿತ್ಯ ಸಂದರ್ಭದಲ್ಲಿ ಈಗಾಗಲೇ ಗಮನಿಸಿರುವಂತೆ 'ಸಾಹಿತ್ಯದಲ್ಲಿ ಜನಪ್ರಿಯತೆ', 'ಜನಪ್ರಿಯ ಸಾಹಿತ್ಯ', 'ಜನಪ್ರಿಯ ಕಲೆ', ಎಂಬ ಪರಿಕಲ್ಪನೆಗಳು ಹುಟ್ಟಿಕೊಂಡಿವೆ. ಆಧುನಿಕ ಸಾಹಿತ್ಯ

ವಿಮರ್ಶೆಯಲ್ಲಿ ಜನಪ್ರಿಯ ಸಾಹಿತ್ಯದ ಪರಿಕಲ್ಪನೆ ಪ್ರಚಲಿತವಿದೆ. ವಿಮರ್ಶೆಯು ಜನಪ್ರಿಯ ಸಾಹಿತ್ಯ ಮತ್ತು ಗಂಭೀರ ಸಾಹಿತ್ಯ ಎಂಬ ಪರಿಕಲ್ಪನೆಗಳ ಅಡಿಯಲ್ಲಿ ಸಾಹಿತ್ಯ ಚಿಂತನೆಯನ್ನು ನಡೆಸಿದೆ. ಗಂಭೀರ ಓದಿಗೆ ನಿಲುಕದ ಗಂಭೀರ ಅಧ್ಯಯನಕ್ಕೆ ಅರ್ಹವಲ್ಲದ ಎರಡನೇ ದರ್ಜೆಯ ಸಾಹಿತ್ಯವೆಂದು ಜನಪ್ರಿಯ ಸಾಹಿತ್ಯವನ್ನು ನಿರ್ವಚಿಸಿಕೊಂಡಿವೆ. ಅವರಿಂದಾಗಿ ಅಂತಹ ಸಾಹಿತ್ಯ ಕೃತಿಗಳ ಬಗೆಗೆ ಅಕಾಡಮಿಕ್ ಚರ್ಚೆಗಳು ನಡೆಯುತ್ತಿಲ್ಲ. ವಿಮರ್ಶಕರ ದೃಷ್ಟಿಯಿಂದಾಗಿ ಅಂತಹ ಕೃತಿಗಳು ಅವಜ್ಞೆಗೆ ಒಳಗಾಗಿವೆ. ಆದರೆ ಸಾಹಿತ್ಯದ ಮೂಲ ಉದ್ದೇಶ ಅಧ್ಯಯನ ವಿಮರ್ಶೆಯಾಗಿರದೆ ಅಸ್ವಾದನೆಯಷ್ಟೆ ಆಗಿದೆ ಎಂದಿಟ್ಟುಕೊಂಡರೆ ಜನಪ್ರಿಯವೆಂದು ಪರಿಗಣಿತವಾದ ಸಾಹಿತ್ಯ ಕೃತಿಗಳಿಗೂ ಪ್ರಾಶಸ್ತ್ಯ ಲಭಿಸುತ್ತದೆ. ಹೆಚ್ಚಿನ ಓದುಗ ವರ್ಗವನ್ನು ಗಳಿಸಿರುವ ಅಂತಹ ಸಾಹಿತ್ಯ ಕೃತಿಗಳ ಮರ್ಮವೇನು? ಅವುಗಳಲ್ಲಿನ ಜನಪ್ರಿಯತೆಯ ಅಂಶಗಳಾವುವು? ಏಕೆ ಜನಪ್ರಿಯತೆ ಗಳಿಸಿವೆ? ಹೇಗೆ ಜನ ಮೆಚ್ಚುಗೆಗೆ ಪಾತ್ರವಾಗಿವೆ? ಎಂಬುದನ್ನು ತಿಳಿದುಕೊಳುವುದು ಬಹಳ ಮುಖ್ಯವಾಗುತ್ತದೆ.

ಸಾಹಿತ್ಯ ಚಿಂತನೆಯಲ್ಲಿ ಈ ಬಗೆಯ ಅಂದರೆ ಗಂಭೀರ ಜನಪ್ರಿಯ ಎಂಬ ಪರಿಕಲ್ಪನೆಗಳು ಉಚಿತವಲ್ಲ. ಹಾಗೆ ಅಭಿಪ್ರಾಯ ಪಡುವವರು ಒಟ್ಟಾರೆ ಸಾಹಿತ್ಯವನ್ನು ಒಳ್ಳೆಯ ಸಾಹಿತ್ಯ ಮತ್ತು ಕೆಟ್ಟ ಸಾಹಿತ್ಯ ಎಂದಷ್ಟೆ ಪರಿಗಣಿಸಲು ಇಚ್ಛಿಸುತ್ತಾರೆ. ಹಾಗೆ ನೋಡಿದರೆ ಜನಪ್ರಿಯ ಮತ್ತು ಗಂಭೀರ ಎಂಬ ಅಂಶಗಳು ಸಾಹಿತ್ಯದಲ್ಲಿ ಸಾಪೇಕ್ಷ ವಾಗಿರುವುದು ಓದುಗ ಮತ್ತು ವಿಮರ್ಶಕರ ಆಸಕ್ತಿ, ಅಭಿರುಚಿಗಳಿಗೆ ಹೊಂದಿಕೊಂಡಂತೆ ಒಂದು ಕೃತಿ ಜನಪ್ರಿಯ ಕೃತಿ, ಗಂಭೀರ ಕೃತಿ, ಎನಿಸಿಕೊಳ್ಳುವ ಸಾಧ್ಯತೆಯು ಇಲ್ಲದಿಲ್ಲ. ಗಂಭೀರ ಎನಿಸಿಕೊಂಡಿರುವ ಕೃತಿಗಳಲ್ಲಿ ಕೆಲವೊಂದು ಜನಪ್ರಿಯ ಅಂಶಗಳನ್ನು ಕಾಣುತ್ತೇವೆ. ನಿರ್ದಿಷ್ಟ ವಲಯದಲ್ಲಿ ಅದು ಜನಪ್ರಿಯತೆಯನ್ನು ಗಳಿಸಿರುತ್ತವೆ. ಅದೇ ರೀತಿಯಲ್ಲಿ ಜನಪ್ರಿಯವೆನಿಸಿಕೊಂಡಿರುವ ಕೃತಿಗಳಲ್ಲಿಯೂ ಕೆಲವೊಂದು ಗಂಭೀರ ಅಂಶಗಳಿರುತ್ತವೆ. ಹಾಗಾಗಿಯೇ ಗಂಭೀರ ಚರ್ಚೆಗೂ ಅದು ಅರ್ಹವಾಗಿರಬಹುದು. ಗಂಭೀರ ವಿಷಯವನ್ನು ನಿರೂಪಿಸಿ ಜನಪ್ರಿಯತೆ ಪಡೆದ ಸಾಹಿತ್ಯವು ಇದೆ. ಯಾವುದೇ ವಿಮರ್ಶೆಯ ಹಂಗಿಗೂ ಒಳಗಾಗದೆ ಅನೇಕ ಬರಹಗಾರರು ಬರೆಯುತ್ತಾರೆ. ಅಂಥವರ ಬರಹಗಳು ಅಪಾರ ಜನಪ್ರಿಯತೆಯನ್ನು ಗಳಿಸಿಕೊಂಡಿದ್ದು ಇವೆ. ಜನಪ್ರಿಯತೆ ಎಂಬ ಪರಿಕಲ್ಪನೆ ಕುರಿತಂತೆ ದ್ವಂದ್ವ ಗೊಂದಲ ತಾತ್ವಿಕ ತೊಡಕುಗಳಿದ್ದರೂ ಅಪಾರ ಸಂಖ್ಯೆಯಲ್ಲಿ ಕೃತಿಗಳು ಪ್ರಕಟವಾಗಿ ಓದುಗ ವರ್ಗದ ಜನಮೆಚ್ಚುಗೆ ಗಳಿಸಿಕೊಂಡಿರುವುದನ್ನು ಕಾಣುತ್ತೇವೆ.

ಇಲ್ಲಿ ಜನಪ್ರಿಯತೆ ಎಂಬುದು ಸಾಹಿತ್ಯದ ಗುಣಾತ್ಮಕ ಅಂಶವಾಗಿ ಪರಿಭಾವಿಸಿಕೊಂಡು ಅಧ್ಯಯನ ನಡೆಸುವ ಉದ್ದೇಶ ಹೊಂದಲಾಗಿದೆ. ಅದಕ್ಕಾಗಿ "ಸಾಹಿತ್ಯ ಮತ್ತು ಜನಪ್ರಿಯತೆ", ಬಿ.ಆರ್. ಲಕ್ಷ್ಮಣರಾವ್ ಅವರ ಸಾಹಿತ್ಯವನ್ನು ಅನುಲಕ್ಷಿಸಿ" ಎಂಬ ಶೀರ್ಷಿಕೆಯಲ್ಲಿ ಕೈಗೊಳ್ಳಲಾದ ಅಧ್ಯಯನದಲ್ಲಿ ಸಾಹಿತ್ಯದಲ್ಲಿ ಜನಪ್ರಿಯತೆ ಎಂಬುದಕ್ಕೆ ಒತ್ತು ನೀಡಲಾಗಿದೆ. ಆ ಮೂಲಕ ಬಿ.ಆರ್. ಲಕ್ಷ್ಮಣರಾವ್ ಅವರ

ಸಾಹಿತ್ಯದ ಜನಪ್ರಿಯತೆಯನ್ನು ಇಲ್ಲಿ ಚರ್ಚಿಸಲಾಗುವುದು. ಪ್ರಧಾನ ಚರ್ಚೆಗೆ ಪೂರಕವಾಗಿ ಸಾಹಿತ್ಯ ಮತ್ತು ಜನಪ್ರಿಯತೆಯ ಅಂತ ಸಮಬಂಧಗಳು, ಸಾಹಿತ್ಯದಲ್ಲಿ ಜನಪ್ರಿಯತೆಯ ಅಂಶಗಳು ಯಾವುವು ಎಂಬುದನ್ನು ಗುರುತಿಸಿಕೊಳ್ಳಲಾಗುವುದು. ಹಾಗೆಯೇ ವಿಮರ್ಶೆಯ ನೆಲೆಯಲ್ಲಿ ಜನಪ್ರಿಯ ಸಾಹಿತ್ಯದ ಪರಿಕಲ್ಪನೆಗಳನ್ನು ವಿವಿಧ ಲೇಖಕರ ಅಭಿಪ್ರಾಯಗಳ ಮೂಲಕ ಕ್ರೋಢೀಕರಿಸಿ ಚರ್ಚಿಸಲಾಗುವುದು.

ಬಿ.ಆರ್. ಲಕ್ಷ್ಮಣರಾವ್ ಅವರ ಬದುಕು ಮತ್ತು ಸಾಹಿತ್ಯವನ್ನು ಕುರಿತ ಸ್ಥೂಲ ಪರಿಚಯವನ್ನು ಮಾಡಿಕೊಳ್ಳಲಾಗುವುದು. ಆ ಮೂಲಕ ಪೂರಕ ಚರ್ಚೆಗಳೊಂದಿಗೆ ಪ್ರಧಾನವಾಗಿ ಚರ್ಚೆ ನಡೆಸಲಾಗುವುದು. ಅವರ ಸಮಗ್ರ ಕಾವ್ಯವನ್ನು ಚರ್ಚೆಗೆ ಬಳಸಿಕೊಳ್ಳಲಾಗುವುದು. ಕಾವ್ಯದಲ್ಲಿನ ಜನಪ್ರಿಯತೆ ಅಂಶಗಳನ್ನು ಗುರುತಿಸುವುದು ಅವು ಹೇಗೆ ಜನಪ್ರಿಯತೆ ಗಳಿಸಿವೆ ಎಂಬುದರ ವಿಶ್ಲೇಷಣೆ ಮಾಡಲಾಗುವುದು. ಅವರ ಕವಿತೆಗಳಲ್ಲಿ ನಿರೂಪಿತವಾಗಿರುವ ಪ್ರೀತಿ, ಪ್ರೇಮ, ಪ್ರಣಯ, ಹಾಸ್ಯ-ವಿನೋದ ವಿಡಂಬನೆ ಇತ್ಯಾದಿ ಅಂಶಗಳನ್ನು ಪ್ರಧಾನವಾಗಿ ಚರ್ಚಿಸಲು ಕವಿತೆಗಳನ್ನು ಆಕರವಾಗಿಟ್ಟುಕೊಳ್ಳಲಾಗಿದೆ. ಅವುಗಳ ವಿಶ್ಲೇಷಣೆ ಮೂಲಕ ಅವರ ಕಾವ್ಯದ ಜನಪ್ರಿಯತೆಯ ನೆಲೆಯನ್ನು ಇಲ್ಲಿ ಕಂಡು ಕೊಳ್ಳಲಾಗುವುದು.

ಕಾವ್ಯ ಮತ್ತು ಸುಗಮ ಸಂಗೀತ ಸಂಬಂಧದೊಂದಿಗೆ ಗಾಯಕರ ಗಾಯನದ ಮೂಲಕ ಸಾಹಿತ್ಯ ಹೇಗೆ ಜನಪ್ರಿಯತೆ ಗಳಿಸಿದೆ ಎಂಬುದಕ್ಕೆ ಅವರ ಭಾವಗೀತೆಗಳ ಧ್ವನಿಸುರಳಿಗಳ ಸಮೀಕ್ಷೆಯ ಮೂಲಕ ಗುರುತಿಸಿಕೊಳ್ಳಲಾಗುವುದು. ಅಲ್ಲಿನ ಕವಿತೆಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗುವುದು.

ಕಾದಂಬರಿ ಪ್ರಕಾರಕ್ಕೆ ಹೆಚ್ಚಾಗಿ ಅನ್ವಯಿಸಿಕೊಂಡು ಜನಪ್ರಿಯ ಸಾಹಿತ್ಯ ಪರಿಕಲ್ಪನೆ ಚರ್ಚಿತವಾಗುತ್ತಿದೆ. ಅದನ್ನು ಕಥನ ಸಾಹಿತ್ಯಕ್ಕೂ ಅನ್ವಯಿಸಿ ಚರ್ಚೆ ಹೇಗೆ ಸಾಧ್ಯ ಎಂಬುದನ್ನು ಬಿ.ಆರ್. ಲಕ್ಷ್ಮಣರಾವ್ ಅವರ ಕಥೆ, ಕಾದಂಬರಿಗಳನ್ನು ಅನ್ವಯಿಸಿಕೊಂಡು ಚರ್ಚಿಸಲಾಗುವುದು. ಅವರ ಒಟ್ಟು ಕಥೆಗಳಲ್ಲಿ, ಕಾದಂಬರಿಯಲ್ಲಿ ಪ್ರತಿಪಾದಿತವಾಗಿರುವ ವಸ್ತು, ವಿಷಯ, ಧೋರಣೆ, ಪಾತ್ರಗಳು, ಸಂಭಾಷಣೆಗಳು ಇವುಗಳ ವಿಶ್ಲೇಷಣೆಯ ಮೂಲಕ ಅವರ ಕಥನ ಸಾಹಿತ್ಯದ ಜನಪ್ರಿಯತೆಯನ್ನು ಚರ್ಚಿಸಲಾಗುವುದು. ಜನಪ್ರಿಯತೆಯ ಪರಿಕಲ್ಪನೆಯ ಹಿನ್ನಲೆಯಲ್ಲಿ ಅವರ ಕಥನ ಸಾಹಿತ್ಯವನ್ನು ಗಮನಿಸಲಾಗುವುದು.

ಬಿ.ಆರ್. ಲಕ್ಷ್ಮಣರಾವ್ ಅವರ ಒಟ್ಟಾರೆ ಸಾಹಿತ್ಯವನ್ನು ಗಮನಿಸಿಕೊಂಡು ಅವರ ಬರಹದಲ್ಲಿ ಜನಪ್ರಿಯ ಮತ್ತು ಗಂಭೀರ ವಿಷಯಗಳು ಹೇಗೆ ಚರ್ಚಿತವಾಗಿವೆ ಎಂಬುದನ್ನು ಗುರುತಿಸಲಾಗುವುದು. ಅವರ ಕಥೆ, ಕಾವ್ಯ, ಕಾದಂಬರಿ, ಇತ್ಯಾದಿ ಬರಹಗಳಲ್ಲಿ ಜನಪ್ರಿಯ ಮತ್ತು ಗಂಭೀರ ಅಂಶಗಳೆರಡರ ಸಮನ್ವಯ ಹೇಗೆ ಸಾಧಿತವಾಗಿದೆ ಎಂಬುದನ್ನು ಕಂಡುಕೊಳ್ಳಲಾಗುವುದು. ಆ ಮೂಲಕ ಅವರ

ಜನಪ್ರಿಯತೆಯನ್ನು ಗುರುತಿಸಿಕೊಳ್ಳುವುದು, ಜನಪ್ರಿಯತೆ ಎಂಬುದು ಸಾಹಿತ್ಯದಲ್ಲಿ ಗುಣಾತ್ಮಕ ಅಂಶವೆಂಬುದನ್ನು ಇಲ್ಲಿ ಪ್ರತಿಪಾದಿಸುವುದು. ಅದಕ್ಕೆ ಪೂರಕವಾಗಿ ಈಗಾಗಲೇ ಚರ್ಚಿತವಾಗಿರುವ ಜನಪ್ರಿಯ ಮತ್ತು ಗಂಭೀರ ಎಂಬ ಸಾಹಿತ್ಯ ಪರಿಕಲ್ಪನೆಗಳ ನೆಲೆಯಲ್ಲಿ ಜಿ.ಆರ್. ಲಕ್ಷ್ಮಣರಾವ್ ಅವರ ಜನಪ್ರಿಯತೆಯ ಅಂಶಗಳನ್ನು ಕಂಡುಕೊಳ್ಳುವುದು.

ಈ ಕ್ಷೇತ್ರಕ್ಕೆ ಸಂಬಂಧಿಸಿದ ಅಧ್ಯಯನದ ಸಮೀಕ್ಷೆ ಜನಪ್ರಿಯ ಸಾಹಿತ್ಯ ಪರಿಕಲ್ಪನೆಗೆ ಸಂಬಂಧಿಸಿದಂತೆ ಲೇಖಕರ ಬರಹಗಳನ್ನು ಗಮನಿಸುವುದು. ಜಿ.ಆರ್. ಲಕ್ಷ್ಮಣರಾವ್ ಅವರ ಸಮಗ್ರ ಕೃತಿಗಳನ್ನು ಗಮನಿಸುವುದು, ಅಧ್ಯಯನದ ವ್ಯಾಪ್ತಿಗೆ ಬರುತ್ತದೆ. ಅಂತೆಯೇ ಅವರ ಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸುವ ಮೂಲಕ ಬರಹದ ಅನನ್ಯತೆಯನ್ನು ಸಾಹಿತ್ಯದ ಜನಪ್ರಿಯತೆಯನ್ನು ಸ್ಪಷ್ಟಪಡಿಸಿಕೊಳ್ಳುವ ಉದ್ದೇಶದಿಂದ ಅಧ್ಯಯನ ಕೈಗೊಳ್ಳಲಾಗಿದೆ. ಆ ಮೂಲಕ ಅವರ ಸಾಹಿತ್ಯ ಜನಪ್ರಿಯತೆಯ ಕಾರಣದಿಂದಾಗಿ ದ್ವಿತೀಯ ದರ್ಜೆಯ ಸಾಹಿತ್ಯವೆಂದು ಪರಿಗಣಿತವಾಗದೆ, ಏಕೆ ಜನಪ್ರಿಯವಾಗಿದೆ, ಹೇಗೆ ಜನಪ್ರಿಯವಾಗಿದೆ, ಅವರ ಬರಹದಲ್ಲಿ ಜನಪ್ರಿಯತೆಯ ಅಂಶಗಳಾವುವು ಅವರ ಸಾಹಿತ್ಯದಲ್ಲಿ ಜನಪ್ರಿಯತೆ ಮತ್ತು ಗಂಭೀರ ಚಿಂತನೆಗಳು ಹೇಗೆ ಸಮನ್ವಯವಾಗಿವೆ, ಎಂಬುದನ್ನು ಒಟ್ಟು ಸಾಹಿತ್ಯದ ಮೂಲಕ ಗುರುತಿಸಿಕೊಳ್ಳಲಾಗುವುದು. ಅನುಷಂಗಿಕವಾಗಿ ಸಾಹಿತ್ಯ ಮತ್ತು ಜನಪ್ರಿಯತೆಯ ಅಂತಃಸಂಬಂಧಗಳು ಸಾಹಿತ್ಯದಲ್ಲಿ ಜನಪ್ರಿಯತೆಯ ಅಂಶಗಳು, ಜನಪ್ರಿಯ ಸಾಹಿತ್ಯದ ಪರಿಕಲ್ಪನೆಯ ಚರ್ಚೆಗಳೂ ಬರುತ್ತವೆ. ಅಧ್ಯಯನದಲ್ಲಿ ಮುಖ್ಯವಾಗಿ 'ಜನಪ್ರಿಯ ಸಾಹಿತ್ಯವೆಂಬ' ಒಪ್ಪಿತ ಪರಿಕಲ್ಪನೆಗೆ ಬದಲಾಗಿ ಸಾಹಿತ್ಯ ಮತ್ತು ಜನಪ್ರಿಯತೆ ಎಂಬ ಪರಿಕಲ್ಪನೆಯೇ ಪ್ರಧಾನವಾಗಿ ಚರ್ಚಿತವಾಗಿದೆ. ಇವುಗಳ ಮೂಲಕ ಜಿ.ಆರ್. ಲಕ್ಷ್ಮಣರಾವ್ ಅವರ ಜನಪ್ರಿಯತೆಯನ್ನು ಈ ನೆಲೆಯಲ್ಲಿಯೇ ಗುರುತಿಸುವುದಕ್ಕೆ ಗಮನ ನೀಡಲಾಗುವುದು.

ಇದಕ್ಕೆ ಬೇಕಾದ ಪ್ರಧಾನ ಆಕರಗಳಾದ ಜಿ.ಆರ್. ಲಕ್ಷ್ಮಣರಾವ್ ಅವರ ಈವರೆಗಿನ ಒಟ್ಟಾರೆ ಬರಹವನ್ನು ಬಳಸಿಕೊಳ್ಳಲಾಗಿದೆ. ಜನಪ್ರಿಯ ಸಾಹಿತ್ಯದ ಬಗ್ಗೆ ದುರ್ಗಾ ಪ್ರವೀಣ್‌ರವರ ಅಪ್ರಕಟಿತ ಪಿಎಚ್‌ಡಿ ಪ್ರಬಂಧ, ಜನಪ್ರಿಯ ಸಾಹಿತ್ಯದ ಬಗ್ಗೆ ಸಿ.ಎನ್. ರಾಮಚಂದ್ರ, ಕೆ.ವಿ.ನಾರಯಣ, ಎನ್.ಎಸ್.ಚಿದಂಬರರಾವ್, ಭಾಸ್ಕರರಾವ್, ರಹಮತ ತರಿಕೆರೆ, ರಾಜೇಂದ್ರ ಚೆನ್ನಿ ಮೊದಲಾದವರ ಬರಹದ ಮುಖ್ಯಾಂಶಗಳನ್ನು ಕ್ರೂಢೀಕರಿಸಲಾಗುವುದು. ಈ ಕ್ಷೇತ್ರಕ್ಕೆ ಸಂಬಂಧಿಸಿದ ಇತರೆ ಗ್ರಂಥಗಳನ್ನು ಅನುಷಂಗಿಕ ಆಕರಗಳಾಗಿ ಬಳಸಿಕೊಂಡು ಅಧ್ಯಯನ ಕೈಗೊಳ್ಳಲಾಗುವುದು.

# ಅಧ್ಯಾಯ-೨

## ಪ್ರಸ್ತಾವನೆ-ವಿಷಯ ಪ್ರವೇಶ

೨.೧ ಪ್ರಸ್ತುತ ಕ್ಷೇತ್ರಕ್ಕೆ ಸಂಬಂಧಿಸಿದ ಇದುವರೆಗಿನ ಅಧ್ಯಯನಗಳ ಸಮೀಕ್ಷೆ

೨.೨ ಬಿ.ಆರ್. ಲಕ್ಷ್ಮಣ್‌ರಾವ್ ಅವರ ಜೀವನ ಮತ್ತು ಸಾಹಿತ್ಯದ ಸ್ಥೂಲ ಪರಿಚಯ

ಜನಪ್ರಿಯತೆ ಎಂಬುದು ಸಾಹಿತ್ಯದಲ್ಲಿ ಸಾಪೇಕ್ಷವಾದುದು. ಸಾಹಿತ್ಯಕ್ಕೂ ಜನಪ್ರಿಯತೆಗೂ ಅಂತ:ಸಂಬಂಧವಿದೆ. ಜನಪ್ರಿಯತೆ ಎಂಬುದು ಎಲ್ಲಾ ಕಾಲದ ಎಲ್ಲಾ ಬಗೆಯ ಸಾಹಿತ್ಯಕ್ಕೂ ಅನ್ವಯವಾಗುತ್ತದೆ. ಸಾಹಿತ್ಯದ ರಚನೆಯ ಹಿಂದಿನ ಉದ್ದೇಶದಲ್ಲಿ ಜನಪ್ರಿಯತೆಯು ಮುಖ್ಯವಾಗಿರುತ್ತದೆ. ಇದು ಸಾಹಿತ್ಯದಲ್ಲಿನ ಸದಾಶಯವು ಆಗಿದೆ. ಗ್ರಂಥಸ್ಥ ಸಾಹಿತ್ಯಕ್ಕೆ ಮತ್ತು ಮೌಖಿಕ ಸಾಹಿತ್ಯವಾದ ಜಾನಪದ ಸಾಹಿತ್ಯಕ್ಕೂ ಈ ಮಾತು ಅನ್ವಯವಾಗುತ್ತದೆ. ಜನಪ್ರಿಯತೆ ಎಂದರೆ ಜನರಿಗೆ ಪ್ರಿಯವಾಗುವ ಅಂಶಗಳು ಜನಪ್ರಿಯತೆಯ ಅಂಶಗಳಾಗುತ್ತವೆ. ಸಾಹಿತ್ಯದಲ್ಲಿ ಪ್ರತಿಪಾದಿತವಾಗುವ ಅಂಶಗಳು ಜನಪ್ರಿಯತೆಗೆ ಕಾರಣವೆಂಬುದು ಸ್ಪಷ್ಟವಾಗುತ್ತದೆ. ಆದರೆ ಯಾವ ಅಂಶಗಳು ಜನರಿಗೆ ಇಷ್ಟವಾಗುತ್ತವೆಂದು ನಿಖರವಾಗಿ ಗುರುತಿಸುವುದು ಕಷ್ಟ ಸಾಧ್ಯ. ಜನಪ್ರಿಯತೆಯನ್ನು ನಿರ್ಧರಿಸುವ ಮಾನದಂಡಗಳ ಬಗ್ಗೆ ಖಚಿತತೆ ಸಿಗುವುದಿಲ್ಲ. ಆದರೂ ಕೆಲವೊಂದು ಅಂಶಗಳು ಸಾಮಾನ್ಯವಾಗಿ ಜನಪ್ರಿಯತೆಗೆ ಕಾರಣವಾಗುತ್ತವೆಂದು ಹೇಳಬಹುದು. ಜನಪ್ರಿಯತೆಗೆ ಕಾರಣವಾದ ಕೆಲವೊಂದು ಅಂಶಗಳನ್ನು ಗುರುತಿಸಿಕೊಂಡಿದ್ದರೂ ಅವು ಎಲ್ಲಾ ಕಾಲಕ್ಕೂ ಎಲ್ಲರಿಗೂ ಮೆಚ್ಚುಗೆಯಾಗುವ ಅಂಶಗಳಾಗುತ್ತವೆ ಎಂದು ಹೇಳಲಾಗದು. ಜನಪ್ರಿಯತೆ ಎಂಬುದು ಒಂದೇ ರೀತಿಯಾಗಿರದೆ ಕಾಲದಿಂದ ಕಾಲಕ್ಕೆ ಬದಲಾಗುತ್ತಿರುತ್ತವೆ. ಆಯಾ ಕಾಲ ಘಟ್ಟದ ಜನರ ಅಭಿರುಚಿಗಳಿಗೆ ಹೊಂದಿಕೊಂಡಂತೆ ಜನಪ್ರಿಯತೆಯು ನಿರ್ಧರಿತವಾಗುತ್ತದೆ.

ಆಧುನಿಕ ಕಾಲದ ಸಾಹಿತ್ಯದ ಸಂದರ್ಭದಲ್ಲಿ ಹೆಚ್ಚು ಚರ್ಚೆಗೆ ಒಳಗಾಗುತ್ತಿರುವ ಜನಪ್ರಿಯ ಸಾಹಿತ್ಯ ಕುರಿತ ಚಿಂತನೆಯಲ್ಲಿ ಸಾಹಿತ್ಯದಲ್ಲಿನ ಜನಪ್ರಿಯತೆಯನ್ನು ಕುರಿತಂತೆ ವ್ಯಾಪಕವಾದ ಚರ್ಚೆ ನಡೆಯಬೇಕಾಗಿದೆ.

ಸಾಹಿತ್ಯ ಜನಪ್ರಿಯವಾಗಲು ಕಾರಣವೇನು? ಯಾವ ಕವಿಯ ಯಾವ ಸಾಹಿತ್ಯ ಏಕೆ ಜನಪ್ರಿಯತೆ ಗಳಿಸಿವೆ, ಹೇಗೆ ಜನಪ್ರಿಯವಾಗಿದೆ ಎಂಬುದನ್ನು ಗುರುತಿಸುವ ನಿಟ್ಟಿನಲ್ಲಿ ಪ್ರತ್ಯೇಕವಾದ ಚರ್ಚೆಗಳು ಅಷ್ಟಾಗಿ ನಡೆದಂತಿಲ್ಲ. ಕವಿ ಮತ್ತು ಸಾಹಿತ್ಯವನ್ನು ಕುರಿತ ಚಿಂತನೆಗಳು ನಡೆಯುವುದರ ಮೂಲಕ ಜನಪ್ರಿಯತೆಯ ಬಗ್ಗೆ ಸ್ಪಷ್ಟವಾದ ದಾರಿ ಕಂಡುಕೊಳ್ಳಲು ಸಾಧ್ಯವಾಗಬಹುದು. ಜನಪ್ರಿಯತೆಯ

ಬಗೆಗಿನ ಚರ್ಚೆಗಳು ಭಿನ್ನವಾದ ನೆಲೆಗಳಲ್ಲಿ ಸಾಗಿದಾಗ ಜನಪ್ರಿಯತೆಯ ವಿವಿಧ ಆಯಾಮಗಳಲ್ಲಿ ಗೋಚರವಾಗುತ್ತದೆ. ಸಾಹಿತ್ಯ ಮತ್ತು ಜನಪ್ರಿಯತೆ ಎಂಬ ನೆಲೆಯಲ್ಲಿ ವಿವಿಧ ಕಾಲಘಟ್ಟದ ಕವಿ, ಕೃತಿ, ಸಾಹಿತ್ಯದ ವಿವಿಧ ಪ್ರಕಾರಗಳ ಬಗ್ಗೆ ಚರ್ಚೆಯಾಗಬೇಕಾಗಿದೆ. ಈ ರೀತಿಯ ಚರ್ಚೆಗಳು ನಡೆಯುವ ಮೂಲಕ ಅಂತಹ ಕವಿಗಳ ಜನಪ್ರಿಯತೆಯ ಮರ್ಮವೇನು? ಹೇಗೆ ಅವರ ಕೃತಿಗಳು ಜನಪ್ರಿಯತೆ ಗಳಿಸಿವೆ? ಅವರ ಸಾಹಿತ್ಯದಲ್ಲಿನ ಜನಪ್ರಿಯತೆಯ ಅಂಶಗಳಾವುವು ಎಂಬುದನ್ನು ಗುರುತಿಸುವುದರೊಂದಿಗೆ ಅಂತಹ ಕವಿ ಮತ್ತು ಅವರ ಕೃತಿಗಳಿಗೂ ಪ್ರಾಶಸ್ತ್ಯವೂ ಲಭಿಸುತ್ತದೆ. ಕೃತಿಗಳ ಅನನ್ಯತೆಗಳನ್ನು ಗುರುತಿಸುವುದು ಸಾಹಿತ್ಯದ ವೈಶಿಷ್ಟ್ಯಗಳನ್ನು ಕಂಡುಕೊಳ್ಳುವ ಮೂಲಕ ಅವುಗಳ ಮಹತ್ವ ತಿಳಿಯಬಹುದಾಗಿದೆ. ಅಪಾರ ಸಂಖ್ಯೆಯ ಓದುಗರನ್ನು ಗಳಿಸಿರುವ ಕವಿ–ಕೃತಿಯ ಮಹತ್ವ ತಿಳಿಯುವುದರ ಜೊತೆಗೆ ಜನಪ್ರಿಯತೆಯನ್ನು ಕುರಿತ ಚಿಂತನೆಗೂ ಸ್ಪಷ್ಟತೆ ಸಿಗುತ್ತದೆ. ಹಾಗಾಗಿ ಜನಪ್ರಿಯ ಕವಿಗಳೆಂದು ಗುರುತಿಸಿಕೊಂಡಿರುವ ಕವಿಗಳನ್ನು ಕುರಿತ ಅಧ್ಯಯನ ಚರ್ಚೆ ಪ್ರಸ್ತುತವೆನಿಸುತ್ತದೆ. ಸಾಹಿತ್ಯ ಮತ್ತು ಜನಪ್ರಿಯತೆಯ ಅಂತಃಸಂಬಂಧ, ಸಾಹಿತ್ಯದಲ್ಲಿ ಜನಪ್ರಿಯತೆಯ ಅಂಶಗಳು, ಜನಪ್ರಿಯ ಸಾಹಿತ್ಯ ಪರಿಕಲ್ಪನೆ ಚರ್ಚೆಯು ಸೇರಿಕೊಳ್ಳುತ್ತದೆ. 'ಸಾಹಿತ್ಯ ಮತ್ತು ಜನಪ್ರಿಯತೆ' ಈ ಕ್ಷೇತ್ರಕ್ಕೆ ಸಂಬಂದಿಸಿದ ಅಧ್ಯಯನ ಸಮೀಕ್ಷೆಯ ಮೂಲಕ ಜನಪ್ರಿಯ ಕವಿಗಳೆಂದು ಗುರುತಿಸಿಕೊಂಡಿರುವ ಬಿ.ಆರ್.ಲಕ್ಷ್ಮಣ ರಾವ್ ಅವರ ಬದುಕು ಬರಹದ ಸ್ಥೂಲ ಪರಿಚಯದೊಂದಿಗೆ ಪ್ರಾರಂಭಿಸಲಾಗಿದೆ.

## ೨.೧ ಪ್ರಸ್ತುತ ಕ್ಷೇತ್ರಕ್ಕೆ ಸಂಬಂಧಿಸಿದ ಇದುವರೆಗಿನ ಅಧ್ಯಯನದ ಸಮೀಕ್ಷೆ

ಪ್ರಸ್ತುತ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಇದುವರೆಗಿನ ಅಧ್ಯಯನದ ಸಮೀಕ್ಷೆ ಅಂದರೆ ಸಾಹಿತ್ಯ ಮತ್ತು ಜನಪ್ರಿಯತೆ, ಬಿ.ಆರ್. ಲಕ್ಷ್ಮಣರಾವ್ ಅವರ ಸಾಹಿತ್ಯವನ್ನು ಕುರಿತಂತೆ ಎರಡು ಕ್ಷೇತ್ರಗಳಲ್ಲೂ ಅಷ್ಟೇನೂ ಆಳವಾದ ಅಧ್ಯಯನಗಳು ನಡೆದಿಲ್ಲವೆಂದೇ ಹೇಳಬಹುದು. ಇದಕ್ಕೆ ಪೂರಕವಾಗಿ ಜನಪ್ರಿಯ ಸಾಹಿತ್ಯ ಜನಪ್ರಿಯ ಕಲೆ, ಜನಪ್ರಿಯ ಕಾದಂಬರಿ, 'ಜನಪ್ರಿಯ ಕವಿ' ಎಂಬುದನ್ನು ಕುರಿತು ಆಧುನಿಕ ವಿಮರ್ಶೆಯು ನಿರ್ವಚಿಸಿಕೊಂಡು ಚರ್ಚಿಸುವಾಗ ಲೇಖಕರು ತಮ್ಮ ಲೇಖನಗಳ ಮೂಲಕ ವಿಮರ್ಶಾತ್ಮಕ ರೀತಿಯ ಚಿಂತನೆಗಳನ್ನು ನಡೆಸಿರುವುದನ್ನು ಕಾಣಬಹುದು. ಕೆ.ವಿ. ನಾರಾಯಣ, ಎಚ್.ಎಸ್. ರಾಘವೇಂದ್ರರಾವ್, ರಾಜೇಂದ್ರ ಚೆನ್ನಿ, ಸಿ.ಎನ್. ರಾಮಚಂದ್ರನ್, ಎಲ್.ಎಸ್. ಶೇಷಗಿರಿ ರಾವ್, ಯು.ಆರ್. ಅನಂತಮೂರ್ತಿ, ರಹಮತ್ ತರಿಕೆರೆ, ಬಿ.ಬಾಸ್ಕರ ರಾವ್, ಕಮಲಾ ಹಂಪನಾ. ಎನ್.ಎಸ್. ಚಿದಂಬರರಾವ್, ಶೇಷನಾರಾಯಣ ಮೊದಲಾದವರು ಬಿಡಿ ಬಿಡಿ ಲೇಖನಗಳಲ್ಲಿ ಜನಪ್ರಿಯ ಸಾಹಿತ್ಯವನ್ನು ಕುರಿತ ವಿಮರ್ಶಾ ಲೇಖನಗಳನ್ನು ಕಾಣಬಹುದು. ಅವುಗಳಲ್ಲಿ ಜನಪ್ರಿಯ ಸಾಹಿತ್ಯ ಕುರಿತ ಪರಿಕಲ್ಪನೆಗೆ ಸಂಬಂಧಿಸಿದ ತಾತ್ವಿಕ ಅಂಶಗಳನ್ನು ನೀಡಿದ್ದಾರೆ. ಜನಪ್ರಿಯ ಲೇಖಕರೆಂದು ಪರಿಗಣಿಸಲಾಗಿರುವ ಕೆಲವು ಬರಹಗಾರರ ಬದುಕು ಸಾಹಿತ್ಯವನ್ನು ಕುರಿತಂತೆ ಅಲ್ಲಲ್ಲಿ ಎಂ.ಫಿಲ್.

ಪಿ.ಎಚ್.ಡಿ. ಅಧ್ಯಯನಗಳು ನಡೆದಿವೆ. ಬಿಡಿ ಬಿಡಿ ಲೇಖನಗಳು ಪ್ರಕಟವಾಗಿವೆ. ೧೯೮೨ರ ಕೈವಾರ ಸಾಹಿತ್ಯ ಸಮ್ಮೇಳನದಲ್ಲಿ 'ಜನಪ್ರಿಯ ಸಾಹಿತ್ಯ ಮತ್ತು ಅಭಿರುಚಿ' ಎಂಬ ಗೋಷ್ಠಿ ನಡೆದಿದ್ದಿತು. ಕರ್ನಾಟಕ ಸಾಹಿತ್ಯ ಅಕಾಡಮಿಯು ೧೯೯೩ರಲ್ಲಿ ತರೀಕೆರೆಯಲ್ಲಿ 'ಕನ್ನಡದಲ್ಲಿ ಜನಪ್ರಿಯ ಸಾಹಿತ್ಯ'. ಎಂಬ ವಿಚಾರ ಸಂಕಿರಣ ಏರ್ಪಡಿಸಿದ್ದಿತು. ಹಾಗೆಯೇ ಕಾಲೇಜು ಮಟ್ಟದಲ್ಲಿ ನಡೆಸುವ ರಾಜ್ಯಮಟ್ಟದ ವಿಚಾರಸಂಕಿರಣಗಳಲ್ಲಿ ಪ್ರಬಂಧ ಮಂಡನೆ ಮಾಡಿದ್ದಾರೆ. ಮೈಸೂರಿನ ಜೆ.ಎಸ್.ಎಸ್. ಮಹಿಳಾ ಕಾಲೇಜಿನಲ್ಲಿ ೨೦೦೯ ರಲ್ಲಿ 'ಕನ್ನಡ ಸಾಹಿತ್ಯದಲ್ಲಿ ಮಹಿಳಾ ಸಂವೇದನೆಗಳು' ಎಂಬ ವಿಷಯದಲ್ಲಿ ಶಿವರಾಮು ಕಾಡನ ಕುಪ್ಪೆ ಯವರು 'ಜನಪ್ರಿಯ ಸಾಹಿತ್ಯ ಮತ್ತು ಮಹಿಳಾ ಸಾಹಿತ್ಯ' ಎಂಬ ವಿಷಯದ ಬಗ್ಗೆ ಪ್ರಬಂಧ ಮಂಡನೆ ಮಾಡಿದ್ದರು. ಎಂ.ಫಿಲ್, ಪಿ.ಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಸಿದ ಅಧ್ಯಯನದ ಅಪ್ರಕಟಿತ ಪ್ರಬಂಧಗಳಲ್ಲಿ 'ಆಧುನಿಕ ಕನ್ನಡ ಸಾಹಿತ್ಯ ಹಾಗೂ ಜನಪ್ರಿಯತೆಯ ಪ್ರಶ್ನೆ' ಎಂಬ ವಿಷಯದಲ್ಲಿನ ದುರ್ಗಾಪ್ರವೀಣರವರು ಅಪ್ರಕಟಿತ ಪ್ರಬಂಧವನ್ನು, ಹಾ.ಮಾ.ನಾಗಾರ್ಜುನ ಅವರು 'ತ.ಪು.ವೆಂಕಟರಾಮ ಕಾದಂಬರಿಗಳಲ್ಲಿ ಜನಪ್ರಿಯತೆಯ ಅಂಶಗಳು' ಎಂಬ ಪ್ರಕಟಿತ ಪ್ರಬಂಧ ಬಿಟ್ಟರೆ ಉಳಿದಂತೆ ಹೆಚ್ಚಿನ ಅಧ್ಯಯನಗಳು ಪ್ರಧಾನ ಶಿಸ್ತಾಗಿ ನಡೆದಿಲ್ಲವೆಂದು ಹೇಳಬಹುದು.

ಬಿ.ಆರ್. ಲಕ್ಷ್ಮಣರಾವ್ ಅವರನ್ನು ಕುರಿತಂತೆ ಈವರೆಗೆ ವಿಶೇಷವಾದ ಅಧ್ಯಯನಗಳು ನಡೆದಿಲ್ಲ. ಎಂ.ಫಿಲ್. ಪದವಿಗಾಗಿ ಅವರ ಬಸವರಾಜು 'ಬಿ.ಆರ್.ಲಕ್ಷ್ಮಣರಾವ್ ಕಾವ್ಯದಲ್ಲಿ ಪ್ರೇಮದ ನೆಲೆಗಳು : ಒಂದು ವಿಶ್ಲೇಷಣೆ' ಎಂಬುದನ್ನು ಬಿಟ್ಟರೆ ಅವರನ್ನು ಅವರ ಬರಹದ ಬಗ್ಗೆ ಆಳವಾದ ವಿವೇಚನೆ ನಡೆದಿಲ್ಲ. ಆದರೆ ಬಿ.ಆರ್. ಲಕ್ಷ್ಮಣರಾವ್ ಅವರ ಕಥೆ, ಕಾದಂಬರಿ, ಕಾವ್ಯ ಲೇಖನಗಳ ಬಗೆಗಿನ ವಿಮರ್ಶಾತ್ಮಕ ಬರಹಗಳನ್ನು ಕಾಣಬಹುದು. ಪ್ರಜಾವಾಣಿ, ವಿಜಯಕರ್ನಾಟಕ, ಕನ್ನಡ ಪ್ರಭ, ಉದಯವಾಣಿ, ತರಂಗ, ಮಯೂರ, ಶೂದ್ರ, ಮಲ್ಲಿಗೆ, ಪ್ರಜಾಮತ, ಅಡಿಗರ ಪ್ರಬಂಧ, ಗ್ರಂಥಲೋಕ, ಸಂಕಲನಗಳಲ್ಲಿ ವಿಮರ್ಶಾತ್ಮಕ ನೆಲೆಯಲ್ಲಿ ಬಿಡಿ ಬಿಡಿ ಲೇಖನಗಳು ಪ್ರಕಟವಾಗಿವೆ. ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ, ಗೋಪಾಲಕೃಷ್ಣ ಅಡಿಗ, ಬನ್ನಂಜೆ ಗೋವಿಂದಾಚಾರ್ಯ, ಬಿ.ಬಿ. ರಾವ್, ಸದಾಶಿವ ಎಣ್ಣೆಹೊಳೆ, ರಾಮಚಂದ್ರ ಶರ್ಮ, ಎಚ್.ಎಸ್. ರಾಘವೇಂದ್ರರಾವ್, ಸಿದ್ದಲಿಂಗ ಪಟ್ಟಣಶೆಟ್ಟಿ, ವೇಣುಗೋಪಾಲ ಸೊರಬ, ಟಿ.ಪಿ. ಅಶೋಕ, ಬಂದಗದ್ದೆ ರಾಧಾಕೃಷ್ಣ ರಾಘವೇಂದ್ರ ಪಾಟೀಲ, ಜಿ.ಎಸ್. ಅಮೂರ್ ಸುಮತೀಂದ್ರ ನಾಡಿಗ, ಬಿ. ಜನಾರ್ಧನ ಭಟ್ಟ, ಮಲ್ಲೇಪುರಂ, ಜಿ. ವೆಂಕಟೇಶ; ವಿ.ಗ. ನಾಯಕ, ಮಲ್ಲಿಕಾ–ಘಂಟಿ, ಶ್ರೀನಿವಾಸ ಉಡುಪ, ಸಿ.ಆರ್. ಸಿಂಹ, ಕೆ. ಸತ್ಯಾನಾರಾಯಣ, ಸ. ರಘುನಾಥ ಚಿಂತಾಮಣಿ ಕೂಡ್ಲೆಕೆರೆ, ಈ ಲೇಖಕರು ಲಕ್ಷ್ಮಣರಾವ್ ರವರ ಬರವಣಿಗೆಯ ವೈಶಿಷ್ಟ್ಯಗಳಲ್ಲಿ ಆರೆ ಕೊರೆಗಳನ್ನು ಕುರಿತು ವಿಮರ್ಶಾತ್ಮಕವಾಗಿ ಬರೆದಿದ್ದಾರೆ. ಅವರ ಕಾವ್ಯ, ಕಥೆ, ಕಾದಂಬರಿಯ

ಬಗ್ಗೆಯೂ ಬರೆದಿದ್ದಾರೆ. ಸುಬ್ಬಾಭಟ್ಟರ ಮಗಳೇ, ಭಾವಗೀತೆಗಳನ್ನು ಕುರಿತು ಎಂ.ಎಸ್. ವ್ಯಾಸರಾವ್ ರವರು, 'ಕವಿತೆಯ ಕವಲು ಹಾದಿ' ಎಂಬ ವಿಚಾರದ ಬಗ್ಗೆ ಜಾನಕಿಯವರು 'ಇತ್ಯಾದಿ' ಲೇಖನಗಳ ಬಗ್ಗೆ ಜಿ.ಎಸ್. ರಂಗನಾಥರಾವ್ ರವರು 'ಒಂದಿಷ್ಟು ಪದ್ಯ' ಎಂಬ ವಿಷಯದಲ್ಲಿ ರವಿ ಬೆಳಗೆರೆ 'ಮರೆಯಲ್ಯಾಂಗ' ಎಂಬುದರಲ್ಲಿ ಮಣಿಕಾಂತ, 'ರಾಗರತಿಗೆ' ಎಂಬುದರಲ್ಲಿ ಸಹನಾ 'ಇದು ನನ್ನ ಶೈಲಿ' ಎಂಬುದರಲ್ಲಿ ದುಂಡಿರಾಜ್ Not just pun and Fun- Leafing Through, ಎಂಬ ಎರಡು ವಿಷಯಗಳಲ್ಲಿ ಸುಬ್ರಹ್ಮಣ್ಯರವರು. 'ಲಕ್ಷ್ಮಣರೇಖೆ' ಎಂಬಲ್ಲಿ ಜಾನಕಿ, 'ಪ್ರೀತಿಯ ಅನನ್ಯ' ಎಂಬುದರಲ್ಲಿ ಚಿಂತಾಮಣಿ, ಇವರುಗಳು ಬರೆದಿರುವ ವಿಮರ್ಶಾತ್ಮಕ ಲೇಖನಗಳನ್ನು ಹೊರತುಪಡಿಸಿದರೆ ಬೇರೆಲ್ಲಿಯೂ ಲಕ್ಷ್ಮಣರಾವ್ ಅವರ ಬದುಕು – ಬರಹವನ್ನು ಕುರಿತಂತೆ ಆಳವಾದ ವಿವೇಚನೆ ನಡೆದಿಲ್ಲವೆಂದು ಹೇಳಬಹುದು.

ಸಾಹಿತ್ಯ ಮತ್ತು ಜನಪ್ರಿಯತೆ; ಬಿ.ಆರ್. ಲಕ್ಷಣರಾವ್ ಅವರ ಸಾಹಿತ್ಯ ಈ ಎರಡು ಕ್ಷೇತ್ರಕ್ಕೆ ಸಂಬಂಧಿಸಿದಂತೆ ನಡೆದಿರುವ ಅಧ್ಯಯನ ಎಂದರೆ ಪ್ರಾಸಂಗಿಕವಾಗಿ ವಿಚಾರ ಸಂಕಿರಣ, ಭಾಷಣಗಳಲ್ಲಿ ಲೇಖಕರು ಉಪನ್ಯಾಸಕರು ಉಲ್ಲೇಖಿಸಿರುವುದನ್ನು ಬಿಟ್ಟರೆ ಉಳಿದಂತೆ ಒಂದು ಶಿಸ್ತಾಗಿ ಅಧ್ಯಯನ ನಡೆದಿಲ್ಲ ಎಂದೆ ಹೇಳಬಹುದು.

**೨.೨ ಬಿ.ಆರ್.ಲಕ್ಷ್ಮಣರಾವ್ ಅವರ ಜೀವನ ಮತ್ತು ಸಾಹಿತ್ಯದ ಸ್ಥೂಲ ಪರಿಚಯ:**

ಯಾವುದೇ ಬಗೆಯ ವಿಷಯವನ್ನು ಕುರಿತು ವಿಶೇಷವಾದ ಅಧ್ಯಯನ ಕೈಗೊಳ್ಳುವ ಮೊದಲು ಅದಕ್ಕೆ ಸಂಬಂಧಿಸಿದ ಪೂರ್ವಪರ ವಿಷಯಗಳನ್ನು ತಿಳಿದುಕೊಳ್ಳಬೇಕಾಗಿರುವುದು ಬಹಳ ಮುಖ್ಯವಾದುದು. ಯಾವುದೇ ವಸ್ತು ವಿಷಯ, ವ್ಯಕ್ತಿ, ಬರವಣಿಗೆ ಹೀಗೆ ಎಲ್ಲಾ ಬಗೆಯ ವಿಷಯಗಳಿಗೂ ಈ ಮಾತು ಅನ್ವಯವಾಗುತ್ತವೆ. ವ್ಯಕ್ತಿಯ, ವಸ್ತು ವಿಷಯದ ಬಗ್ಗೆ ತಿಳಿಯದೆ ಅವರನ್ನು ಕುರಿತ ವಿಶೇಷ ಅಧ್ಯಯನ ಕೈಗೊಳ್ಳುವುದು ಕ್ರಮಬದ್ಧವಾದ ಹಾಗೂ ಪರಿಪೂರ್ಣ ಮಾರ್ಗವು ಅಲ್ಲ, ಅದೇ ರೀತಿ ಒಬ್ಬ ಸಾಹಿತಿಯ ಬಗ್ಗೆ, ಅವರ ಬರವಣಿಗೆಯನ್ನು ಕುರಿತು ವಿಶೇಷವಾದ ಅಧ್ಯಯನ ಕೈಗೊಳ್ಳುವ ಮುನ್ನ ಆ ಕವಿ ಇಲ್ಲವೆ ಸಾಹಿತಿಗೆ ಸಂಬಂಧಿಸಿದ ವಿಷಯಗಳನ್ನು ಅರಿತುಕೊಳ್ಳಬೇಕಾಗುತ್ತದೆ. ಸಾಹಿತಿಯಾಗಿ ಬೆಳೆಯುವುದಕ್ಕೆ ಅವರ ಬದುಕಿನಲ್ಲಿ ವ್ಯಕ್ತಿಗಳ, ಪರಿಸರದ, ಸ್ವಂತ ಆಸಕ್ತಿ ಇವೇ ಮುಂತಾದ ಅಂಶಗಳ ಪ್ರಭಾವವಿರುತ್ತದೆ. ಆ ಕವಿಗೆ ಸಂಬಂಧಿಸಿದ ಜೀವನ, ಕೌಟುಂಬಿಕ ವಾತಾವರಣ, ಆಸಕ್ತಿ, ಪ್ರೇರಣೆ, ಪ್ರಭಾವಗಳ ಬಗ್ಗೆ ಅರಿಯಬೇಕು. ಅವರು ಸಾಹಿತ್ಯ ಕ್ಷೇತ್ರಕ್ಕೆ ಬರುವುದಕ್ಕೆ ದೊರೆತ ಪ್ರೇರಣೆ, ಪ್ರಭಾವಗಳೇನು ಅವರ ಬರವಣಿಗೆಯ ಮೇಲೆ ಪ್ರಭಾವ ಬೀರಿದ ವ್ಯಕ್ತಿಗಳಾರು, ಅದಕ್ಕೆ ದೊರೆತಂತಹ ಪೂರಕ ವಾತಾವರಣಗಳಾವುವು. ಇವೇ ಮೊದಲಾದ ವಿಷಯಗಳ ಬಗ್ಗೆ ಸ್ಥೂಲವಾಗಿ ತಿಳಿದುಕೊಂಡಾಗ ಮಾತ್ರ ಅವರನ್ನು ಕುರಿತ ಸಮಗ್ರ ಅಧ್ಯಯನ ಕೈಗೊಳ್ಳಲು ಸಾಧ್ಯವಾಗುತ್ತದೆ. ಅದಿಲ್ಲದೆ ಹೋದರೆ

ಅಧ್ಯಯನ ಪರಿಪೂರ್ಣವಾಗಲಾರದು. ಇವುಗಳ ಪರಿಚಯದ ಮೂಲಕ ಅವರ ಒಟ್ಟು ಬರವಣಿಗೆಯ ವೈಶಿಷ್ಟ್ಯತೆಗಳನ್ನು ಗುರುತಿಸಿಕೊಳ್ಳಬಹುದು. ಅದಕ್ಕಾಗಿಯೇ ಬಿ.ಆರ್.ಲಕ್ಷ್ಮಣರಾವ್ ಅವರ ಜೀವನ, ಅವರು ಸಾಹಿತಿಯಾಗಿ ಬೆಳೆದು ಬಂದ ಬಗೆ ಹೇಗೆ ? ಸಾಹಿತಿಯಾಗಿ ರೂಪು ತಳೆಯಲು ಪ್ರೇರಣೆ ನೀಡಿದ ಪ್ರಮುಖ ವ್ಯಕ್ತಿಗಳಾರು? ಅವರಿಂದ ಅವರು ಹೇಗೆ ಪ್ರಭಾವಿತರಾಗಿದ್ದಾರೆ. ಎಂಬ ವಿಷಯಗಳ ಬಗ್ಗೆ ತಿಳಿದುಕೊಳ್ಳುವುದು ಇಲ್ಲಿ ಮುಖ್ಯವಾದ ಮಾರ್ಗವಾಗಿದೆ.

**ಜೀವನ ಪರಿಚಯ:-**

ಬೀರೂರು ರಾಜರಾವ್ ಲಕ್ಷ್ಮಣರಾವ್ ಅವರು ಸಾಂಪ್ರದಾಯಿಕ ತುಂಬು ಸಂಸಾರದ ಹಿನ್ನೆಲೆಯಿಂದ ಬಂದವರು, ಕೋಲಾರ ಜಿಲ್ಲೆಯ ಚೀಮಂಗಲದಲ್ಲಿ ೦೯.೦೯.೧೯೪೬ ರಲ್ಲಿ ಜನಿಸಿದರು. ತಂದೆ ಬಿ.ಆರ್.ರಾಜರಾವ್, ತಾಯಿ ವೆಂಕಟಲಕ್ಷ್ಮಮ್ಮ, ನಾಲ್ಕು ಗಂಡು ಮಕ್ಕಳು, ಐದು ಹೆಣ್ಣುಮಕ್ಕಳಲ್ಲಿ ಹಿರಿಯವರೇ ಬಿ.ಆರ್.ಲಕ್ಷ್ಮಣರಾವ್ ಇವರ ತಂದೆಯವರು ವೃತ್ತಿಯಲ್ಲಿ ಫೋಟೋಗ್ರಾಫರ್ ಆಗಿದ್ದರು. ತಮ್ಮ ಮಗ ತಮ್ಮಂತೆಯೇ ಇದೇ ವೃತ್ತಿಯಲ್ಲಿ ಮುಂದೆ ಬರಬೇಕೆಂದು ಬಯಸಿದರು. ಲಕ್ಷ್ಮಣರಾವ್ ಅವರಿಗೆ ಐದು ವರ್ಷವಾಗಿದ್ದಾಗ ಅವರ ತಂದೆ ಸಂಸಾರ ಸಮೇತ ಚಿಂತಾಮಣಿಗೆ ಬಂದು ನೆಲೆಸಿದರು. ಹಾಗಾಗಿ ಲಕ್ಷ್ಮಣರಾವ್ ಅವರ ಪ್ರೌಢಶಾಲೆಯವರೆಗಿನ ವಿದ್ಯಾಭ್ಯಾಸ ಚಿಂತಾಮಣಿಯಲ್ಲೆ ನಡೆಯಿತು.

ಉತ್ತಮ ಅಂಕಪಡೆದು ಉತ್ತೀರ್ಣರಾದಾಗ ಇಷ್ಟವಿಲ್ಲದಿದ್ದರೂ ಸ್ನೇಹಿತರ ಒತ್ತಾಯಕ್ಕೆ ಮಣಿದು ಮಗನನ್ನು ಬೆಂಗಳೂರಿಗೆ ಓದುವುದಕ್ಕೆ ಕಳುಹಿಸಲು ಒಪ್ಪದೆ ತಮ್ಮ ತಂಗಿಯ ಮನೆಯಲ್ಲಿ ಬಿಟ್ಟು ಓದಲೆಂದು ದಾವಣಗೆರೆಯ ಡಿ.ಆರ್.ಎಂ.ಕಾಲೇಜಿಗೆ ಸೇರಿಸಿದರು. ಅಲ್ಲಿ ಲಕ್ಷ್ಮಣರಾವ್ ರವರು ವಿಜ್ಞಾನ ವಿಷಯದಲ್ಲಿ ಪಿ.ಯು.ಸಿ. ಮುಗಿಸಿ ಬಿ.ಎಸ್ಸಿಗೆ ಸೇರಿದರು ಆಸಕ್ತಿಯಿಲ್ಲದ ಕಾರಣ ಬಿ.ಎಸ್ಸಿ ಪ್ರಥಮ ವರ್ಷದಲ್ಲೆ ಅನುತ್ತೀರ್ಣರಾದರು.

ದ್ವಿತೀಯ ಬಿ.ಎಸ್ಸಿ ಓದುತ್ತಿರುವಾಗ ಡಿ.ಆರ್.ಎಂ. ಕಾಲೇಜಿನ ಪ್ರಾಧ್ಯಾಪಕರಾದ ಪ್ರಹ್ಲಾದರಾವ್‌ರವರು ಇವರಲ್ಲಿನ ಸಾಹಿತ್ಯದ ಆಸಕ್ತಿಯನ್ನು ಕಂಡು ಬಿ.ಎಸ್ಸಿ ಬಿಟ್ಟು ಬಿ.ಎ.ಗೆ ಸೇರುವಂತೆ ಒತ್ತಾಯ ಮಾಡಿದರು. ಅದರಿಂದಾಗಿ ಅವರು ದಾವಣಗೆರೆಯನ್ನು ಬಿಟ್ಟು ಬಂದು, ಬೆಂಗಳೂರಿನ ಸರ್ಕಾರಿ ಕಲಾ ವಿಜ್ಞಾನ ಕಾಲೇಜಿನಲ್ಲಿ (ಗ್ಯಾಸ್ ಕಾಲೇಜು) ಬಿ.ಎ.ಗೆ ಸೇರಿದರು. ಇಲ್ಲಿ ಆಂಗ್ಲ ಭಾಷೆಯನ್ನು ಐಚ್ಛಿಕವಾಗಿ ತೆಗೆದುಕೊಂಡು ಓದಿ ಉತ್ತಮ ಅಂಕಗಳನ್ನು ಪಡೆದುಕೊಂಡು ಉತ್ತೀರ್ಣರಾದ, ಇಬ್ಬರು ವಿದ್ಯಾರ್ಥಿಗಳಲ್ಲಿ ಬಿ.ಆರ್.ಲಕ್ಷ್ಮಣರಾವ್ ಒಬ್ಬರು. ೧೯೬೭ ರಲ್ಲಿ ಬಿ. ಎ. ಪದವಿ ಪಡೆದುಕೊಂಡರು.

ಉನ್ನತ ವ್ಯಾಸಂಗ ಮಾಡುವ ಆಸೆಯಿದ್ದರೂ ತಂದೆಯವರು ಇನ್ನು ಮುಂದೆ ಓದಿಸುವುದಿಲ್ಲವೆಂದು ತಿಳಿದು ಲಕ್ಷ್ಮಣರಾವ್ ಅವರು ಚಿಂತಾಮಣಿಗೆ ಬಂದರು. ಮೊದಲಿಗೆ ಡಿಲಿಜೆನ್ಸ್ ಶಾಲೆಯಲ್ಲಿ ಶಿಕ್ಷಕರಾಗಿ ವೃತ್ತಿ ಜೀವನ ಪ್ರಾರಂಭಿಸಿದರು. ಅದರೊಂದಿಗೆ ಟುಟೋರಿಯಲ್ ತರಗತಿಗಳನ್ನು

ನಡೆಸುತ್ತಾ ಉತ್ತಮ ಶಿಕ್ಷಕರೆಂದು ಗುರುತಿಸಿಕೊಂಡರು. ಜೊತೆಗೆ ಎಂ.ಎ., ಬಿ.ಎಡ್ ಪದವಿಗಳನ್ನು ಗಳಿಸಿಕೊಂಡರು. ಶಿಕ್ಷಕ ವೃತ್ತಿಯ ಜೊತೆಗೆ ಸಾಹಿತ್ಯ ಕ್ಷೇತ್ರದಲ್ಲೂ ತಮ್ಮನ್ನು ತೊಡಗಿಸಿಕೊಂಡರು.

ಲಕ್ಷ್ಮಣರಾವ್ ಅವರ ಸಾರ್ಥಕ ಬದುಕಿನಲ್ಲಿ ಗಿರಿಜಾ ಜೊತೆಗಾತಿಯಾದರು. ಇಬ್ಬರು ಗಂಡು ಮಕ್ಕಳು ಒಬ್ಬ ಮಗ ಹರ್ಷ ಡಾಕ್ಟರಾಗಿದ್ದಾರೆ. ಮತ್ತೊಬ್ಬ ಮಗ ಸಂತೋಷ್ ಇಂಜಿನಿಯರ್ ಆಗಿದ್ದಾರೆ. ತಮ್ಮ ತುಂಬು ಸಂಸಾರದ ಸೋದರ–ಸೋದರಿಯರ ಜೊತೆ ಪ್ರೀತಿ ಬಾಂಧವ್ಯದಿಂದ ಕೂಡಿಕೊಂಡು ಪರಿಪೂರ್ಣ ಬದುಕಿನ ಸಂತೃಪ್ತ ಜೀವನ ಸಾಗಿಸುತ್ತಿದ್ದಾರೆ. ಸದಾ ಹಸನ್ಮುಖಿಗಳಾಗಿ ಲವಲವಿಕೆಯಿಂದ ಕೂಡಿದ ನೆಮ್ಮದಿಯ ಬದುಕನ್ನು ಸಾಗಿಸುತ್ತಾ ಬೆಂಗಳೂರಿನಲ್ಲಿ ವಾಸಿಸುತ್ತಿದ್ದಾರೆ.

**ಸಾಹಿತಿಯಾಗಿ ಬೆಳೆದು ಬಂದ ಬಗೆ**

ಬಿ.ಆರ್.ಲಕ್ಷ್ಮಣರಾವ್ ಅವರ ಸಾಹಿತ್ಯ ಬದುಕಿನ ಬಗ್ಗೆ ಹೇಳುವುದಾದರೆ ಅವರೇ ಹೇಳಿಕೊಳ್ಳುವಂತೆ ಅವರ ಮನೆಯಲ್ಲಿ ಸಾಹಿತ್ಯದ ವಾತಾವರಣವೇನೂ ಇರಲಿಲ್ಲ. ತಂದೆಯವರಿಗೆ ಒಳ್ಳೆಯ ಶಾರೀರವಿತ್ತು. ಜೊತೆಗೆ ಪಿಟೀಲು ನುಡಿಸುತ್ತಿದ್ದರು. ಮನೆಯಲ್ಲಿ ತಕ್ಕ ಮಟ್ಟಿಗೆ ಸಂಗೀತದ ವಾತಾವರಣವಿತ್ತು. ಸಿನಿಮಾ ಪ್ರೇಮಿಯಾಗಿದ್ದ ಲಕ್ಷ್ಮಣರಾವ್ ಅವರಿಗೆ ಹಾಡುವ ಹವ್ಯಾಸವಿತ್ತು. ಇವುಗಳೆಲ್ಲ ಅವರ ಕವಿ ಮನಸ್ಸಿಗೆ ಪ್ರೇರಣೆಯಾದವು. ಗುರುಗಳು ಸ್ನೇಹಿತರ ಪ್ರೋತ್ಸಾಹ ಒತ್ತಾಸೆಗಳು ಇದಕ್ಕೆ ಪೂರಕವಾಗಿದ್ದವು.

ಲಕ್ಷ್ಮಣರಾವ್ ಅವರಲ್ಲಿ ಸಾಹಿತ್ಯದ ಆಸಕ್ತಿ ಪ್ರಾರಂಭವಾದುದು ಅವರ ತಾಯಿಯವರ ಮೂಲಕವೇ ಎನ್ನಬಹುದು. ತಾಯಿಯವರಿಗೆ ಕಾದಂಬರಿಯನ್ನು ಓದುವ ಹವ್ಯಾಸವಿತ್ತು. ಅದಕ್ಕಾಗಿ ಗ್ರಂಥಾಲಯದಿಂದ ಕಾದಂಬರಿಗಳನ್ನು ತಂದುಕೊಡುತ್ತಿದ್ದರು. ಹಾಗಾಗಿಯೇ ಅವರು ಮಾಧ್ಯಮಿಕ ಶಾಲೆಯಲ್ಲಿದ್ದಾಗಲೇ ಅಡಿಗರ 'ಅನಾಥ' 'ಶ್ರೀರಂಗರ' 'ಅನಾದಿ ಅನಂತ' ತ್ರಿವೇಣಿ, ಅ.ನ.ಕೃ. ಅವರ ಕಾದಂಬರಿಗಳನನ್ನು ಓದುವ ಅವಕಾಶ ಸಿಕ್ಕಿತು. ಲಕ್ಷ್ಮಣರಾವ್ ಅವರಿಗೆ ಮನೆಯ ವಾತಾವರಣ ಅಷ್ಟಾಗಿ ಪ್ರೋತ್ಸಾಹ ನೀಡದೇ ಹೋದರೂ ಅವರಲ್ಲಿರುವ ಹಾಡುಗಾರಿಕೆಯೇ ಅವರ ಕವಿತ್ವಕ್ಕೆ ಮೂಲವಾಗಿತ್ತು ಎಂದು ಗುರುತಿಸಬಹುದು. ಅವರಲ್ಲಿ ಬೆಳೆಯುತ್ತಿದ್ದ ಕವಿತಾ ಶಕ್ತಿಯನ್ನು ಗುರುತಿಸಿ ಮೊದಲಿಗೆ ಬೆನ್ನುತಟ್ಟಿ ಹುರಿದುಂಬಿಸಿದವರು. ಮಾಧ್ಯಮಿಕ ಶಾಲೆಯ ಗುರುಗಳಾದ ವೈ.ಎಸ್.ಗುಂಡಪ್ಪನವರು ಅವರು ಪ್ರಾರಂಭದಲ್ಲಿ ಒಂದು ಮಾದರಿ ಪದ್ಯ ನೀಡಿ ಇದೇ ರೀತಿಯಲ್ಲಿ ಕವಿತೆ ಬರೆಯಲು ಪ್ರಯತ್ನಿಸಿ ಎಂದು ಹೇಳಿದಾಗ ಅದರಂತೆ ಪದ್ಯ ಬರೆದುಕೊಟ್ಟಾಗ ಅದನ್ನು ತರಗತಿಯಲ್ಲಿ ಓದಿ ಮೆಚ್ಚಿ ಕವಿಯಾಗಬಹುದು ಎಂದು ನುಡಿದಿದ್ದರು.

ಲಕ್ಷ್ಮಣರಾವ್ ಅವರಿಗೆ ಕವಿಯಾಗುವ ಆಸೆ ಪ್ರೌಢಶಾಲೆಯವರೆಗೂ ಬಂದಿರಲಿಲ್ಲ. ಇದೇ ರೀತಿಯಲ್ಲಿ ಇವರೊಳಗಿದ್ದ ಕಾವ್ಯದ ಆಸಕ್ತಿಯನ್ನು ಪ್ರೋತ್ಸಾಹಿಸಿ ಪ್ರೇರೇಪಿಸಿದವರು ದಾವಣಗೆರೆಯ

ಡಿ.ಆರ್.ಎಂ. ಕಾಲೇಜಿನ ಡಿ.ಕೆ.ಸೀತಾರಾಮಶಾಸ್ತ್ರಿ, ಜನಾರ್ಧನ ಅಯ್ಯಂಗಾರ್ ಮತ್ತು ಪ್ರಹ್ಲಾದರಾವ್ ಅವರುಗಳು ಎಂದು ಗುರುತಿಸಬಹುದು.

ಬಿ. ಆರ್. ಲಕ್ಷ್ಮಣರಾವ್ ಅವರ ಆಪ್ತಮಿತ್ರ ಪ್ರಕಾಶ ಎಂಬಾತ ಕವಿತೆ ಬರೆಯುತ್ತಿದ್ದ ಆವನ ಕವಿತೆ ಬಗ್ಗೆ ವಿಮರ್ಶಾತ್ಮಕವಾಗಿ ಮಾತನಾಡಿದಾಗ ಪದ್ಯ ಬರೆಯುವ ಕಷ್ಟವೇನು ಗೊತ್ತು ನಿನಗೆ ಎಂದು ಛೇಡಿಸಿದಾಗ ಆತನ ಮೇಲಿನ ಹಠಕ್ಕಾಗಿ ಪದ್ಯ ಬರೆದುದು ಪಿ.ಯು.ಸಿ. ಓದುತ್ತಿರುವಾಗ, ಅದೇ ಕವಿತೆಯನ್ನು ಮೊದಲಿಗೆ ಕಾಲೇಜಿನ ಇಂಗ್ಲೀಷ್ ಅದ್ಯಾಪಕರಾಗಿದ್ದ ಸೀತಾರಾಮಶಾಸ್ತ್ರಿಗಳು ಮೆಚ್ಚಿ ಕಾವ್ಯದ ಬಗ್ಗೆ ಆಸಕ್ತಿಯನ್ನು ಮುಂದುವರಿಸು ಎಂದು ಪ್ರೋತ್ಸಾಹಿಸಿದರು. ಆಗಲೇ ಜನಾರ್ಧನರಾವ್ ರಿಗೆ ಬರೆದು ತೋರಿಸಿದ ಮೊದಲ ಕವಿತೆ 'ವಿಫಲ' ಇದು ಕಾಲೇಜು ಸಂಚಿಕೆಯಲ್ಲಿ ಪ್ರಕಟವಾಯಿತು. ಅದೇ ರೀತಿ ಇಂಗ್ಲೀಷ್‌ನಲ್ಲಿ 'ಲಕ್ಕಿಬರ್ಡ್' ಎಂಬ ಮೊದಲ ಕಥೆ ಕಾಲೇಜು ಸಂಚಿಕೆಯಲ್ಲಿ ಪ್ರಕಟವಾಯಿತು.

ಲಕ್ಷ್ಮಣರಾವ್ ಅವರು ಪೂರ್ಣವಾಗಿ ಸಾಹಿತ್ಯದ ಕಡೆ ತಿರುಗಲು ಅವರಲ್ಲಿದ್ದ ಸಾಹಿತ್ಯದ ಅಭ್ಯಾಸವು ಒಂದು ಪ್ರಮುಖವಾದ ಕಾರಣವೆನ್ನಬಹುದು. ಹೆಚ್ಚು ಇಷ್ಟಪಟ್ಟು ಓದಿದ ಕವಿತೆ ಕೆ.ಎಸ್.ನಿಸಾರ್ ಅಹಮದ್ ರವರ 'ಮದುವೆ' ಕವನ, ಜೊತೆಗೆ ಕೆ.ಎಸ್.ನರಸಿಂಹ ಸ್ವಾಮಿಯವರ 'ಮನೆಯಿಂದ ಮನೆಗೆ' ಅಡಿಗರ 'ಭೂಮಿಗೀತ' ಸಂಕಲನದ ಕವಿತೆಗಳು ಅಲ್ಲಿಂದ ಮುಂದೆ ಲಕ್ಷ್ಮಣರಾವ್ ಅವರ ಸಾಹಿತ್ಯದ ಅಭ್ಯಾಸ ಗಂಭೀರವಾಗಿ ಸಾಗಿತು. ದಾವಣಗೆರೆಯ ವಾತಾವರಣ ಅವರಲ್ಲಿ ಸಾಹಿತ್ಯಾಸಕ್ತಿ ಬೆಳೆಯಲು ಪೂರಕ ವೇದಿಕೆ ಒದಗಿಸಿಕೊಟ್ಟಿದೆ ಎಂದು ಹೇಳಬಹುದು.

ಬೆಂಗಳೂರಿಗೆ ಬಂದ ಮೇಲೆ ಕೆ.ಎಸ್.ನಿಸಾರ್ ಅಹಮದ್ ಪಿ.ಲಂಕೇಶ್ ಪರಿಚಯವಾದಾಗ ತಾವು ಬರೆದ ಪದ್ಯಗಳನ್ನು ಅವರಿಗೆ ತೋರಿಸಿ ಮೆಚ್ಚುಗೆ ಪಡೆದರು. ತಾವು ಪೂರ್ಣವಾಗಿ ಸಾಹಿತ್ಯ ಕಡೆ ತಿರುಗಲು ಲಂಕೇಶ್‌ರೇ 'ರೋಲ್ ಮಾಡೆಲ್' ಎಂದು ಸ್ವತಃ ಲಕ್ಷ್ಮಣರಾವ್ ಅವರೇ ಒಪ್ಪಿಕೊಳ್ಳುತ್ತಾರೆ. ಸಾಹಿತಿಗಳ ಒಡನಾಟ ಭೇಟಿ ಸಾಹಿತಿಗಳ ಪರಿಚಯದಿಂದಾಗಿ ಅವರಲ್ಲಿ ಸಾಹಿತ್ಯದ ಬಗ್ಗೆ ಒಲವು ಬೆಳೆಯಿತು. ತಾವು ಕವಿಯಾಗಿ ಬೆಳೆಯಲು ಇವೇ ಪ್ರೇರಣೆ ಎಂದು ಹೇಳುತ್ತಾರೆ. ಲಂಕೇಶ್‌ರ ಜೊತೆಗೆ ಲಕ್ಷ್ಮಣರಾವ್ ರವರ ಮೇಲೆ ಪ್ರಭಾವ ಬೀರಿದವರು ವೈ.ಎನ್ಕೆ, ಯು.ಆರ್. ಅನಂತಮೂರ್ತಿ, ಗಿರೀಶ್ ಕಾರ್ನಾಡ್, ಶಾಂತಿನಾಥ ದೇಸಾಯಿ, ಚಂದ್ರಶೇಖರ ಪಾಟೀಲ, ಚಂದ್ರಶೇಖರ ಕಂಬಾರ, ಇವರೆಲ್ಲರ ಪರಿಚಯದ ಜೊತೆಗೆ ಆತ್ಮೀಯ ಸ್ನೇಹವು ಲಭಿಸುವಂತೆ ಮಾಡಿದವರು ಪಿ.ಲಂಕೇಶ್‌ರು ಲಕ್ಷ್ಮಣರಾವ್ ರವರಿಗೆ ಹೆಚ್ಚಿನದಾಗಿ ಸಾಹಿತ್ಯಧ್ಯಯನಕ್ಕೆ ಪುಸ್ತಕಗಳನ್ನು ನೀಡಿ ಓದಲು ಬರೆಯಲು ಪ್ರೇರಣೆ ವೈಯಸ್ಕೆಯವರಿಂದ ದೊರೆಯಿತು ಎಂಬುದನ್ನು ಲಕ್ಷ್ಮಣರಾವ್ ರವರೇ ಒಪ್ಪಿಕೊಳ್ಳುತ್ತಾರೆ. (ಚಿಂತಾಮಣಿ; ೨೦೦೬;ಪು;೨೦೮).

ಹೀಗೆ ಸಾಹಿತಿಗಳು ಮತ್ತು ಸಾಹಿತ್ಯದ ಒಡನಾಟ ಜೊತೆಗೆ ಸಾಹಿತ್ಯದ ಅಭ್ಯಾಸದಿಂದಾಗಿ ಅವರು ಬರವಣಿಗೆಗೆ ತೊಡಗಿಸಿಕೊಂಡರು. ಪ್ರಾರಂಭದಲ್ಲಿ ಅವರ ಕವಿತೆಗಳು ಲಹರಿ, ಗೋಕುಲ, ಸಂಕ್ರಮಣ

ಮುಂತಾದ ಸಾಹಿತ್ಯಕ ಪತ್ರಿಕೆಗಳಲ್ಲಿ ಬಿಡಿ-ಬಿಡಿಯಾಗಿ ಪ್ರಕಟಗೊಂಡು ಬೆಳಕಿಗೆ ಬಂದಿದ್ದರೂ ಅವರು ಮೊದಲು ಬರೆದ ಕವಿತೆ 'ಗೆಳೆಯರು' ಪ್ರಜಾವಾಣಿಯ ಸಾಪ್ತಾಹಿಕ ಪುರವಣಿಯಲ್ಲಿ ಪ್ರಕಟವಾಯಿತು.

೧೯೬೫ ರಲ್ಲಿ 'ಸುಧಾ' ವಾರಪತ್ರಿಕೆಯಲ್ಲಿ ಪ್ರಕಟವಾದ 'ಚಂದನದ ಗೊಂಬೆ' ಎಂಬುದು ಮೊದಲ ಕತೆಯಾಗಿದೆ. ಪ್ರಜಾವಾಣಿ ಪತ್ರಿಕೆಯೇ ರವರನ್ನು ಸಾಹಿತ್ಯಕವಾಗಿ ಜನರಿಗೆ ಹೆಚ್ಚಾಗಿ ಪರಿಚಯಿಸಿದ್ದು ಮತ್ತು ಬೆಳೆಸಿದ್ದು ಎಂದು ಗುರುತಿಸಬಹುದು. ಅವರ ಗೋಪಿ ಮತ್ತು ಗಾಂಡಲೀನ 'ಜನಪ್ರಿಯತೆ ಗಳಿಸಿದುದು ಪ್ರಜಾವಾಣಿ ಪತ್ರಿಕೆಯ ಮೂಲಕವೇ ಹಾಗೆಯೇ ಹೆಚ್ಚಿನ ಓದುಗರನ್ನು ತಲುಪಿದ್ದು ಆ ಮೂಲಕವೇ ಎಂದು ಹೇಳಬಹುದು.

ಕವಿತೆಗಳನ್ನು, ಕತೆಗಳನ್ನು ಬರೆದು ಬಿಡಿ-ಬಿಡಿಯಾಗಿ ದಿನಪತ್ರಿಕೆ, ವಾರಪತ್ರಿಕೆಗಳಲ್ಲಿ ಸಾಪ್ತಾಹಿಕ ಪುರವಣಿಗೆಳಲ್ಲಿ ಪ್ರಕಟಿಸುತ್ತಿದ್ದ ಲಕ್ಷ್ಮಣರಾವ್ ಅವರ ಕವಿತೆಗಳು ಪುಸ್ತಕವೊಂದರಲ್ಲಿ ಮೊದಲಿಗೆ ಸೇರಿಕೊಂಡಿದ್ದು ಪಿ.ಲಂಕೇಶ್‌ರು ಸಂಪಾದಿಸಿ ಹೊರತಂದಿರುವ 'ಅಕ್ಷರ ಹೊಸ ಕಾವ್ಯ' ದಲ್ಲಿ ಎಂದು ಹೇಳಬಹುದು. ಇದರಲ್ಲಿ ಅವರ ಐದು ಕವಿತೆಗಳ ಸೇರ್ಪಡೆಯಾಗಿವೆ. ಜೊತೆಗೆ ಪಿ.ಲಂಕೇಶ್‌ರು ಲಕ್ಷ್ಮಣರಾವ್ ಅವರನ್ನು ಭರವಸೆಯ ಕವಿಯೆಂದು ಪರಿಚಯಿಸಿದ್ದಾರೆ. ಮೊಟ್ಟ ಮೊದಲಿಗೆ ದೀಪಾವಳಿ ವಿಶೇಷಾಂಕಕ್ಕೆ 'ಶಶಿಯ ಮೊರೆ' ಎನ್ನುವ ಕವನ ಬರೆದದ್ದು. ಅದು ಆಗ ಹೆಚ್ಚು ಜನಪ್ರಿಯತೆ ಗಳಿಸಿತು. ಹಲವು ಕಾಲೇಜು ಹುಡುಗರು ಆ ಕವನವನ್ನು ತಮ್ಮ ಪುಸ್ತಕದ ಮೇಲೆ ಅಂಟಿಸಿಕೊಂಡಿದ್ದರು ಎಂಬುದಾಗಿ ಸ್ವತಃ ಅವರೇ ಹೇಳುತ್ತಾರೆ. ಈ ಕವಿತೆ ಬರೆಯಲು ಕಾರಣ ಮನುಷ್ಯ ಮೊಟ್ಟ ಮೊದಲಿಗೆ ಚಂದ್ರನ ಮೇಲೆ ಪಾದರ್ಪಣ ಮಾಡಿದ ವಿಶೇಷತೆಯ ಬಗ್ಗೆ ಚಂದ್ರನನ್ನು ಕುರಿತು ಕವಿತೆಯನ್ನು ಆಹ್ವಾನಿಸಿದ ಸಂದರ್ಭದಲ್ಲಿ ಈ ಕವಿತೆ ಬರೆದಿದ್ದರು.

ಲಕ್ಷ್ಮಣರಾವ್ ಅವರ ಬರವಣಿಗೆ ಸ್ವತಂತ್ರವಾದ ಕೃತಿ ರೂಪ ಪಡೆದು ಮೊದಲಿಗೆ ಹೊರಬಂದಿರುವುದು ೧೯೭೧ ರಲ್ಲಿ 'ಗೋಪಿ ಮತ್ತು ಗಾಂಡಲೀನ' ಎಂಬ ಕವನ ಸಂಕಲನವಾಗಿದೆ. ಕವನ ಸಂಕಲನವಾಗಿದೆ. ಇದರಲ್ಲಿ ೨೯ ಕವಿತೆಗಳಿವೆ. ಅವರ ಪ್ರಾರಂಭದ ಕವಿತೆಗಳು ಇದರಲ್ಲಿವೆ. ಇದರೊಳಗಿನ ಪ್ರಮುಖ ಕವಿತೆಗಳೆಂದರೆ 'ನಾನು' ಅಪ್ಪ' 'ಅಮ್ಮ' 'ಗೆಳೆಯರು' 'ಮರ' 'ವಿಜ್ಞಾನ' 'ಗೋಪಿ ಮತ್ತು ಗಾಂಡಲೀನ' "ಫೋಟೋಗ್ರಾಫರ್' 'ಬಾ' ಒಬ್ಬಂಟಿ 'ಶಶಿಯ ಮೊರೆ' ಮಹತ್ವದ ಕವಿತೆಗಳಾಗಿವೆ. ಈ ಸಂಕಲನದ 'ಮರ' ಮತ್ತು 'ಕೆಲಸ' ಎಂಬವು ಡಿ.ಎಚ್.ಲಾರೆನ್ಸ್ ಮತ್ತು ಜಾಯ್ಸ್ ಕಿಲ್ಲರ್ ಅವರ ಇಂಗ್ಲೀಷ್ ಕವಿತೆಗಳಿಂದ ಅನುವಾದಗೊಂಡವು.

ಈ ಸಂಕಲನದಲ್ಲಿ ಪ್ರೀತಿ-ಪ್ರೇಮ, ಪ್ರಣಯದಂಥ ವಸ್ತು ವಿಷಯಗಳಿಗೆ ಸಂಬಂಧಿಸಿದ ಕವಿತೆಗಳಿವೆ. ಪ್ರಾರಂಭದ 'ನಾನು' ಎಂಬ ಕವಿತೆಯಲ್ಲಿ ತಾನು ಏನೆಂಬುದನ್ನು ತನ್ನ ಬದುಕು ಹೇಗೆಂಬುದನ್ನು ಸರಳವಾಗಿ ಹೀಗೆ ತಿಳಿಸಿದ್ದಾರೆ". "ನಾನು ಕ್ರಮವಾಗಿ ಪಂಚೇಂದ್ರಿಯ ಹೃದಯ

ಮಿದುಳುಗಳ ದಾಸ. ಈ ವ್ಯಾಸದಲ್ಲಿ ನನ್ನ ಭಾರತ, ಕುರುಕ್ಷೇತ್ರ ಕರ್ಮಯೋಗ, ವಿಶ್ವರೂಪ ದರ್ಶನ ಮುಕ್ತಿ" ಎಂದು ಹೇಳಿದ್ದಾರೆ.

'ಅಪ್ಪ' ಕವಿತೆ ಸರಳತೆಯ ಮೂಲಕ ಗಂಭೀರ ಮಾರ್ಮಿಕ ಅಂತ್ಯವನ್ನು ಕಾಣುತ್ತದೆ. ತಂದೆ, ಮಗನ ಭಿನ್ನ ವ್ಯಕ್ತಿತ್ವ ಸಾಮಾಜಿಕ ಗಂಭೀರ ಚಿಂತನೆಗೆ ದೂಡುತ್ತದೆ. 'ಅಮ್ಮ' ಕವಿತೆಯಲ್ಲಿ ತಾಯಿ ವಾತ್ಸಲ್ಯಕ್ಕಾಗಿ ಮಗುವಿನ ಮಿಡುಕಾಟದ ಜೊತೆಗೆ ಮನುಷ್ಯ ಎಷ್ಟೇ ಎತ್ತರಕ್ಕೇರಿದರೂ ತಾಯಿ ಮಡಿಲ ರಕ್ಷಣೆಯೇ ಅಗತ್ಯವೆನ್ನುವ ಭಾವವನ್ನು ವ್ಯಕ್ತಪಡಿಸುತ್ತದೆ. 'ವಿಜ್ಞಾನ' 'ಹಸಿರುಹಾವು' 'ಸಖಿಗೀತ' ಕವಿತೆಗಳು ಕಲೆಗಾರಿಕೆಯ ಮೂಲಕ ಉತ್ತಮವೆನಿಸುತ್ತವೆ. 'ಒಬ್ಬಂಟಿ' ಕವಿತೆಯಲ್ಲಿ ಒಂಟಿ ಮನಸ್ಸಿನ ಭಾವನೆಗಳು, ಮೂಡುವ ಆಲೋಚನೆಗಳು ಕಾಣುವ ದುಃಸ್ವಪ್ನಗಳ ಚಿತ್ರಣದೊಂದಿಗೆ ಪ್ರೇಮಿಯ ಮನಸ್ಸಿನ ಚಿತ್ರಣವನ್ನು ಕಾಣಬಹುದು. 'ಗೆಳೆಯರು' ಪ್ರಸ್ತುತ ಸಂಕಲನದ ಮತ್ತೊಂದು ಪ್ರಮುಖ ಕವಿತೆ. ಇದರಲ್ಲಿ ಬದುಕಿನಲ್ಲಿ ಸ್ನೇಹದ ಮಹತ್ವ ಎಷ್ಟೆಂಬುದನ್ನು ತಿಳಿಸುತ್ತಾ ಒಳಿತು-ಕೆಡುಕುಗಳೆಡರಲ್ಲಿ ಗೆಳೆಯರ ಮಹತ್ವವೇನೆಂಬುದನ್ನು ಕವಿ ತಿಳಿಸಿದ್ದಾರೆ.

ಬಿ.ಆರ್.ಲಕ್ಷ್ಮಣರಾವ್ ಅವರ ಮೊದಲ ಕವನ ಸಂಕಲನದ ಕವಿತೆಗಳು ವೈಶಿಷ್ಟತೆಗಳಿಂದ ಕೂಡಿದ್ದು ಪ್ರಮುಖ ಕವಿತೆಗಳಾಗಿವೆ.

'ಟುವಟಾರ' ೧೯೭೮ರಲ್ಲಿ ಪ್ರಕಟಗೊಂಡು ೩೨ ಕವಿತೆಗಳನ್ನು ಹೊಂದಿದೆ. ಇದರಲ್ಲಿನ 'ನನ್ನೂರು' ಕಿಶೋರನ ಅಶೂರಗೀತ, ಲೋಲಿಟಾ, ಪ್ರೇಮಗೀತೆ, ನಿಂಜೆಗಿಡ, ಉಮ v/s ರಮಾ, ಇವು ಈ ಸಂಕಲನದ ಪ್ರಮುಖ ಕವಿತೆಗಳಾಗಿವೆ. ಇವುಗಳಲ್ಲಿ ಪದ್ಯ-ಗದ್ಯ ಎರಡೂ ಶೈಲಿಯಲ್ಲಿವೆ. ವಾಸ್ತವಿಕತೆ, ಆಡು ಮಾತಿನ ಬಳಕೆಯನ್ನು ಕಾಣಬಹುದು.

'ರಗಳೆ' ಪ್ರಸಿದ್ಧವಾಗಿರುವ ಭಾವಗೀತೆ, ಸುಗಮ ಸಂಗೀತದಲ್ಲಿ ಜನಪ್ರಿಯತೆ ಗಳಿಸಿ ಹೆಚ್ಚು ಪ್ರಚಾರ ಪಡೆದುಕೊಂಡಿದೆ. ಈ ಸಂಕಲನದಲ್ಲಿ ಬರುವ 'ಪ್ರಾರ್ಥನೆ' ಆಟಗಳು 'ನಿಂಬಿಗಿಡ' 'ಜುಟ್ಟು' ಇವು ಇಂಗ್ಲೀಷ್ ಮೂಲದ ಅನುವಾದಿತ ಗೀತೆಗಳು. 'ಲಿಲ್ಲಿ ಪುಟ್ಟಿಯ ಹಂಬಲ' ೧೯೮೧ ರಲ್ಲಿ ಪ್ರಕಟಗೊಂಡ ಮೂರನೆ ಕವನಸಂಕಲನ ಇದರಲ್ಲಿ ೨೮ ಕವಿತೆಗಳಿವೆ. ಈ ಸಂಕಲನದ ಪ್ರಮುಖ ಕವಿತೆಗಳ 'ನಿರಕ್ಷರ ಕುಕ್ಷಿಗೆ' ವಾ ನರಗೀತೆ ಸಂದಿಗ್ಧ ಸಂವಾದ, ತೂರ್ಯ, 'ವಿಚಿತ್ರ' 'ಕೊಲಂಬಸ್' ಏಟ್ಸ್ ನೆನಪಿಗಾಗಿ ಲಿಲ್ಲಿ ಪುಟ್ಟಿಯ ಹಂಬಲ ಮುಂತಾದುವು. ನಮ್ಮ ದೇಶದ ಸ್ಥಿತಿಯೊಂದಿಗೆ ರೈತನ ಸ್ಥಿತಿಯ ಬಗ್ಗೆ ವ್ಯಂಗ್ಯದ ಮೂಲಕ ತಲೆತಗ್ಗಿಸುವಂತೆ ಚುಚ್ಚುವ ಬಾವ ನಿರಿಕ್ಷರ ಕುಕ್ಷಿಗೆ ಕವಿತೆಯಲ್ಲಿ ವ್ಯಕ್ತಪಟ್ಟಿದೆ. 'ಲಿಲ್ಲಿಪುಟ್ಟಿಯ ಹಂಬಲ' ದಲ್ಲಿ ಬದುಕಿನ ಮುಖ್ಯ ಶಕ್ತಿಯಾದ ಕಾಮದ ತೀವ್ರತೆಯ ಹಂಬಲವಿದೆ. 'ಕೊಲಂಬಸ್' ನಲ್ಲಿ ಪರಂಪರೆಯ ಪ್ರಜ್ಞೆ ಬೆಳಸುವುದನ್ನು ಕಾಣಬಹುದು 'ಏಟ್ಸ್ ನೆನಪಿಗಾಗಿ' ಕವಿತೆಯಲ್ಲಿ ಕವಿಯ ಪ್ರೌಢ ಪ್ರತಿಭೆಯನ್ನು ಗುರುತಿಸಬಹುದು. ಬದುಕಿನ ವಾಸ್ತವಗಳಿಗೆ ಎಚ್ಚರಿಕೆ ನೀಡುತ್ತಾ ವಿಚಾರ ಪರರನ್ನಾಗಿ ಮಾಡುವ ಅಂಶಗಳನ್ನು ತಿಳಿಸುತ್ತಾ ಜೀವನೋತ್ಸಾಹ, ದೈನಂದಿನ ಬದುಕಿನ ಆಗುಹೋಗುಗಳ ಬಗ್ಗೆ

ಮಧ್ಯಮ ವರ್ಗದ ದಾಂಪತ್ಯದ ಎಳೆಗಳನ್ನು ಜಿಡಿಸಿ ನೋಡುವ ಹಾಸ್ಯ, ವ್ಯಂಗ್ಯ, ವಿಡಂಬನೆಯ ಅಂಶಗಳನ್ನು ಕಾಣಬಹುದು. ಈ ಸಂಕಲನದಲ್ಲಿ ಬರುವ 'ಸೈಕಲ್ ಸವಾರಿ' 'ಚೆಲುವು' 'ಎರಡು ಪ್ರಶ್ನೆಗಳು' ನಡು ವಯಸ್ಸಿನಲ್ಲಿ 'ಏಟ್ಸ್ ನೆನಪಿಗಾಗಿ' ಇವು ಅನುವಾದಿತ ಕವಿತೆಗಳಾಗಿವೆ.

'ಶಾಂಗ್ರಿಲಾ' ೧೯೮೩ ರಲ್ಲಿ ಪ್ರಕಟಗೊಂಡ ಕವನ ಸಂಕಲನ, ಇದರಲ್ಲಿ ೨೧ ಕವಿತೆಗಳಿವೆ. ಇಲ್ಲಿನ ಕವಿತೆಗಳ ಭಾವ ಭ್ರಮನಿರಶನ, ಮಿತವಾದ ಬಂಡಾಯದ ದನಿಯನ್ನು ತಂದಿದ್ದಾರೆ 'ದೇವರಿಗೆ ನಮಸ್ಕಾರ' ಹೇಳುವ ಮೊದಲ ಕವಿತೆಯ ಮೂಲಕ ದೇವರಿಗಾಗಿ ಹಂಬಲಿಸಿ ಒದ್ದಾಡಲು ಆತ್ಮಾಭಿಮಾನವನ್ನು ಬಿಟ್ಟುಕೊಡಲು ಅಸಾಧ್ಯವಾದ ಸಂಧಿಗ್ಧವನ್ನು ಕುರಿತು ಹೇಳುತ್ತಾರೆ. 'ಸ್ತಬ್ಧಚಿತ್ರ' 'ಬರ' 'ಹತಾಶೆ' ಕವನಗಳಲ್ಲಿ ಬದುಕು ಅಸ್ತ-ವ್ಯಸ್ತವಾಗುತ್ತಿರುವ ವೈಯುಕ್ತಿಕ ನೆಲೆಯ ಚಿಂತನೆಗಳನ್ನು ಕಾಣಬಹುದು. ಗೀತೆ ವರ್ತಮಾನ 'ಕೆಂಪು' ಇವುಗಳಲ್ಲಿ ಬರುವ ಚಿತ್ರಣ ವೈಯಕ್ತಿಕ ನೆಲೆಯಿಂದ ಸಾಮಾಜಿಕತೆಯ ಕಡೆ ಸಾಗಿರುವುದನ್ನು ಕಾಣುತ್ತೇವೆ. 'ಕಂಬನಿ' 'ನಗರ ವಿಹಾರ' ಎಂಬ ಕವಿತೆಗಳಲ್ಲಿ ಇಂದಿನ ಸಾಮಾಜಿಕ ಸಂದರ್ಭವನ್ನು ಕುರಿತು ಲೇವಡಿ ಮಾಡಿರುವುದನ್ನು ಗುರುತಿಸಬಹುದು.

'ಗುಂಡಪ್ಪ ವಿಶ್ವನಾಥ' ಭ್ರಮನಿರಶನದ ಬೇರೆ ಬೇರೆ ಪರಿಯನ್ನು ತಿಳಿಸುವ ಕವಿತೆಯಾಗಿವೆ. 'ಕ್ವಿಕ್ಲೋಟನ ಹೋರಾಟದ ಕಥೆ'ಯಲ್ಲಿ ವ್ಯಕ್ತವಾಗಿರುವ ಹತಾಶೆ, ಆಕ್ರಂದನ ಪ್ರಸ್ತುತಕ್ಕೆ ಹಿಡಿದ ಕನ್ನಡಿಯಂತಿದೆ. 'ಗೀತೆ' ಕವಿತೆಯಲ್ಲಿ ಅಂದಿನ ಕೃಷ್ಣ ಅರ್ಜುನ ಉವಾಚವೇನು ಎಂಬುದರೊಂದಿಗೆ ಇಂದಿನ ಕೃಷ್ಣಾರ್ಜುನರ ಉವಾಚವೆಂಬುದನ್ನು ಚಿತ್ರಿಸುತ್ತದೆ.

'ವಿದಾಯ' ಕವಿತೆ ಸಂಜಯನ ಸಾವನ್ನು ಕುರಿತು ಹೇಳುವುದಾಗಿದೆ. 'ಸ್ಯಮಂತಕ' ವಿಡಂಬನಾತ್ಮಕ ಕವಿತೆಯಾಗಿದೆ. ಪುರಾಣದ ಸ್ಯಮಂತಕ ಮಣಿಯ ಕತೆಯೊಂದಿಗೆ ರಾಮನಿಗೆ ರಾಜ್ಯವಾದರೂ ರಾಗಿ ಬೀಸುವುದು ತಪ್ಪೀತೆ ಎಂಬಂತೆ, ಅಧಿಕಾರ ಹಣಕ್ಕಾಗಿ ನಡೆಯುತ್ತಿರುವ ನಿರಂತರ ಹೋರಾಟದಿಂದಾಗಿ ಸಾಮಾನ್ಯರ ಬದುಕು ಬದಲಾಗದೆಂಬ ಅಂಶ ವ್ಯಂಗ್ಯ ವಿಷಾದದ ಧ್ವನಿಯೊಡನೆ ವ್ಯಕ್ತವಾಗಿದೆ. ಹಾಗೆಯೇ ಇಲ್ಲಿ ರಾಜಕೀಯತೆಯು ಕವಿಯನ್ನು ಕಾಡುತ್ತಿವೆ ಎಂಬುದನ್ನು ಕಾಣಬಹುದು. 'ಶಾಂಗ್ರಿಲಾ' ಕವಿತೆಯಲ್ಲಿ ಹಿಂದು, ಇಂದುಗಳ ಚಿತ್ರಣವಿದೆ. ಜೊತೆಗೆ ಕವಿಯ ಆಶಾವಾದಿತನವು ವ್ಯಕ್ತವಾಗಿದೆ. ಕವಿ ಇವರಲ್ಲಿ ಬುದ್ಧಿ ಭಾವಗಳ ಸಾಮರಸ್ಯ ಸಾಧಿಸಲು ಹೊರಟಿರುವಂತೆ ಭಾಸವಾಗುತ್ತದೆ.

'ಅಪರಾಧಂಗಳ ಮನ್ನಿಸೋ' ಸಂಕಲನ ೧೯೯೨ ರಲ್ಲಿ ಪ್ರಕಟಗೊಂಡಿದ್ದು ಇದರಲ್ಲಿ ೪೦ ಕವಿತೆಗಳಿವೆ. ಈ ಸಂಕಲನದ ಕಾಲಕ್ಕೆ ಕವಿ ತನ್ನ ಕಾವ್ಯಗತಿಯನ್ನು ಬದಲಿಸಿದ್ದಾರೆ ಎಂದು ಹೇಳಬಹುದು. ತುಂಟತನದ ಅಭಿವ್ಯಕ್ತಿಯಿಂದಲೇ ಗಂಭೀರ ವಿಷಯದ ಕಡೆಗಿನ ಅವರ ಒಲವು ಬೆಳೆದಿರುವುದನ್ನು ಇಲ್ಲಿ ಕಾಣಬಹುದು.

'ಎನೀ ಅದ್ಭುತವೇ' ಎಂಬ ಕವಿತೆ ಲಕ್ಷ್ಮಣರಾವ್ ಅವರ ಕಾವ್ಯ ಮನೋಧರ್ಮವನ್ನು ಸಮರ್ಥವಾಗಿ ಪ್ರತಿನಿಧಿಸುತ್ತವೆ. ಕವಿಯ ಕಲ್ಪನೆ ತಳಮಳ, ಕವಿ ಕಲ್ಪನೆಗೆ ಜಗತ್ತಿನ ಅಡ್ಡಿಗಳೆನೆಂದು

ತಿಳಿಸಿರುವ 'ರೀತಿ' ಕವಿತೆ ಪ್ರಮುಖವಾಗಿದೆ. 'ಏಕೆಂದರೆ'ಇದರಲ್ಲಿ ವ್ಯಕ್ತಿ ಚಿತ್ರಣವಿದೆ. ಇಲ್ಲಿ ಬದುಕಲ್ಲಿ ದಕ್ಕುವುದಷ್ಟು ಅಂದುಕೊಂಡಿದ್ದೆಲ್ಲ ಅಲ್ಲ ಎಂಬ ಸತ್ಯದ ವಿವರವಿದೆ. ಹಾಸ್ಯ, ವ್ಯಂಗ್ಯ ವಿಡಂಬನೆಯ ಕವಿತೆಗಳು ಇವೆ. 'ಕದ್ದಾಲಿಕೆ' 'ಗಮನ' ಹೆಂಡತಿಯ ಸಂಕಟ' ಬೋಣಿ' ಪ್ರತಿಫಲ' ಇವು ಹಾಸ್ಯದ ಹರವಿರುವ ಕವಿತೆಗಳು 'ಸ್ವಯಂವರ' ವಿಡಂಬನೆಯ ಕವಿತೆ ಸಾವಿನ ಬಗೆಗಿನ ಚಿತ್ರಣವಿರುವುದನ್ನು 'ಹೊಂಚು' ಕವಿತೆಯಲ್ಲಿ ಕಾಣಬಹುದು. 'ಪರಿಧಿ' ಕವಿತೆಯಲ್ಲಿ ಮನುಷ್ಯನ ಬದುಕು ಪರಿಧಿಯೊಳಗೆ ಸಾಗಬೇಕೆಂಬುದರ ಜೊತೆಗೆ ಪರಂಪರೆ ಮುಂದುವರಿಯುವುದು. ತಂದೆಯಿಂದ ಮಗನಿಗೆ ಎಂಬುದು ವ್ಯಕ್ತವಾಗಿದೆ.

ಪ್ರಯಾಣದ ಅನುಭವವನ್ನು ಹೇಳುತ್ತಾ ಅವರೊಡನೆ ತಮ್ಮ ಸ್ಥಿತಿಯನ್ನು ಕುರಿತು ಹೇಳುವ 'ಮಧ್ಯಸ್ಥ' ಕವಿತೆಯಲ್ಲಿ ಕವಿಯ ನಿರ್ಲಿಪ್ತ, ಭಾವ ಆ ಇಬ್ಬರ ಹೋಲಾಟ, ತಿಕ್ಕಾಟದಲ್ಲಿ ತಾನು ಮಾತ್ರ ಯಾವ ಹೊಡೆತ-ಜೀಳುವಿಕೆಯು ಇಲ್ಲದ ಆರಾಮ ಪ್ರಯಾಣವೆಂಬುದನ್ನು ಮಾರ್ಮಿಕವಾಗಿ ತಿಳಿಸಿದ್ದಾರೆ. ೧೮೫೭ರಲ್ಲಿ ದೆಹಲಿ ಸ್ಥಿತಿಯನ್ನು ಹೇಳುವ ದೆಹಲಿ ೧೮೫೭ ಉತ್ತಮವಾದ ಕವಿತೆಯಾಗಿದೆ. 'ರಿಪ್‌ವ್ಯಾನ್ ವಿಂಕಲ್' ವ್ಯಕ್ತಿ ಚಿತ್ರಣದ ಕವಿತೆ. ಮೊಮ್ಮಗಳಲ್ಲಿ ತನ್ನ ಜೀವಸೆಲೆಯನ್ನು ಕಾಣುವ ತಾತನ ತೃಪ್ತಿಯನ್ನು ಹೇಳುತ್ತದೆ.

'ಭಾರತ ಬಿಂದು ರಶ್ಮಿ' ೧೯೯೭ರಲ್ಲಿ ಹೊರಬಂದಿರುವ ಹನಿಗವಿತೆಗಳ ಸಂಕಲನ ಈ ಹನಿಗವಿತೆಗಳಲ್ಲಿ ಸಾಹಿತ್ಯದ ಆಯಾಮವನ್ನು ಕಾಣಬಹುದು. ತುಂಟತನವು ಇವೆ. ವ್ಯಂಗ್ಯ ವಿನೋದ, ವಿಡಂಬನೆ, ವಿಷಾದ ಎಲ್ಲವನ್ನು ನೋಡಬಹುದು. ಚುರುಕುತನ ರಸಿಕತೆ, ಭಾವುಕತೆ, ವೈಚಾರಿಕತೆ ಜೊತೆಗೆ ಕಾವ್ಯಾತ್ಮಕತೆಗಳು ಕಂಡುಬರುತ್ತವೆ. ಘಷ್ಮಿ, ವಿರಹಿ, ಜಾಣ, ಕೂಡು, ವಾರೆಂಟ್, ಚೆಲುವೆ, ತೀರ್ಪು, ಏಕೆಂದರೆ ಮೊದಲಾದ ಕವಿತೆಗಳು ವ್ಯಂಗ್ಯವು ತೀಕ್ಷ್ಣವು ಆದ ನಿರೂಪಣೆಯಿಂದ ಕೂಡಿವೆ. 'ಬಚಾವು' ಕವನದ ಸಾಲುಗಳಲ್ಲಿ ಬರುವ ಬಚಾವಾಗಲು ಸಾಧ್ಯವೇ ಗಾಳಕ್ಕೆ ಸಿಕ್ಕಿ ಮೀನು ಯಾವ ಮಹಾಸಂಗತಿ ಸಿಕ್ಕರೇ ಜಾಮೀನು; ಎಂಬ ಸಾಲುಗಳು ಹಾಸ್ಯದಿಂದ ಗಂಭೀರದ ಕಡೆಗೆ ಸಾಗುತ್ತದೆ. 'ನಾನು' 'ಬೆತ್ತಲೆ' ನೀತಿ, 'ಅರಕೆ' ಎಂಬ ಕವಿತೆಗಳಲ್ಲಿ ದೇಶದ ಅಗಾಧ ಹಗರಣಗಳ ಚಿಂತನೆಯನ್ನು ಕಾಣಬಹುದು. ಮಹತ್ವದ ವಿಷಯಗಳನ್ನು ಕುರಿತ ಚಿಂತನೆಗಳನ್ನು ಇವರ ಹನಿಗವಿತೆಗಳಲ್ಲಿ ಗುರುತಿಸಬಹುದು.

೧೯೯೮ರಲ್ಲಿ ಪ್ರಕಟಗೊಂಡಿರುವ 'ನನ್ನ ಗೀತೆ' ಭಾವಗೀತೆಗಳ ಸಂಕಲನ ಇದರಲ್ಲಿ ೬೫ ಭಾವಗೀತೆಗಳಿವೆ. ಇದು ಅವರ ಎಲ್ಲಾ ಭಾವಗೀತೆಗಳ ಸಂಕಲನವಾಗಿದೆ. ಇಲ್ಲಿನ ಅವರ ಗೀತೆಗಳಲ್ಲಿ ಭಾವಾವೇಶವಿಲ್ಲದ ಭಾವತೀವ್ರತೆಯನ್ನು ಕಾಣಬಹುದು. ನವ್ಯ ಭಾವಗೀತೆಗಳಲ್ಲಿ ತುಂಟತನ ನವಿರಾದ ಹಾಸ್ಯ ಸೇರಿರುವುದು ಮುಖ್ಯವೆನಿಸುತ್ತದೆ. 'ಶ್ರುತಿಮೀರಿದ ಹಾಡು' 'ವಿಷಾದ' 'ನೆನಪು' ಕವಿತೆಗಳಲ್ಲಿ ಈ ಭಾವ ವ್ಯಕ್ತವಾಗಿ 'ನನ್ನ ಗೀತೆ'ಯಲ್ಲಿ ಕವಿ ತನ್ನ ಕವಿತೆ ಬಗ್ಗೆ ಇರುವ ಭಾವವನ್ನು ವ್ಯಕ್ತಪಡಿಸಿದ್ದಾರೆ.

ಪ್ರಕೃತಿ ಮನುಷ್ಯನಿಗೆ ಹೇಗೆ ಮಾದರಿಯಾಗುತ್ತದೆ ಎಂಬುದರ ಚಿತ್ರಣ 'ಮಾದರಿ' ಕವಿತೆಯಲ್ಲಿ ವ್ಯಕ್ತವಾಗಿದೆ. 'ಸಾಧನ' ಕವಿತೆಯಲ್ಲಿ ಕವಿ ದೇಹದ ಬಗ್ಗೆ ತಮ್ಮ ಸಮರ್ಥನೆಯನ್ನು ವ್ಯಕ್ತಪಡಿಸಿದ್ದಾರೆ. ಕರ್ನಾಟಕದ ಸತ್ವ ಸಾರವನ್ನು 'ಜೇರು' ಕವಿತೆಯಲ್ಲಿ ವಿವರಿಸಿದ್ದಾರೆ. ತಾಯಿಯನ್ನು ಕುರಿತಂತೆ 'ಕಾಮಧೇನು' ಕವಿತೆಯಲ್ಲಿ ಕವಿಯ ನಿಲುವು ವ್ಯಕ್ತವಾಗಿವೆ. ಕಾಲದ ಮಹತ್ವವನ್ನು ಹಾಸ್ಯದ ಮೂಲಕ ಹೇಳುತ್ತ, ಅಂತ್ಯದಲ್ಲಿ ಗಂಭೀರ ಚಿಂತನೆಯನ್ನು 'ಕಾಲ' ಎಂಬ ಕವಿತೆಯ ಮೂಲಕ ಕವಿ ಸ್ಪಷ್ಟಪಡಿಸಿದ್ದಾರೆ.

ಪ್ರೀತಿಯ ಸೆಳೆತ, ಆದ್ರತೆ, ಪ್ರೀತಿಯ ಮಹತ್ವವನ್ನು ಸಾರುವ ಹಲವು ಕವಿತೆಗಳು ಈ ಸಂಕಲನದಲ್ಲಿವೆ. 'ಹದಿಹರೆಯದ ಹಾಡು' 'ಕುಂಟೋಜಿಲ್ಲೆ' 'ಕಣ್ಣು' 'ನೀನಿರಲು' 'ಕನಸು' ಕಾಡಬೇಡ. ನೀನಿರದೆ 'ಮನಸೇ' ವಿದಾಯ ಇತ್ಯಾದಿ ಕವಿತೆಗಳಲ್ಲಿ ಪ್ರೀತಿಯ ತೀವ್ರತೆ ಮತ್ತು ಹಂಬಲವನ್ನು ವಿಭಿನ್ನ ಮುಖಗಳಲ್ಲಿ ಚಿತ್ರಿಸಿದ್ದಾರೆ. ಪ್ರೀತಿ-ಪ್ರೇಮ ಪ್ರಣಯ-ದಾಂಪತ್ಯ ವಿರಹದ ವಸ್ತುಗಳನ್ನೊಳಗೊಂಡ ಇದರಲ್ಲಿನ ಹಲವು ಕವಿತೆಗಳು ಸಂಗೀತ ಕ್ಷೇತ್ರದಲ್ಲಿ ಮಹತ್ವದ ಸ್ಥಾನ ಪಡೆದಿವೆ.

'ಎಡೆ' ಕವನ ಸಂಕಲನ ೧೯೯೮ರಲ್ಲಿ ಹೊರಬಂದಿದೆ. ಇದರಲ್ಲಿ ೮೧ ಕವಿತೆಗಳಿವೆ. ಇದರಲ್ಲಿ ಬರುವ 'ಹಂಬಲ' ದ್ವಾಸುಪರ್ಣ; 'ಕುರಿಮರಿಯ ಮೊರೆ' 'ನೆಹರು ಜೈಲಿಗೆ ಹೋದದ್ದೇಕೆ' 'ಪ್ರಿಸಮ್' ನಿನಗೆ ನಾನ್ಯಾರು' 'ಉತ್ತರ' 'ವ್ಯತ್ಯಾಸ'
ಸಂಶಯಾತ್ಮನ ವಿಲಾಸ, ಉತ್ತರ 'ಎಡೆ' ಇವು ಪ್ರಮುಖ ಕವಿತೆಗಳೆನಿಸಿವೆ.

ಗಾಂಧಿ, ಮದರ್ ತೆರೆಸಾ, ಗೆಲಿಲಿಯೋ, ಮಾಸೆಸ್ ಎಂಬ ಕವಿತೆಗಳಲ್ಲಿ ವ್ಯಕ್ತಿ ಚಿತ್ರಣದ ಮಾದರಿಯಾಗಿ ಮೂಡಿ ಬಂದಿವೆ; 'ನನ್ನ ನಾಡಿನಲ್ಲಿ' 'ಅವರು ಕೇಳುತ್ತಾರೆ' ದಕ್ಷಿಣ ಆಫ್ರಿಕಾದ ಕಪ್ಪು ಕವಿ ವಿತಿಕಾ ನತೂಲಿ ಅವರ ಕವಿತೆಗಳ ಅನುವಾದಗಳಾಗಿವೆ. 'ಹುಲ್ಲು' ಸುಳ್ಳುಗಾರರು' ಮುಂಬರುವ ಜಗತ್ತಿಗಾಗಿ 'ಶವವಾಹಕ' 'ನಮ್ಮ ಬಗ್ಗೆ' ಬಂಗಾಳಿ ಮೂಲ ಕವಿತೆಯ ಅನುವಾದಗಳಾಗಿವೆ.

'ಕಾನೂನು' 'ಪ್ರೇಮದ ಹಾಗೆ', ಇಂಗ್ಲೀಷ ಮೂಲಕವಿತೆಗಳ ಅನುವಾದಗಳು 'ಮಳೆ' 'ಅಪೂರ್ಣತೆಯ ಸೌಂದರ್ಯ' ಇವು ಮಲೆಯಾಳಂನಿಂದ ಅನುವಾದಗೊಂಡ ಉತ್ತಮ ಅನುವಾದಿತ ಕವಿತೆಗಳಾಗಿವೆ.

'ಇವಳು ನದಿಯಲ್ಲ' ೨೦೦೩ರಲ್ಲಿ ಪ್ರಕಟಗೊಂಡಿದ್ದು ಇದರಲ್ಲಿ ೩೫ ಕವಿತೆಗಳಿವೆ. 'ರುಚಿ' 'ಒಡನಾಟ' 'ಮಗನಿಗೆ' 'ಶಾಪ' 'ಇಲ್ಲೆ' 'ನಿಷ್ಠೆ' 'ಉಳಿವು' 'ಹೊಣೆ' 'ಹೊಸ ಶತಮಾನದ ಕನಸುಗಳು' 'ನನಗೆ ಮಗಳಿದ್ದಿದ್ದರೆ' 'ಇವಳು ನದಿಯಲ್ಲ' 'ಗುರುವಿಗೆ ಕೃತಜ್ಞತೆಯಿಂದ' 'ಗೊಂದಲ' 'ಈಗ' 'ಪ್ರತೀಕ್ಷೆ' 'ಮಾನವ' 'ಭ್ರಮೆ' ಇವು ಪ್ರಮುಖ ಕವಿತೆಗಳಾಗಿವೆ. ಎಲ್ಲವನ್ನು ಎಲ್ಲಿಂದಲಾದರು ತರಬಹುದು ಸುಖ-ನೆಮ್ಮದಿಯಲ್ಲಿ ನಮ್ಮಲ್ಲಿ ಮಾತ್ರವೆಂಬ ಆಶಯವನ್ನು 'ಭೂತಸ್ಮಿತ' ಕವಿತೆ ಒಳಗೊಂಡಿದೆ. ಪ್ರಕೃತಿ ಪ್ರಕೃತಿಯ ನಡುವಿನ ಒಡನಾಟವನ್ನು 'ಒಡನಾಟ' ಕವಿತೆಯಲ್ಲಿ ಚಿತ್ರಿಸಿದ್ದಾರೆ. ತಾನು ಕಲಿತಿಲ್ಲದ್ದನ್ನು ತನ್ನ ಮಗ

ಕಲಿತು ಭವಿಷ್ಯವನ್ನು ದಿಟ್ಟವಾಗಿ ಎದುರಿಸಿ ಹೋರಾಟದ ಬದುಕನ್ನು ದೈರ್ಯದಿಂದ ಎದುರಿಸಲು ಕಲಿಯಲೆಂಬ ಆಶಯವನ್ನು ಮಗನಿಗೆ ಕವಿತೆಯ ಮೂಲಕ ವ್ಯಕ್ತಪಡಿಸಿದ್ದಾರೆ. ಬರಗಾಲದ ದಾರುಣ ಚಿತ್ರಣವನ್ನು ನೀಡುವ 'ಶಾಪ' ಒಂದು ಗಂಭೀರ ಚಿಂತನೆಯ ಕವಿತೆಯಾಗಿದೆ. ಪುರಾಣದ ಎಲ್ಲಾ ಪಾತ್ರಗಳು ನಮ್ಮಲ್ಲೆ ನಮ್ಮೊಳಗೆ ಇವೆಯೆಂಬುದನ್ನು 'ಇಲ್ಲೆ' ಕವಿತೆ ಬಿಂಬಿಸುತ್ತದೆ. ದೇವರ ಹೆಸರಿನಲ್ಲಿ ಮನುಜನ ಸಾವನ್ನು ಕುರಿತಂತೆ 'ನಿಷ್ಠೆ' ಕವಿತೆ ವಿವರಿಸುತ್ತವೆ. 'ಹೊಣೆ' ಎಂಬ ಕವಿತೆ ಮನುಷ್ಯನನ್ನು ಸೃಷ್ಟಿಸಿದ ದೇವರೆ ಇಲ್ಲಿ ನಡೆಯುವುದಕ್ಕೆಲ್ಲ ಹೊಣೆ ಎಂದು ನಿರೂಪಿಸುತ್ತದೆ. ಇದರಲ್ಲಿನ ಕ್ಲಿಂಟನ್, ಲಂಕೇಶ್ ಕನಕದಾಸ, ಯೂಲಿಸಿಸ್ ಇವರನ್ನು ಕುರಿತ ವ್ಯಕ್ತಿ ಚಿತ್ರಣ ನೀಡುವ ಕವಿತೆಗಳು ಉತ್ತಮವಾಗಿದೆ.

ಬಿ.ಆರ್.ಲಕ್ಷ್ಮಣರಾವ್ ಅವರ ೭ ಕವನ ಸಂಕಲನಗಳು ಒಂದು ಹನಿಗವಿತೆಗಳ ಸಂಕಲನ, ಒಂದು ಭಾವಗೀತೆಗಳ ಸಂಕಲನ ಜೊತೆಗೆ ಈವರೆಗಿನ ಪ್ರೇಮ ಕವಿತೆಗಳನ್ನು ಒಳಗೊಂಡ 'ಪ್ರೇಮಾಂತರ' ಎಂಬ ಸಂಕಲನವನ್ನು ಹೊರತರದಿದ್ದಾರೆ. ಕವಿಯ ಕಾವ್ಯದ ಹೊಳಹು-ವಿಶೇಷತೆಗಳನ್ನು ಪರಿಪೂರ್ಣ ಅಧ್ಯಯನಕ್ಕೆ ಮುನ್ನ ಅವರ ಕಾವ್ಯ ವೈಶಿಷ್ಟ್ಯಗಳನ್ನು ಕುರಿತು ಸ್ಥೂಲ ಪರಿಚಯವನ್ನು ಇದರಲ್ಲಿ ಗುರುತಿಸಿಕೊಳ್ಳಲಾಗಿದೆ.

ಬಿ.ಆರ್. ಲಕ್ಷ್ಮಣರಾವ್ ಅವರು ಬರೆದಿರುವ ಹತ್ತೊಂಬತ್ತು ಕಥೆಗಳು 'ಜೆಸ್ಸಿರ್' ಮತ್ತು 'ಕಬ್ಬೆಕ್ಕು' ಎಂಬ ಎರಡು ಕಥಾಸಂಕಲನಗಳಲ್ಲಿ ಪ್ರಕಟವಾಗಿವೆ. ಅವರ ಸಮಗ್ರ ಕಥೆಗಳನ್ನು ಒಳಗೊಂಡ 'ನಿರಂತರ' ಎಂಬ ಕೃತಿ ೨೦೦೫ ರಲ್ಲಿ ಪ್ರಕಟವಾಗಿದೆ. 'ಚಂದನದ ಗೊಂಬೆ'; 'ಒಬ್ಬಂಟಿಗಳು ಜೆಸ್ಸಿರ್' 'ಒಂದು ರಾತ್ರಿ' ಯಾಕೆಂದರೆ 'ಗಡಿಯಾರ' 'ಒಂದು ಪ್ರೇಮದ ಕಥೆ' 'ದಾಖಲೆ' 'ನಾಗರೀಕ' 'ಮೊಲೆ ಬೆಂಕಿ ಮುದುಕ' ಇತ್ಯಾದಿ ನಿರಂತರ ನಾನು ಕೊಂದವ ಯುವಕ ಹೀಗೂ ಆಗುವುದುಂಟು ಕವಿತಾ ಯಾರಿಗೂ ಹೇಳೋದೂ ಬ್ಯಾಡ' 'ವಿಹಾರ' 'ಬೆಳ್ಳಿ' 'ಓಡಿಕೆ' 'ಕಬ್ಬೆಕ್ಕು' 'ಘಾತ' ಇವುಗಳನ್ನೊಳಗೊಂಡ ಕಥಾಸಂಕಲನ ಇದಾಗಿದೆ.

ಲಕ್ಷ್ಮಣ್‌ರಾವ್ ಅವರು ಬಹುತೇಕ ಕಥೆಗಳನ್ನು ನಿರೀಕ್ಷಿತ ರೀತಿಯಲ್ಲಿ ನಿರೂಪಿಸಿರುವುದನ್ನು ಗುರುತಿಸಬಹುದು ಪ್ರೀತಿ, ಪ್ರೇಮ ವಸ್ತು ವಿಷಯಗಳೇ ಇವರ ಕಥೆಗಳ ವಸ್ತುವಾಗಿರುತ್ತದೆ. ಇವರ ಕಥೆಗಳಲ್ಲಿ ಬರುವ ನಾಯಕ-ನಾಯಕಿಯರು ಆಧುನಿಕ ಕಾಲದ ಯುವಕ ಯುಮತಿಯರು ಮಧ್ಯಮ ವರ್ಗದವರಾಗಿದ್ದಾರೆ. ರೂಢಿ ಸಂಪ್ರದಾಯಗಳ ಬಗೆಗೆ ಬೇಸರವಿರುವವರು ಆಕ್ರೋಶವಿಲ್ಲ. ಬದಲಾವಣೆಗೆ ಬಯಸಿದರು ಬಂಡಾಯಗಾರರಲ್ಲ. ಅನೇಕ ಪ್ರಮುಖ ಘಟ್ಟಗಳು ವ್ಯವಸ್ಥೆಯ ಬಂಧನಕ್ಕೆ ಸಿಲುಕಿ ಬಿಡುತ್ತಾರೆ. ಲಘು ಹೃದಯ ಸಂಯಮಿ, ಶಾಂತ ಮನೋಧಬಾವದವರಾಗಿ ಮಾನವೀಯತೆಯನ್ನು ಮರೆಯುತ್ತಾರೆ. ಇದಕ್ಕೂ ಮೀರಿದ್ದು ಅವರ ಪಾಲಿಗಿಲ್ಲ. ಸಭ್ಯತೆಯೊಳಗೆ ವ್ಯವಸ್ಥೆಯನ್ನು ವಿರೋಧಿಸುವವರು ಇನ್ನು ಇವರ ಕಥೆಯೊಳಗೆ ಪ್ರಮುಖವೆನಿಸಿರುವ ಅಂಶಗಳೆಂದರೆ ಸಹ ಜೀವಿಗಳ

ಬಗ್ಗೆ ಸ್ನೇಹ, ಪ್ರೀತಿ, ಬಾಂಧವ್ಯಗಳ ಬಗ್ಗೆ ಗೌರವವಿದೆ, ಅಕ್ಕ-ತಮ್ಮ-ಗಂಡ-ಹೆಂಡತಿ-ಪ್ರೇಯಸಿ-ಪ್ರಿಯತಮ ಇವರ ನಡುವಿನ ಶುದ್ಧ ಪ್ರೀತಿ, ನಿರ್ಮಲ ಮನಸ್ಸು ಇರುವುದನ್ನು ಕಾಣಬಹುದು ಪ್ರೀತಿ-ಪ್ರೇಮದ ಆಳ-ತೀವ್ರತೆಗಳಲ್ಲಿ ಸಹಜತೆ ಇದೆ. ಪ್ರೇಮದ ಬಗೆಗಿನ ಆರೋಗ್ಯ ಪೂರ್ಣ ನಿಲುವನ್ನು ಕಾಣಬಹುದು. ಪ್ರೀತಿ-ಪ್ರೇಮದ ದಾರಿಯಲ್ಲಿ ಎದುರಾಗುವ ಅಡ್ಡಿ ಆತಂಕಗಳು ಸಮಾಜದ ಕಟ್ಟಳೆಗಳು ಜಾತಿ-ಮತ ಧರ್ಮದ ಅಡ್ಡ ಗೋಡೆಗಳು ಮಧ್ಯಮ ವರ್ಗದ ಜನರನ್ನು ಕಾಡುವ ತವಕ-ತಲ್ಲಣಗಳು, ನೈತಿಕತೆ, ಕ್ರೂರಿ ವ್ಯವಸ್ಥೆಯ ತುಳಿತ ಅಸಾಯಕತೆ ಇವೆಲ್ಲವುಗಳ ಮುಖಾ ಮುಖಿಯಾಗುವಿಕೆ ಇದ್ದರು ಅಂತ್ಯದಲ್ಲಿ ಪರಿಸ್ಥಿತಿ ಸಂದರ್ಭ ಇವುಗಳೊಂದಿಗೆ ಹೊಂದಾಣಿಕೆಯಾದಾಗಲೇ ಬದುಕು ಗೋಜಲಾಗದೆ ಹಸನಾಗುತ್ತದೆ ಎಂಬುದೇ ಮುಖ್ಯವೆನ್ನುವ ಅಂಶಗಳಿಗೆ ಕಥೆಗಾರರು ಒತ್ತುನೀಡಿರುವುದನ್ನು ಗುರುತಿಸಬಹುದಾಗಿದೆ.

ಹೀಗೊಂದು ಪ್ರೇಮಕಥೆ ಕಾದಂಬರಿ ೧೯೮೮ ರಲ್ಲಿ ಮೊದಲ ಮುದ್ರಣ ಮತ್ತು ೨೦೦೪ ರಲ್ಲಿ ಮರು ಮುದ್ರಣಗೊಂಡಿದೆ ಇದು ಕೂಡ ಪ್ರೇಮ ಕಥಾನಕವಾಗಿದೆ. ಪ್ರೀತಿ ಮತ್ತು ಪ್ರೇಮ ಸಾಮಾಜಿಕ ಕಟ್ಟುಪಾಡುಗಳ ಮಧ್ಯೆ ಸಿಕ್ಕಿ ತೊಳಲಾಡುತ್ತದೆ ತಾನು ಅಂದುಕೊಂಡ ರೀತಿಯಲ್ಲಿ ಬದುಕು ಸಾಗಿಸಲು ಹೊರಟಾಗ ಇದುರಾಗುವ ಸಮಸ್ಯೆಗಳು ಅಂತಿಮವಾಗಿ ಆತ ತೆಗೆದುಕೊಳ್ಳುವ ನಿರ್ಧಾರಗಳು ಅದಕ್ಕೆ ಪೂರಕವಾಗಿ ಬರುವ ವಿಭಿನ್ನ ಬಗೆಯ ಪಾತ್ರಗಳು, ಕೌಟುಂಬಿಕ ವಿವರಗಳು ಈ ಬಗೆಯ ಸರಳ ಸಾಮಾನ್ಯ ನಿರೂಪಣೆಯೊಂದಿಗೆ ಕಾದಂಬರಿಯ ವಸ್ತು ಸಾಗುತ್ತದೆ.

ಬಿ. ಆರ್. ಲಕ್ಷ್ಮಣರಾವ್ ಅವರು ವಿವಿಧ ನಿಯತಕಾಲಿಕೆಗಳಿಗಾಗಿ ಬರೆದಿರುವ ಲೇಖನಗಳನ್ನು ಸಂಗ್ರಹಿಸಿ ಇತ್ಯಾದಿ ಎಂಬ ಹೆಸರಿನಲ್ಲಿ ೨೦೦೨ ರಲ್ಲಿ ಹೊರತಂದಿದ್ದಾರೆ. ಇದರಲ್ಲಿ ೨೫ ಲೇಖನಗಳಿವೆ. ಅವುಗಳನ್ನು ವಿಚಾರ, ವಿನೋದ, ವಿಮರ್ಶೆ, ವ್ಯಕ್ತಿ ಎಂದು ನಾಲ್ಕು ಭಾಗಗಳಾಗಿ ವಿಂಗಡಿಸಿದ್ದಾರೆ. ಇವುಗಳಲ್ಲಿ ಕ್ರಮವಾಗಿ ವಿಚಾರ ವಿಭಾಗದಲ್ಲಿ ೫ ಲೇಖನಗಳು, ವಿನೋದ ವಿಭಾಗದಲ್ಲಿ ೭ ಲೇಖನಗಳು, ವಿಮರ್ಶೆ ವಿಭಾಗದಲ್ಲಿ ೮ ವ್ಯಕ್ತಿ ವಿಭಾಗದಲ್ಲಿ ರಚಿತವಾಗಿವೆ.

ಈ ಲೇಖನಗಳಲ್ಲಿ ಲಕ್ಷ್ಮಣ್‌ರಾವ್ ಅವರ ವಿಚಾರ ವಿನೋದ ವಿಮರ್ಶೆಗಳನ್ನು ಸ್ವ ಅನುಭವಗಳ ಅಂಶಗಳನ್ನು ಕಾಣಬಹುದು ವಿಮರ್ಶಾ ಕ್ಷೇತ್ರದಲ್ಲಿ ಅವರಿಗೆ ಉತ್ತಮವಾದ ಹಿಡಿತ ಸಿಕ್ಕಿದೆ ಎಂದು ಗುರುತಿಸಬಹುದು. ಲಕ್ಷ್ಮಣ್‌ರಾವ್ ಅವರಿಗೆ ಇಂಗ್ಲೀಷ್ ಭಾಷೆಯ ಪ್ರಭುತ್ವವಿತ್ತು. ಹಾಗೆಯೇ ತೆಲಗು ಭಾಷೆಯ ಸಂಪರ್ಕವು ಇತ್ತು ಸ್ವತಃ ಅವರು ತೆಲುಗನ್ನು ಮಾತನಾಡುವ ಮಟ್ಟಿಗೆ ಹಿಡಿತ ಹೊಂದಿದ್ದರು ಜೊತೆಗೆ ಆ ಭಾಷೆಯ ಕವಿಗಳ ಒಡನಾಟ ಸಂಪರ್ಕ ಇವುಗಳು ದೊತೆತಿದ್ದವು. ಕೆಲವೊಮ್ಮೆ ಅಗತ್ಯಕ್ಕೆ ಅನುಗುಣವಾಗಿ ಭಾಷೆಯವರೊಡನೆ ಸೇರಿಕೊಂಡು ಇಲ್ಲಿಂದ ಅಲ್ಲಿಗೆ ಅಲ್ಲಿಂದ ಇಲ್ಲಿಗೆ ಕವಿತೆಗಳ ಅನುವಾದ ಕೆಲಸವನ್ನು ಮಾಡುತ್ತಿದ್ದಾರೆ. ಅದನ್ನು ಪರಿಪೂರ್ಣವಾಗಿ ನಾನೇ ಮಾಡುವಷ್ಟು ತೆಲಗು ಭಾಷೆಯ ಪ್ರೌಢಿಮೆ ಹೊಂದಿರಲಿಲ್ಲ ಎಂದು ಸ್ವತಃ ಅವರೇ ಹೇಳಿಕೊಳ್ಳುತ್ತಾರೆ. 'ರಜನೀಶ ನಿಜರೂಪ'

ಎಂಬ ಸಂಗ್ರಹಾನುವಾದಿತ ಕೃತಿ ೨೦೦೭ರಲ್ಲಿ ಹೊರ ಬಂದಿವೆ. ಇದರ ಇಂಗ್ಲೀಷ್ ಮೂಲ ಕೃತಿಕಾರ 'ಹ್ಯೂಮಿಲೇನ್' ಲಂಡನ್ನಿನ ಹ್ಯೂಮಿಲೇನ್ ರಜನೀಶರ ಆಪ್ತ ಶಿಷ್ಯರಾಗಿ ಛಾಯಾ ಚಿತ್ರ ಗ್ರಾಹಕರಾಗಿ ಮತ್ತು ಅವರ ಅಂಗರಕ್ಷಕರಾಗಿ ತುಂಬಾ ಹತ್ತಿರದಿಂದ ಬಲ್ಲವರಾಗಿದ್ದರು ಸುಮಾರು ಹತ್ತು ವರ್ಷಗಳ ಕಾಲ ರಜನೀಶ ಚಳುವಳಿಯ ಒಳ ವಲಯದಲ್ಲಿದ್ದು ಕ್ರಿಯಾಶೀಲವಾಗಿ ತೊಡಗಿಸಿಕೊಂಡವರು. ಆಪ್ತ ವಲಯದವರಾಗಿ ರಜನೀಶರನ್ನು ಕಂಡಿದ್ದವರು ರಜನೀಶ ಮತ್ತು ಅವರ ಚಳುವಳಿಯನ್ನು ಕುರಿತು ತಮ್ಮ ಅನುಭವ ಅನಿಸಿಕೆಗಳನ್ನು ಅಧಿಕೃತ ಆಧಾರಗಳ ಸಹಿತ ದಾಖಲಿಸಿದ್ದಾರೆ. ಆ ಇಂಗ್ಲೀಷ್ ಕೃತಿಯ ಕನ್ನಡ ಸಂಗ್ರಹಾನುವಾದವೇ 'ರಜನೀಶರ ನಿಜರೂಪ' ಎಂಬುದು. ೧೦ ಅಧ್ಯಾಯಗಳಲ್ಲಿ ರಜನೀಶರ ಬಾಲ್ಯದ ಬದುಕಿನಿಂದ ಕೊನೆಯವರೆಗಿನ ಎಲ್ಲಾ ವಿವರಗಳನ್ನು ಇದರಲ್ಲಿ ಕಾಣಬಹುದು. ರಜನೀಶರ ಲಾಲಸೆ, ಅವರ ಚಳುವಳಿ, ಕಟ್ಟಿದ ಸಂಸ್ಥೆ, ಅವರಲ್ಲಿನ ದೋಷ, ದೌರ್ಬಲ್ಯಗಳ, ಬಗ್ಗೆ ತಿಳಿಸುವುದರೊಂದಿಗೆ ರಜನೀಶರ ಚಳುವಳಿ ಸರಳ ವಿಶ್ಲೇಷಣೆಗೆ ದಕ್ಕುವುದಿಲ್ಲವೆಂಬುದನ್ನು ಹಾಗೆಯೇ ವಿವೇಕವಂತರೂ, ಬುದ್ಧಿ ಜೀವಿಗಳಾದವರು ಕೂಡ ರಜನೀಶರಂತಹ ಮೋಡಿಗಾರರ ಬಲೆಗೆ ಸಿಕ್ಕಿ ಬೀಳುತ್ತಾರೆಂಬುದನ್ನು ಇಲ್ಲಿ ತೋರಿಸುವ ಪ್ರಯತ್ನವಾಗಿರುವುದನ್ನು ಕಾಣಬಹುದು. ಇದೊಂದು ಉತ್ತಮವಾದ ಅನುವಾದಿತ ಕೃತಿಯೆಂದು ಹೇಳಬಹುದು.

ಬಿ.ಆರ್.ಲಕ್ಷ್ಮಣ್‌ರಾವ್ ಅವರು ತಮ್ಮದೇ ಕವಿತೆಗಳನ್ನು ಇಂಗ್ಲೀಷ್‌ಗೆ ಅನುವಾದ ಮಾಡಿದ್ದಾರೆ. 'Coloumbus & other Poems' ಎಂಬ ಕೃತಿಯಲ್ಲಿ ೫೩ ಕವಿತೆಗಳನ್ನು ಇಂಗ್ಲೀಷ್ ನಲ್ಲಿ ತಂದಿದ್ದಾರೆ. ಅವರ ಇವರೆಗಿನ ಕವನಗಳ ಎಲ್ಲಾ ಸಂಕಲನಗಳ ಆಯ ಕವನಗಳು ಇಂಗ್ಲೀಷ್ ಅನುವಾದವಾಗಿವೆ. ೧೯೮೮ ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡಮಿಗಾಗಿ 'ಕವಿತೆ' ಎಂಬ ಸಂಪಾದಿತ ಕೃತಿಯನ್ನು ಹೊರ ತಂದಿದ್ದಾರೆ. ಇದು ಆ ಸಾಲಿನಲ್ಲಿ ಬಂದಿರುವ ಕವಿಗಳ ಉತ್ತಮ ಕವಿತೆಗಳ ಸಂಪಾದನೆಯಾಗಿದೆ, ಅವರ ಕವಿತೆಗಳಲ್ಲಿನ ಪ್ರೇಮ ಕವಿತೆಗಳನ್ನು ಆಯ್ಕೆ ಮಾಡಿ 'ಪ್ರೇಮಾಂತರ' ಕವನ ಸಂಕಲನವು ೨೦೧೦ರಲ್ಲಿ ಹೊರಬಂದಿವೆ. ಹೀಗೆ ಕತೆ, ಕಾವ್ಯ, ವಿಮರ್ಶೆ ಅನುವಾದಗಳನ್ನು ರಚಿಸಿರುವ ಲಕ್ಷ್ಮಣ್‌ರಾವ್ ರವರು ನಾಟಕ ಪ್ರಕಾರದಲ್ಲಿ ಕೃತಿ ರಚಿಸಿದ್ದಾರೆ. 'ನನಗ್ಯಾಕೋ ಡೌಟು' ಎಂಬ ನಗೆ ನಾಟಕವನ್ನು ೨೦೦೯ರಲ್ಲಿ ಹೊರ ತಂದಿದ್ದು ಇದು ಸರಳ ಸಾಮಾನ್ಯ ವಸ್ತು ವಿಷಯ ನವಿರಾದ ಹಾಸ್ಯದ ಮೂಲಕ ಸ್ವಲ್ಪ ಮಟ್ಟಿನ ಗಂಭೀರತೆಯನ್ನು ಹೊಂದಿರುವ ನಾಟಕವಾಗಿದೆ. ಸಣ್ಣ ಕಾರಣಕ್ಕೆ ಸಂಶಯಕ್ಕೊಳಗಾದ ದಂಪತಿಗಳ ಮಧ್ಯೆ ವಿರಸವನ್ನುಂಟು ಮಾಡುವುದು, ಅನುಮಾನವೆಂಬ ಹುಳುವಾಗಿದೆ. ಇದು ಕೊನೆಗೆ ಪರಸ್ಪರ ದೂರಾಗುವ ಮಟ್ಟಕ್ಕೆ ಹೋಗುತ್ತದೆ. ಇದೇ ಮುಗ್ಧ ಪ್ರೇಮಿಗಳ ಮಧ್ಯೆಯು ಬಿರುಕನ್ನುಂಟು ಮಾಡುತ್ತದೆ. ಅಂತಿಮವಾಗಿ ಎಲ್ಲವು ತಿಳಿಯಾಗುತ್ತದೆ. ಇದು ನಾಟಕದ ವಸ್ತು ವಿಷಯ ಹಾಸ್ಯ, ವ್ಯಂಗ್ಯ, ವಿಡಂಬನಾತ್ಮಕ ಸನ್ನಿವೇಶಗಳನ್ನು ನಿರೂಪಣೆಯೊಂದಿಗೆ ಸಾಮಾನ್ಯವಾಗಿ ಸಾಂಸಾರಿಕ ಬದುಕಿನಲ್ಲಿ ಉಂಟಾಗುವ ಸಣ್ಣ ಎಳೆಯೇ ಎಂಥ ಬಿರುಕು ಮೂಡಿಸುತ್ತದೆಂದು

ನಿರೂಪಿಸುತ್ತಾರೆ. ಈ ನಾಟಕವು 'ಸ್ಯಾನ್ ಫ್ರಾನ್ಸಿಸ್ಕೊದಲ್ಲಿ' ಅಭಿನಯಕ್ಕಾಗಿ ಆಯ್ಕೆಯಾಗಿರುವುದು ಗಮನಾರ್ಹ ವಿಷಯವೆಂದು ಗುರುತಿಸಬಹುದು.

ಬಿ.ಆರ್.ಲಕ್ಷ್ಮಣ್‌ರಾವ್ ಅವರು ಸಾಹಿತ್ಯ ಕ್ಷೇತ್ರದಲ್ಲಿ ಹೆಚ್ಚು ಗುರುತಿಸಿಕೊಂಡಿರುವಂತೆಯೇ ಸುಗಮ ಸಂಗೀತ ಕ್ಷೇತ್ರದಲ್ಲಿಯೂ ಸಾಕಷ್ಟು ಕೃಷಿ ನಡೆಸಿದ್ದಾರೆ. ಮನೆಯಲ್ಲಿ ಸಂಗೀತದ ವಾತಾವರಣ ಸ್ವಲ್ಪ ಮಟ್ಟಿಗಿತ್ತು. ತಂದೆ ಪಿಟೀಲು ನುಡಿಸುತ್ತಿದ್ದರು ಜೊತೆಗೆ ಲಕ್ಷ್ಮಣ್‌ರಾವ್ ಅವರಿಗೆ ಚಿಕ್ಕಂದಿನಿಂದಲೂ ಹಾಡುವ ಅಭ್ಯಾಸವಿತ್ತು ಕಾಲೇಜು ದಿನಗಳಲ್ಲಿ ತೆಲಗು ಸಿನಿಮಾ ಗೀತೆಗಳನ್ನು ಹಾಡುವ ಮೂಲಕ ಬಹುಮಾನವನ್ನು ಪಡೆದುಕೊಂಡಿದ್ದರು. ಜೊತೆಗೆ ಭಾವಗೀತೆಗಳನ್ನು ಹಾಡುತ್ತಿದ್ದರು ಅವರ ಭಾವಗೀತೆಗಳ ಧ್ವನಿ ಸುರುಳಿಯ ಮೂಲಕವೇ ಹೆಚ್ಚಿನ ಜನರನ್ನು ತಲುಪಿರುವುದು ಎಂಬುದನ್ನು ಗುರುತಿಸಬಹುದು. ಹಾಗಾಗಿ ಅವರ ಗೀತೆಗಳು ಸುಗಮ ಸಂಗೀತ ಕ್ಷೇತ್ರದಲ್ಲಿ ಹೆಚ್ಚಿನ ಜನಪ್ರಿಯತೆ ಗಳಿಸಿವೆ. ತಾವೇ ಹಾಡಿದ್ದಾರೆ, ಹಾಗೆಯೇ ಬೇರೆ ಬೇರೆ ಗಾಯಕರು ಇವರ ಗೀತೆಗಳನ್ನು ಹಾಡಿದ್ದಾರೆ. 'ಸಿ. ಅಶ್ವಥ್''ಮೈಸೂರು ಅನಂತ ಸ್ವಾಮಿ 'ರತ್ನ ಮಾಲಾ ಪ್ರಕಾಶ' 'ಉಪಸಾನ ಮೋಹನ್' 'ಪಂಚಮಿ ಹಳಿಬಂಡಿ' ಎಂ.ಡಿ. ಪಲ್ಲವಿ, ಸುಪ್ರಿಯ ಆಚಾರ್ಯ ಪ್ರೇಮಲತಾ ದಿವಾಕರ್, ಪಿ.ಎಂ. ಮಂಗಳ, ಬಿ.ಜೆ. ಭಾರತಿ, ಶಿವಮೊಗ್ಗ ಸುಬ್ಬಣ್ಣ, ಬಿ.ಆರ್. ಛಾಯಾ, ವೈ.ಕೆ. ಮುದ್ದುಕೃಷ್ಣ, ಯಶವಂತ ಹಳಿಬಂಡಿ, ಶ್ರೀ ಅರವಿಂದ ಅಪೂರ್ವ ಶ್ರೀಧರ್ ಅರ್ಚನ ಉಡುಪ ಇವರ ಗಾಯನವಲ್ಲ 'ಸುಬ್ಬಾಭಟ್ಟರ ಮಗಳೇ' 'ಆಲಿಂಗನ, 'ಪ್ರೇಮ' 'ನನ್ನವಳು' 'ಹೂ ನಗೆ' ಗೆಳೆಯರಿರಲಿ ಈ ಬಾಳಿನಲ್ಲಿ' 'ಕೊಲ್ಲುವುದಾದರೆ ಕೊಂದು ಬಿಡು' 'ಹೇಳಿ ಹೋಗು ಕಾರಣ' 'ಹಾಡೇ ಮಾತಾಡೇ' ವಾಸಂತೀ, ದೇವವೀಣೆ, ಜೀವ, ಸ್ನೇಹ, ಇತ್ಯಾದಿ ಧ್ವನಿ ಸುರುಳಿಗಳನ್ನು ಹೊರ ತಂದಿದ್ದಾರೆ. ಇವರ ಗೀತೆಗಳ ಜೊತೆಗೆ ಎಚ್.ಎಸ್. ವೆಂಕಟೇಶಮೂರ್ತಿ, ಸತ್ಯಾನಂದ ಪಾತ್ರೋಟ, ಡಾ. ಎಸ್.ಎಸ್. ಲಕ್ಷ್ಮೀ ನಾರಾಯಣಭಟ್ಟ ಇವರ ರಚನೆಗಳನ್ನು ಸೇರಿಸಿಕೊಂಡಿದ್ದಾರೆ. 'ನಾವಿರುವುದೇ ಹೀಗೆ' ಎಂಬ ಕನ್ನಡ ಹಾಸ್ಯ ಗೀತೆಗಳನ್ನು ದುಂಡಿರಾಜ್ ಅವರ ಗೀತೆಗಳನ್ನು ಸೇರಿಸಿಕೊಂಡು ಧ್ವನಿ ಸುರುಳಿ ಹೊರ ತಂದಿದ್ದಾರೆ. ಮಕ್ಕಳ ಶೈಕ್ಷಣಿಕ ಗೀತೆಗಳಿಂದ ಕೂಡಿದ 'ಕಲಿಯೋಣ ಬನ್ನಿ' ಧ್ವನಿ ಸುರುಳಿಗಳು ಮಕ್ಕಳ ಭಾಷಾ ಬೆಳವಣಿಗೆಗೆ ಹಾಡಿನ ಮೂಲಕ ವಿವಿಧ ಪರಿಕಲ್ಪನೆಗಳನ್ನು ಮಕ್ಕಳಲ್ಲಿ ಬೆಳೆಸುವ ಆಶಯದಿಂದ ಹೊರ ಬಂದಿವೆ. ಜಯಂತ ಕಾಯ್ಕಿಣಿ, ಎಚ್.ಎಸ್. ವೆಂಕಟೇಶಮೂರ್ತಿ ಅವರ ರಚನೆಗಳನ್ನು ಇದು ಒಳಗೊಂಡಿವೆ. ಆಡಿ–ಹಾಡಿ ನಲಿಯುವ ಮೂಲಕ ಮಕ್ಕಳಲ್ಲಿ ವಿವಿಧ ಪರಿಕಲ್ಪನೆಗಳು ಮೂಡುವುದಕ್ಕೆ ಇದು ಸಹಕಾರಿಯಾಗುತ್ತದೆ ಹೀಗೆ ಬಿ.ಆರ್.ಲಕ್ಷ್ಮಣ್‌ರಾವ್ ಅವರು ಸುಗಮಸಂಗೀತ ಕ್ಷೇತ್ರದಲ್ಲೂ ಮಹತ್ವದ ಕೆಲಸ ಮಾಡಿದ್ದಾರೆ. ದೂರದರ್ಶನ, ಪತ್ರಿಕಾ ಮಾಧ್ಯಮಗಳಲ್ಲಿ ಹರಟೆ, ಹಾಸ್ಯ, ಗೋಷ್ಠಿ, ಕವಿಗೋಷ್ಠಿ, ಮಂಥನ ಕಾರ್ಯಕ್ರಮಗಳ ಮೂಲಕವೂ ಸಾಹಿತ್ಯವನ್ನು ಜನರ ಬಳಿಗೆ ತಂದಿದ್ದಾರೆ. ಚಲನಚಿತ್ರ ಗೀತೆಗಳಾಗಿ 'ಬಾರೆ ರಾಜಕುಮಾರಿ' 'ಜಾಲಿ ಬಾರಿ'ನಲ್ಲಿ ಎಂಬ ಗೀತೆಗಳು ಪ್ರಚಾರ ಪಡೆದಿವೆ. ದೂರದರ್ಶನದ

ದಾರಾವಾಹಿಗಳಿಗೆ ಶೀರ್ಷಿಕೆ ಗೀತೆಗಳನ್ನು ಬರೆದಿದ್ದಾರೆ. 'ಎದೆ ತುಂಬಿ ಹಾಡುವೆನು', 'ಅಪ್ಪ', 'ಮನ್ವಂತರ', 'ನನ್ನವಳು', 'ಕನಕ', 'ಜೀವನ್ಮುಖಿ' 'ಗೆಳತಿ', ಮಂಥನ ಸುಪನಾತಿ ಸುಬ್ಬಿ' 'ಅನಾವರಣ' ಇವುಗಳ ಶೀರ್ಷಿಕೆ ಗೀತೆಗಳಾಗಿಯೂ ಪ್ರಚಾರ ಪಡೆದಿವೆ. ಹೀಗೆ ತಮ್ಮ ಸಾಹಿತ್ಯ ಬರಹದ ಮೂಲಕ ಮತ್ತು ಮಾಧ್ಯಮಗಳ ಮೂಲಕ ಜನಪ್ರಿಯ ಕವಿಗಳೆಂದು ಗುರುತಿಸಿಕೊಂಡಿರುವ ಬಿ.ಆರ್.ಲಕ್ಷ್ಮಣ್‌ರಾವ್ ಅವರಿಗೆ ಪ್ರಶಸ್ತಿ ಪುರಸ್ಕಾರಗಳು ಬಂದಿವೆ. ೧೯೮೧ ರಲ್ಲಿ 'ಲಿಲ್ಲಿ ಪುಟ್ಟಿಯ ಹಂಬಲ' ಕವನ ಸಂಕಲನಕ್ಕೆ ಕರ್ನಾಟಕ ಸಾಹಿತ್ಯ ಅಕಾಡಮಿಯ ಬಹುಮಾನ ಬಂದಿರುತ್ತದೆ ೧೯೯೮ ರಲ್ಲಿ 'ಎಡೆ' ಕವನ ಸಂಕಲನಕ್ಕೆ 'ಗೊರೂರು ಸಾಹಿತ್ಯ ಪ್ರಶಸ್ತಿ ಲಭಿಸಿರುತ್ತದೆ. ೧೯೯೮ರಲ್ಲಿ 'ಚುಟುಕು ರತ್ನ' ಪ್ರಶಸ್ತಿ ಲಭಿಸಿದೆ. ೨೦೦೮ರಲ್ಲಿ 'ಇವಳು ನದಿಯಲ್ಲ' ಕವನ ಸಂಕಲನಕ್ಕೆ ಡಾ. ಪು.ತಿ.ನ ಕಾವ್ಯ ಪುರಸ್ಕಾರ ಲಭಿಸಿದೆ.

ಆಕಾಶವಾಣಿಯ ಸರ್ವ ಭಾಷಾ ಕವಿ ಸಮ್ಮೇಳನದಲ್ಲಿ ಕನ್ನಡದ ಪ್ರತಿನಿಧಿಯಾಗಿ ೨೦೦೪ ರಲ್ಲಿ ಭಾಗವಹಿಸಿರುತ್ತಾರೆ. ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿ ಅಧ್ಯಕ್ಷತೆಯನ್ನು ವಹಿಸಿರುತ್ತಾರೆ.

ಲಕ್ಷ್ಮಣ್‌ರಾವ್ ಅವರಿಗೆ ೬೦ ವರ್ಷ ತುಂಬಿದಾಗ ಗೆಳೆಯರೆಲ್ಲ ಸೇರಿ 'ಚಿಂತಾಮಣಿ' ಎಂಬ ಅಭಿನಂದನಾ ಗ್ರಂಥವನ್ನು ಅರ್ಪಿಸಿರುತ್ತಾರೆ. ಇದು ೨೦೦೪ ರಲ್ಲಿ ಪ್ರಕಟವಾಗಿದ್ದು ಇದರಲ್ಲಿ ಸ್ಪಂದನ, ಅವಲೋಕನ, ಸಂಕೀರ್ಣ, ಸಂದರ್ಶನ, ಸಹಚಲನ ಎಂಬ ವಿಭಾಗಗಳನ್ನು ಮಾಡಿಕೊಂಡಿದ್ದಾರೆ 'ಸ್ಪಂದನ' ವಿಭಾಗದಲ್ಲಿ ಅವರೊಂದಿಗಿನ ಪರಿಚಯ ಸ್ನೇಹ ಅವರ ಗುಣ ನಡತೆಯ ಬಗ್ಗೆ ಹಲವು ಕವಿಗಳು ತಮ್ಮ ಅಭಿಪ್ರಾಯಗಳನ್ನು ಹಂಚಿಕೊಂಡಿದ್ದಾರೆ.

'ಅವಲೋಕನ' ವಿಭಾಗದಲ್ಲಿ ಲಕ್ಷ್ಮಣರಾವ್ ಅವರ ಕಾವ್ಯ, ಕಥೆ ಕಾದಂಬರಿಗಳನ್ನು ಕುರಿತ ವಿಚಾರ ವಿಮರ್ಶೆಗಳನ್ನು ಕಾಣಬಹುದು 'ಸಂಕೀರ್ಣ' ವಿಭಾಗದಲ್ಲಿಯೂ ಅವರ ಕೃತಿಗಳನ್ನು ಕುರಿತು ತಮ್ಮ ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ. 'ಸಂದರ್ಶನ' ವಿಭಾಗದಲ್ಲಿ ಲಕ್ಷ್ಮಣರಾವ್ ಅವರ ಬದುಕು ಬರಹವನ್ನು ಕುರಿತಂತೆ ಪ್ರಶ್ನೆ ಹಾಗೂ ಉತ್ತರಗಳನ್ನು ನೀಡಿರುವ ವಿಷಯವಿದೆ. ಸಹ ಚಲನಭಾಗದಲ್ಲಿ ಲಕ್ಷ್ಮಣ್ ರಾವ್ ಅವರ ಕೃತಿಗೆ ಬರೆದಿರುವ ಮುನ್ನುಡಿ ಹಿನ್ನುಡಿಗಳ ಬರಹವಿದೆ.

ಇದು ಬಿ.ಆರ್ ಲಕ್ಷ್ಮಣ್ ರಾವ್ ಅವರ ಬದುಕು ಮತ್ತು ಬರಹದ ವೈಶಿಷ್ಟಗಳನ್ನು ಅಧ್ಯಯನಕ್ಕೆ ಪೂರಕವಾಗುವ ರೀತಿಯಲ್ಲಿ ಗುರುತಿಸಿಕೊಂಡಿರುವ ಬಗೆಯಾಗಿದೆ. ಇದರಲ್ಲಿ ಲಕ್ಷ್ಮಣ್ ರಾವ್ ಅವರ ಸೃಜನ ಶೀಲ ಬರಹದ ಸ್ಥೂಲವಾದ ಪರಿಚಯ ಮತ್ತು ವಿಶಿಷ್ಟ ಅಂಶಗಳನ್ನು ಗುರುತಿಸುವ ಮೂಲಕ ಮುಂದಿನ ಅಧ್ಯಾಯಗಳಲ್ಲಿ ಪ್ರತ್ಯೇಕವಾದ ಅಧ್ಯಯನ ಮಾಡಲಾಗುತ್ತದೆ.

# ಅಧ್ಯಾಯ – ೩

## ಸಾಹಿತ್ಯ ಮತ್ತು ಜನಪ್ರಿಯತೆ – ಅಂತಃ ಸಂಬಂಧಗಳು

೩.೧ ಸಾಹಿತ್ಯದಲ್ಲಿ ಜನಪ್ರಿಯತೆಯ ಅಂಶಗಳು

೩.೨. ಜನಪ್ರಿಯ ಸಾಹಿತ್ಯದ ಪರಿಕಲ್ಪನೆ

ಜನಪ್ರಿಯತೆ ಮತ್ತು ಸಾಹಿತ್ಯ ಇವೆರಡರ ನಡುವೆ ಅಂತಃ-ಸಂಬಂಧವಿದೆ. ಜನಪ್ರಿಯತೆ ಎಂಬ ಮಾತು ಸಾಹಿತ್ಯದ ಎಲ್ಲಾ ಪ್ರಕಾರಗಳಿಗೂ ಅನ್ವಯಿಸುತ್ತದೆ. ರಾಮಾಯಣ, ಮಹಾಭಾರತ ಕಾವ್ಯಗಳಿಂದ ಪ್ರಾರಂಭವಾಗಿ ಇಂದಿನ ಸಾಹಿತ್ಯಕ್ಕೂ ಇದು ಒಳಗೊಳ್ಳುವ ಅಂಶವಾಗಿದೆ. ಇದನ್ನು ಯಾವುದೇ ಒಂದು ಬಗೆಯ ಸಾಹಿತ್ಯಕ್ಕೆ ಮಾತ್ರ ಅನ್ವಯಿಸಿ ಹೇಳಲಾಗದು. ಇದು ಎಲ್ಲಾ ಕಾಲದ ಸಾಹಿತ್ಯದಲ್ಲಿಯೂ ಕಂಡುಬರುತ್ತದೆ. ಆದರೆ ಜನಪ್ರಿಯತೆಯ ರೀತಿ ಮಾತ್ರ ಒಂದೇ ರೀತಿಯಾಗಿರದೆ ಕಾಲದಿಂದ ಕಾಲಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತದೆ. ಜನಪ್ರಿಯತೆ ಎಂಬುದು ಮಾತ್ರ ಸಾಹಿತ್ಯದಲ್ಲಿ ಇದ್ದೇ ಇರುತ್ತದೆ ಎನ್ನಬಹುದು.

ಅಂದಿನಿಂದ ಇಂದಿನವರೆಗಿನ ಸಾಹಿತ್ಯದ ಜನಪ್ರಿಯತೆಯನ್ನು ಕುರಿತು ಅವಲೋಕನ ಮಾಡಿದಾಗ ಜನಪ್ರಿಯತೆಯ ವಿಭಿನ್ನ ನೆಲೆಗಳನ್ನು ಹೀಗೆ ಗುರುತಿಸಿಕೊಳ್ಳಬಹುದು. ಮೌಖಿಕ ಸಾಹಿತ್ಯವಾದ ಜಾನಪದ ಸಾಹಿತ್ಯಕ್ಕೂ ಈ ಮಾತನ್ನು ಅನ್ವಯಿಸಿಕೊಳ್ಳಬಹುದು. ತಮ್ಮ ಮನಸ್ಸಿನ ದುಃಖ ದುಮ್ಮಾನಗಳನ್ನು, ಸಾಮಾಜಿಕ ರೀತಿ-ನೀತಿ, ಸಂಪ್ರದಾಯ, ಆಚರಣೆಗಳನ್ನು ಕುರಿತು, ದೇವರನ್ನು ಕುರಿತು ಹಾಡಿನ ಮೂಲಕ ಅಭಿವ್ಯಕ್ತಿಸಿರುವ ಜಾನಪದ ಹಾಡುಗಳನ್ನು ಸಂಗ್ರಹಿಸುವ, ಮತ್ತು ವಿವಿಧ ಮಾದ್ಯಮಗಳ ಗಾಯಕರ ಮೂಲಕ ಜನಪ್ರಿಯಗೊಳಿಸುತ್ತಿರುವುದನ್ನು ಇಂದು ನಾವು ಕಾಣಬಹುದಾಗಿದೆ. ಅಂದ ಮೇಲೆ ಮೌಖಿಕ ಸಾಹಿತ್ಯಕ್ಕೂ ಜನಪ್ರಿಯತೆ ಎಂಬ ಮಾತನ್ನು ಅನ್ವಯಿಸಿಕೊಳ್ಳಬಹುದು.

ಸಾಹಿತ್ಯವು ಸಂಸ್ಕೃತಿಯ ಭಾಗವಾಗಿರುವಂತೆಯೇ ಕಲೆ ಎಂಬುದಾಗಿಯೂ ಪರಿಗಣಿಸಲಾಗುತ್ತದೆ. ಕಲೆಯ ಉದ್ದೇಶ ಮನರಂಜನೆ ಎಂದು ಒಪ್ಪಿಕೊಂಡಿರುವಂತೆ ಸಾಹಿತ್ಯವು ಕಲೆ ಎಂದುಕೊಂಡಾಗ ಅದರ ಉದ್ದೇಶವು ರಸಾನಂದ ಉಂಟುಮಾಡುವುದೇ ಆಗಿರುತ್ತದೆ. ಪ್ರಾಚೀನ ಕಾವ್ಯಗಳ ಜನಪ್ರಿಯತೆ ಎಂಬುದು ಒಂದು ಸೀಮಿತ ವಲಯದ ಓದುಗ ವರ್ಗಕ್ಕೆ ಅನ್ವಯವಾಗುತ್ತದೆ. ಸಂಸ್ಕೃತ ಭೂಯಿಷ್ಟವಾದ ಪಾಂಡಿತ್ಯ ಪೂರ್ಣ ಕವಿಗಳ ಕಾವ್ಯಗಳು, ಪಂಡಿತ ವರ್ಗದ ಮೆಚ್ಚುಗೆ ಗಳಿಸಿರುವುದನ್ನು ಕಾಣುತ್ತೇವೆ. ಇದಕ್ಕಾಗಿಯೇ ಪಂಪನನ್ನು ಕಲಿತವರ ಕಾಮಧೇನು ಎನ್ನುತ್ತಾರೆ. ಪಂಪ ಕವಿಯ ಜನಪ್ರಿಯತೆಯ ವ್ಯಾಪಕತೆಯನ್ನು ಗಮನಿಸಿದಾಗ ಆ ಕಾಲದಲ್ಲಿ ಸಾಹಿತ್ಯದ ಜನಪ್ರಿಯತೆ ಯಾವ ನೆಲೆಯಿತ್ತು ಎಂಬುದು ಸ್ಪಷ್ಟವಾಗುತ್ತದೆ. ಪಂಪ, ಪೊನ್ನ, ರನ್ನರ ಕಾವ್ಯಗಳು ಓದುಗಬ್ಬವಾಗಿ ಹೆಚ್ಚಿನ ಜನಪ್ರಿಯತೆ ಗಳಿಸಿರುವುದು

ಕಂಡುಬರುತ್ತದೆ. ಕವಿಯ ಉದ್ದೇಶದಲ್ಲಿ ಜನಪ್ರಿಯತೆ ಎಂಬುದು ಮುಖ್ಯವಾಗಿಲ್ಲದೆ ಹೋದರು ತಮ್ಮ ಕಾವ್ಯಗಳು ಪಂಡಿತರ ಮನ್ನಣೆ ಗಳಿಸಬೇಕೆಂಬ ಸದಾಶಯವಂತು ಇರುತ್ತಿತ್ತು. ಹಾಗಾಗಿ ಪ್ರಾಚೀನ ಕಾವ್ಯ ಪ್ರಕಾರದ ಜನಪ್ರಿಯತೆಯು ಸೀಮಿತ ವಲಯಕ್ಕೆ ಸಂಬಂಧಿಸಿತ್ತು. ಒಂದು ಕೃತಿಯ ಸಾರ್ಥಕತೆ ಓದುಗನಲ್ಲಿ ನೆಲೆಗೊಂಡಾಗಲೇ ಎಂಬುದು ಸ್ಪಷ್ಟವಾಗಿರುತ್ತಿತ್ತು. ಕವಿ ಸ್ವಂತ ಸುಖಕ್ಕೆ ಎಂದು ಕಾವ್ಯ ಬರೆದರೂ ಅಂತಿಮವಾಗಿ ಅದು ಓದುಗ ಸಹೃದಯನ ಮನದಲ್ಲಿ ನೆಲೆ ನಿಲ್ಲಬೇಕು ಎಂಬುದೇ ಆಗಿರುತ್ತಿತ್ತು.

ದೇಶಿಯ ಸಾಹಿತ್ಯಗಳಾದ ವಚನ ಸಾಹಿತ್ಯ, ದಾಸ ಸಾಹಿತ್ಯದ ಜನಪ್ರಿಯತೆಯನ್ನು ಗಮನಿಸಿದಾಗ ಪ್ರಾಚೀನ ಕಾವ್ಯಗಳಿಗಿಂತ ಭಿನ್ನವಾದ ನೆಲೆಯಲ್ಲಿ ಅದು ಜನರಲ್ಲಿ ನೆಲೆಯೂರಿದೆ ಎನ್ನಬಹುದು. ಅಂದರೆ ಶರಣ ಸಾಹಿತ್ಯದ ವಚನಗಳು ಹಾಡುವ ಪರಂಪರೆಯ ಮೂಲಕ ಹಾಡುಗಬ್ಬವಾಗಿ ಜನಪ್ರಿಯತೆ ಗಳಿಸಿರುವುದನ್ನು ಕಾಣಬಹುದು. ಇದಕ್ಕೆ ಕಾರಣವೇನೆಂದರೆ ಜನಸಾಮಾನ್ಯರ ಭಾಷೆಗೆ ನಿಲುಕುವ ಭಾಷೆ, ಮತ್ತು ಸರಳವಾದ ಶೈಲಿಯ ಜೊತೆಗೆ ಸಂಗೀತದ ಗುಣಗಳು ಸೇರಿಕೊಂಡಿರುವುದರಿಂದಾಗಿ ಅವು ಹೆಚ್ಚಾಗಿ ಜನರ ಬಳಿಗೆ ತಲುಪಲು ಸಾಧ್ಯವಾಗಿದೆ. ಬಸವಣ್ಣ, ಅಕ್ಕಮಹಾದೇವಿ, ಅಲ್ಲಮ ಪ್ರಭು, ಅಂಬಿಗರ ಚೌಡಯ್ಯ, ಮೊದಲಾದವರ ವಚನಗಳು ಗಾಯನದ ಮೂಲಕ ಹೆಚ್ಚಿನ ಸಂಖ್ಯೆಯ ಕೇಳುಗರನ್ನು, ಓದುಗರನ್ನು ಪಡೆದುಕೊಳ್ಳಲು ಸಾಧ್ಯವಾಗಿವೆ. ಅಂತೆಯೇ ಕನಕದಾಸ, ಪುರಂದರ ದಾಸರ ಕೀರ್ತನೆಗಳು ಕೂಡ ಸಂಗೀತ ಕ್ಷೇತ್ರದ ಮೂಲಕ ಹಾಡುಗಬ್ಬವಾಗಿಯೇ ಅಪಾರ ಸಂಖ್ಯೆ ಕೇಳುಗ ಭಕ್ತರನ್ನು ಒಳಗೊಂಡಿದೆ. ಪುರಂದರ ದಾಸರು ಕರ್ನಾಟಕ ಸಂಗೀತ ಕ್ಷೇತ್ರಕ್ಕೆ ಕೊಟ್ಟ ಕೊಡುಗೆಯೇ ಅಪಾರವಾಗಿದ್ದು ಅದು ಜನ ಮಾನಸದಲ್ಲಿ ನೆಲೆ ನಿಲ್ಲಲು ಕಾರಣವಾಗಿದೆ. ಯಾವುದೇ ಸಭೆ, ಸಮಾರಂಭ, ಸಂಗೀತ ಕಛೇರಿಗಳಲ್ಲೂ ದಾಸರ ಕೀರ್ತನೆಯಿಲ್ಲದೆ ಕಛೇರಿ ಪ್ರಾರಂಭ, ಇಲ್ಲವೆ ಮುಕ್ತಾಯವಾಗುವುದಿಲ್ಲ. ದೇಶಿಯ ಸಾಹಿತ್ಯದ ಜನಪ್ರಿಯತೆಗೆ ಕಾರಣವನ್ನು ಗಮನಿಸಿದಾಗ ಸರಳವಾದ ಭಾಷೆ, ಜನಸಾಮಾನ್ಯರಿಗೆ ಹತ್ತಿರವಾದ ಶೈಲಿಯೇ ಪ್ರಮುಖವಾಗಿದ್ದು ಅವುಗಳಿಗಾಗಿ ಜನಪ್ರಿಯತೆ ಸಾಧಿಸಿವೆ ಎನ್ನಬಹುದು.

ಅನಂತರದಲ್ಲಿ ಹರಿಹರ, ರಾಘವಾಂಕ, ಕುಮಾರವ್ಯಾಸ, ಲಕ್ಷ್ಮೀಶ ಇತ್ಯಾದಿ ಕವಿಗಳ ಕಾವ್ಯವು ಜನಪ್ರಿಯತೆ ಗಳಿಸಿರುವುದು ಅವುಗಳ ನಡುಗನ್ನಡ ಭಾಷಾ ಶೈಲಿ, ಗಮಕಿಗಳಿಗೆ ಸರಾಗವಾಗಿ ವಾಚನ ಮಾಡಲು ಸಾಧ್ಯವಾಗಿರುವುದು. ಕುಮಾರವ್ಯಾಸ ಭಾರತ ಗಮಕ ಕಲೆಯ ಮೂಲಕ ಅದು ವ್ಯಾಪಕವಾದ ಜನಪ್ರಿಯತೆ ಗಳಿಸಿತು. ಗಮಕಿಗಳ ವಾಚನದಿಂದಾಗಿ ಕಲಿಯದವರಿಗೂ ಇವರ ಕಾವ್ಯ ತಲುಪುವಂತಾಗಿ ಪಂಪ 'ಕಲಿತವರಿಗೆ ಕಾಮಧೇನು' ವಾದರೆ, ಕುಮಾರವ್ಯಾಸ 'ಕಲಿಯದವರ ಕಾಮಧೇನು' ಎನ್ನುವಂತಾಯಿತು.

ಆಧುನಿಕ ಸಾಹಿತ್ಯದ ನವೋದಯ, ಪ್ರಗತಿಶೀಲ, ದಲಿತ ಬಂಡಾಯ, ಸಾಹಿತ್ಯದ ಜನಪ್ರಿಯತೆಯ ಬಗ್ಗೆ ಚಿಂತಿಸಿದಾಗ ಪ್ರಾಚೀನ ಕಾವ್ಯಗಳ ಜನಪ್ರಿಯತೆ ಒಂದು ವರ್ಗದ ವಲಯಕ್ಕೆ ಸೀಮಿತವಾಗಿದ್ದದ್ದು ಆಧುನಿಕ ಸಂದರ್ಭಕ್ಕೆ ಬಂದಾಗ ಅದು ಎಲ್ಲಾ ವರ್ಗಕ್ಕೂ ಅನ್ವಯಿಸುವಂತಾಯಿತು. ಕವಿತೆಗಳು, ಕಥೆ, ಕಾದಂಬರಿ, ನಾಟಕ, ಪ್ರಬಂಧ, ಲೇಖನ, ಹನಿಗವಿತೆಗಳು ಹೀಗೆ ವಿವಿಧ ಪ್ರಕಾರಗಳಲ್ಲಿ ರಚಿತವಾದ ಸಾಹಿತ್ಯವು ಜನಪ್ರಿಯವಾಗಿರುವುದನ್ನು ಕಾಣುತ್ತೇವೆ. ಬಿ.ಎಂ.ಶ್ರೀ, ಕುವೆಂಪು, ಬೇಂದ್ರೆ, ಕಾರಂತ, ಮಾಸ್ತಿ, ಪು.ತಿ.ನ, ಜಿ.ಎಸ್. ಶಿವರುದ್ರಪ್ಪ ಕೆ.ಎಸ್.ನರಸಿಂಹಸ್ವಾಮಿ, ಕೆ.ಎಸ್. ನಿಸಾರ್ ಅಹ್ಮದ್, ಚೆನ್ನವೀರ ಕಣವಿ, ಮುಂತಾದವರ ಬರಹಗಳು ಕಾಲಘಟ್ಟದಲ್ಲಿ ಹೆಚ್ಚಿನ ಜನಪ್ರಿಯತೆ ಗಳಿಸಿರುವುದನ್ನು ಕಾಣಬಹುದು. ಆಧುನಿಕ ಸಾಹಿತ್ಯವು ಓದುಗಬ್ಬವಾಗಿ ಮತ್ತು ಹಾಡುಗಬ್ಬವಾಗಿ ಎರಡು ನೆಲೆಯಲ್ಲಿಯೂ ಜನಪ್ರಿಯತೆ ಗಳಿಸಿರುವುದು ಕಂಡುಬರುತ್ತದೆ. ನವೋತ್ತರ ಕಾಲಘಟ್ಟದಲ್ಲಿ ವಿಮರ್ಶೆಯು ಸಾಹಿತ್ಯವನ್ನು ಜನಪ್ರಿಯ ಮತ್ತು ಗಂಭೀರ ಎಂದು ಪರಿಗಣಿಸಿ ಚರ್ಚಿಸುವ ಮೂಲಕ ಕಾದಂಬರಿ ಪ್ರಕಾರಕ್ಕೆ ಹೆಚ್ಚಾಗಿ ಅನ್ವಯಿಸಿಕೊಂಡು ಚರ್ಚಿಸುತ್ತಿದೆ. ಆದರೆ ಇದು ಕಾದಂಬರಿ ಪ್ರಕಾರಕ್ಕೆ ಮಾತ್ರವಲ್ಲದೆ ಸಾಹಿತ್ಯದ ವಿವಿಧ ಪ್ರಕಾರಗಳಾದ ಕಥೆ, ಕಾವ್ಯ, ನಾಟಕ, ಇವುಗಳಿಗೂ ಅನ್ವಯಿಸಿಕೊಂಡು, ಚರ್ಚಿಸಿದಾಗ ಅವುಗಳಲ್ಲಿಯೂ ಜನಪ್ರಿಯತೆಯ ಅಂಶ ಒಳಗೊಳ್ಳುವುದನ್ನು ಕಾಣಬಹುದು.

ಆಧುನಿಕ ಸಾಹಿತ್ಯದ ವಿಶಿಷ್ಟವಾದ ಪ್ರಕಾರವೆಂದು ಹೇಳಲಾಗುವ ಕವಿತೆಗಳು, ಅವುಗಳ ಗೇಯತೆ, ಲಯಬದ್ಧತೆ ಮತ್ತು ಸಂಗೀತದ ಗುಣಗಳಿಂದಾಗಿ ಹಾಡುವ ಪರಂಪರೆಗೆ ಅರ್ಹವಾಗಿವೆ. ಆ ಮೂಲಕವೇ ಅಪಾರ ಜನಪ್ರಿಯತೆ ಗಳಿಸಿರುವುದನ್ನು ಕಾಣುತ್ತೇವೆ. ಅವುಗಳನ್ನು ಹಾಡಲೆಂಬ ಉದ್ದೇಶದಿಂದ ಬರೆಯದೆ ಹೋದರೂ ಕೂಡ ಅವುಗಳಲ್ಲಿ ಅಡಕವಾಗಿರುವ ಆ ಗುಣವೇ ಹಾಡಲು ಪ್ರಧಾನವಾದ ಅಂಶವಾಗಿ, ಸಂಗೀತ ಕ್ಷೇತ್ರದ ಮೂಲಕ ಜನಪ್ರಿಯತೆ ಸಾಧಿಸಿವೆ ಎನ್ನಬಹುದು. ಬಿ.ಎಂ.ಶ್ರೀ, ಕುವೆಂಪು, ಬೇಂದ್ರೆ, ಪು.ತಿ.ನ, ಜಿ.ಎಸ್.ಶಿವರುದ್ರಪ್ಪ, ಕೆ.ಎಸ್. ನರಸಿಂಹಸ್ವಾಮಿ, ಜಿ.ಪಿ.ರಾಜರತ್ನಂ, ಕೆ.ಎಸ್.ನಿಸಾರ ಅಹ್ಮದ್, ಮುಂತಾದವರ ಕವಿತೆಗಳು ಭಾವಗೀತೆಗಳಾಗಿ ಸಂಗೀತ ಕ್ಷೇತ್ರದಲ್ಲಿ ಒಂದು ಹೊಸ ಅಲೆಯನ್ನು ಎಬ್ಬಿಸುವುದರ ಜೊತೆಗೆ ಅಪಾರ ಸಂಖ್ಯೆಯ ಕೇಳುಗ ವರ್ಗವನ್ನು ಗಳಿಸಿಕೊಂಡಿದೆ. ಮೊದಲ 'ತಾಯ ಹಾಲ ಕುಡಿದು', 'ತೆರೆದಿದೆ ಮನೆ ಬಾ ಓ ಅತಿಥಿ', 'ಬಾರಿಸು ಕನ್ನಡ ಡಿಂಡಿಮವ', 'ಎಲ್ಲಾದರೂ ಇರು', 'ನೀ ಹೀಂಗ ನೋಡಬ್ಯಾಡ ನನ್ನ', 'ಇಳಿದು ಬಾ ತಾಯಿ ಇಳಿದು ಬಾ', 'ಎದೆ ತುಂಬಿ ಹಾಡುವೆನು', 'ರಾಯರು ಬಂದರು ಮಾವನ ಮನೆಗೆ', 'ಹೆಂಡ ಹೆಂಡ್ತಿ ಕನ್ನಡ ಪದಗಳು, ನಿತ್ಯೋತ್ಸವ, ಇತ್ಯಾದಿ ಗೀತೆಗಳು ಸಂಗೀತದ ಮೂಲಕ ಜನರನ್ನು ರಂಜಿಸುವುದನ್ನು ಗುರುತಿಸಬಹುದಾಗಿದೆ. ಜನಪ್ರಿಯ ಗಾಯಕರ ಹಾಡುಗಾರಿಕೆಯಿಂದ ಧ್ವನಿಸುರಳಿಗಳು, ವಿವಿಧ ಮಾಧ್ಯಮಗಳ ಮೂಲಕ ಹೆಚ್ಚಿನ ಸಂಖ್ಯೆಯ ಜನರನ್ನು ತಲುಪಿರುವುದನ್ನು ಕಾಣುತ್ತೇವೆ. ಜಿ.ಎಸ್.

ಶಿವರುದ್ರಪ್ಪನವರು ತಮ್ಮ ಕವಿತೆಯಲ್ಲಿ 'ಎಲ್ಲಾ ಕೇಳಲಿ ಎಂದು ನಾನು ಹಾಡುವುದಿಲ್ಲ' ವೆಂದೇ ಹೇಳಿದರು ಅದು ಕೇಳುಗರ ಮೂಲಕವೇ ಜನಪ್ರಿಯವಾಗಿರುವುದು ಅಷ್ಟೆ ಮುಖ್ಯ ಎಂಬುದು ಗಮನಾರ್ಹವಾಗಿದೆ.

ಹಾಗೆಯೇ ಕಥೆ, ಕಾದಂಬರಿಗಳು, ನಾಟಕಗಳು ಹೆಚ್ಚಿನ ಜನಪ್ರಿಯತೆ ಗಳಿಸಿರುವುದನ್ನು ಕಾಣಬಹುದು. ಮಾಸ್ತಿಯವರ ಕಥೆಗಳು, ತೇಜಸ್ವಿಯವರ ಕಥೆಗಳು, ಕಾರಂತರ ಕಾದಂಬರಿ, ಕರ್ನಾಡರ ನಾಟಕಗಳು, ಇವುಗಳ ಜನಪ್ರಿಯತೆಯನ್ನು ಗಮನಿಸಬಹುದು. ಕೆ.ಎಸ್. ನರಸಿಂಹಸ್ವಾಮಿ ಮತ್ತು ಜಿ.ಪಿ.ರಾಜರತ್ನಂ ಅವರ ಕವಿತೆಗಳು ಯಾವುದೇ ಪಥ, ಪಂಥಗಳನ್ನು ಒಳಗೊಳ್ಳದೆ ತಮ್ಮದೇ ಆದ ವಿಶಿಷ್ಟತೆಗಳಿಂದಾಗಿ ಅವು ಜನಪ್ರಿಯವಾಗಿರುವುದನ್ನು ಕಾಣಬಹುದು. ಟಿ.ಪಿ.ಕೈಲಾಸಂ, ಬಿ.ಚೀ. ಅವರ ಹಾಸ್ಯ ಸಾಹಿತ್ಯವು ಜನಪ್ರಿಯತೆ ಗಳಿಸಿರುವುದನ್ನು ಗಮನಿಸಬಹುದು. ದಲಿತ ಬಂಡಾಯ ಸಾಹಿತ್ಯವು ಕೂಡ ತಮ್ಮದೇ ವಿಶಿಷ್ಟವಾದ ಭಾಷೆ ಬಳಕೆಯ ಮೂಲಕ ಜನಪ್ರಿಯತೆ ಸಾಧಿಸಿಕೊಂಡಿದೆ. ಸಿದ್ದಲಿಂಗಯ್ಯನವರ ಕವಿತೆಗಳು ಧ್ವನಿಸುರಳಿಗಳ ಮೂಲಕ ಹಾಡುಗಾರರ ಮೂಲಕ ಜನಪ್ರಿಯತೆ ಗಳಿಸಿರುವುದನ್ನು ಕಾಣಬಹುದು.

ಹೀಗೆ ಸಾಹಿತ್ಯ ಮತ್ತು ಜನಪ್ರಿಯತೆಯ ನಡುವಿನ ಅಂತಃ ಸಂಬಂಧವನ್ನು ಅಂದಿನಿಂದ ಇಂದಿನವರೆಗೆ ವಿವಿಧ ನೆಲೆಗಳಲ್ಲೂ ಗುರುತಿಸಬಹುದಾಗಿದೆ. ಪ್ರಾರಂಭದಲ್ಲಿ ಕವಿ ತನ್ನ ಸ್ವಂತ ಸುಖಕ್ಕೆ ತೃಪ್ತಿಗಾಗಿ ಕಾವ್ಯ ಎಂದುಕೊಂಡರೂ ಸಹೃದಯ ಓದುಗನಲ್ಲಿ ನೆಲೆ ನಿಲ್ಲುವಲ್ಲಿ ಸಾರ್ಥಕತೆ ಎಂಬುದು ಅಂತರ್ಯದಲ್ಲಿ ಅಡಕವಾಗಿರುತ್ತಿತ್ತು. ಅನಂತರ ಓದುಗರ ನೆಲೆಯಲ್ಲಿ ಸಹೃದಯ ಸುಖಾಯ ಎಂಬುದು ಮುಖ್ಯವಾಗಿದ್ದು ತದನಂತರದಲ್ಲಿ ವಿಮರ್ಶೆ ಸುಖಾಯ ಎಂಬ ನೆಲೆಗೆ ಮುಟ್ಟಿದರೂ ಕೂಡ ಯಾವುದೇ ನೆಲೆಯಲ್ಲಿಯಾದರೂ ಸಾಹಿತ್ಯ ಜನಪ್ರಿಯವಾಗಬೇಕೆಂಬ ಸದಾಶಯವನ್ನು ಹೊಂದಿಯೇ ಸಾಹಿತ್ಯ ರಚನೆಯಾಗುತ್ತಿತ್ತು ಎಂಬುದನ್ನು ಮನಗಾಣಬಹುದು. ಕವಿ ಸಹೃದಯ ಓದುಗ, ವಿಮರ್ಶಕ ಈ ಮೂರು ನೆಲೆಗಳಲ್ಲಿಯೂ ಜನಪ್ರಿಯತೆ ಎಂಬುದು ಒಳಗೊಂಡಿರುತ್ತದೆ. ಜನಪ್ರಿಯತೆ ಎಂಬುದು ಕೇವಲ ಒಂದು ವರ್ಗದ ಸಾಹಿತ್ಯಕ್ಕೆ ಮಾತ್ರ ಸೀಮಿತವಾದುದಲ್ಲ. ಗಂಭೀರ ಸಾಹಿತ್ಯವು ಜನಪ್ರಿಯ ಅಂಶಗಳನ್ನು ಒಳಗೊಂಡಿರುತ್ತದೆ. ಜನಪ್ರಿಯ ಸಾಹಿತ್ಯದಲ್ಲಿ ಜನಪ್ರಿಯತೆಯ ಅಂಶಗಳು ಸರ್ವೆ ಸಾಮಾನ್ಯವಾಗಿ ಕಂಡುಬರುತ್ತವೆ. ಸಾಹಿತ್ಯ ಮತ್ತು ಜನಪ್ರಿಯತೆ ಎಂಬುದಕ್ಕೆ ವಿಮರ್ಶೆ ಗುರುತಿಸಿಕೊಳ್ಳುವ ಏನೇ ಅಂಶಗಳು ಕಾರಣವಾಗಬಹುದಾದರು ಸಾಹಿತ್ಯದಲ್ಲಿ ಜನಪ್ರಿಯತೆಯ ಅಂಶವಂತೂ ಎಲ್ಲಾ ಕಾಲದ ಎಲ್ಲಾ ಬಗೆಯ ಪಂಥ, ಪ್ರಕಾರದ ಸಾಹಿತ್ಯಗಳಿಗೂ ಅನ್ವಯವಾಗುವ ಮಾತೆಂಬುದು ಸ್ಪಷ್ಟವಾಗುತ್ತದೆ. ಜನಪ್ರಿಯತೆಯ ರೀತಿ ಬದಲಾಗಬಹುದು, ಆದರೆ ಜನಪ್ರಿಯತೆ ಎಂಬುದು ಸಾಮಾನ್ಯವಾಗಿ ಎಲ್ಲಾ ಸಾಹಿತ್ಯದಲ್ಲೂ ಕಂಡುಬರುವ ಅಂಶವಾಗಿದೆ ಎಂದು ಗುರುತಿಸಬಹುದು.

ಅಂದ ಮೇಲೆ ಜನಪ್ರಿಯತೆ ಎಂಬುದು ಸಾಹಿತ್ಯದಲ್ಲಿ ಅಂದೂ ಇತ್ತು, ಇಂದೂ ಇದೆ, ಇರುತ್ತದೆ ಕೂಡ, ಇದನ್ನು ಸಾಹಿತ್ಯದ ಗುಣಾತ್ಮಕ ನೆಲೆಯಿಂದಲೆ ಪರಿಭಾವಿಸಿಬಹುದು. ಸಾಹಿತ್ಯ ಓದುವವರ ಸಂಖ್ಯೆಯೇ ವಿರಳವಾಗುತ್ತಿರುವ ಈ ಆಧುನಿಕ ಸಂದರ್ಭದಲ್ಲಿ ಒತ್ತಡದ ಬದುಕಿನ ಜೀವನದ ಜಂಜಾಟದ ಮಧ್ಯೆಯು ಸಾಹಿತ್ಯ ಓದುವ ಕಡೆಗೆ ಓದುಗರನ್ನು ಸೆಳೆಯುವುದು ಮುಖ್ಯವೆಂದಾಗುತ್ತದೆ. ಆ ದಿಶೆಯಲ್ಲಿ ಸರಳವಾಗಿ ಜನರಿಗೆ ಪ್ರಿಯವಾಗುವ ರೀತಿಯಲ್ಲಿ ಹೇಳುವ ಮೂಲಕ ಸಾಹಿತ್ಯವನ್ನು ಜನಪ್ರಿಯಗೊಳಿಸುವುದು ತನ್ಮೂಲಕ ಸಾಹಿತಿಯು ಜನಪ್ರಿಯವಾಗುವುದು ಮುಖ್ಯವೆನ್ನಬಹುದು. ಹೀಗೆ ಸಾಹಿತ್ಯ ಮತ್ತು ಜನಪ್ರಿಯತೆಯ ಅಂತಃ ಸಂಬಂಧವನ್ನು ಗುರುತಿಸಿಕೊಳ್ಳಬಹುದು.

**೩.೧ ಸಾಹಿತ್ಯದಲ್ಲಿ ಜನಪ್ರಿಯತೆಯ ಅಂಶಗಳು**

ಆಧುನಿಕ ವಿಮರ್ಶೆಯು ಸಾಹಿತ್ಯವನ್ನು ಎರಡು ರೀತಿಯಲ್ಲಿ ವಿಭಾಗಿಸಿದೆ. ಜನಪ್ರಿಯ ಸಾಹಿತ್ಯ ಮತ್ತು ಗಂಭೀರ ಸಾಹಿತ್ಯ ಎಂಬುದಾಗಿ ನಿರ್ವಚಿಸಿಕೊಂಡು ಅಧ್ಯಯನಕ್ಕೆ ತೊಡಗುತ್ತದೆ. ವಿಮರ್ಶೆಯ ನೆಲೆಯಲ್ಲಿ ಜನಪ್ರಿಯ ಸಾಹಿತ್ಯ ಎಂಬುದು ಕಳಪೆ ಗುಣಮಟ್ಟದ ದ್ವಿತೀಯ ದರ್ಜೆಯ ಸಾಹಿತ್ಯ ಎಂದು ಗುರುತಿಸುತ್ತದೆ. ಸಾಮಾನ್ಯವಾಗಿ ಸಾಹಿತ್ಯ ಮತ್ತು ಜನಪ್ರಿಯತೆ ನಡುವೆ ಅಂತ: ಸಂಬಂಧವಿದೆ ಎಂದು ಸ್ಪಷ್ಟಪಡಿಸಿಕೊಳ್ಳಲಾಗಿದೆ. ಯಾವುದೇ ಬಗೆಯ ಸಾಹಿತ್ಯದ ಉದ್ದೇಶ ರಸಾನಂದ ಉಂಟು ಮಾಡುವುದಾಗಿರುತ್ತದೆ. ಇಂದು ಜನಪ್ರಿಯತೆ ಎಂಬುದು ಜನಪ್ರಿಯ ಕಲೆ, ಜನಪ್ರಿಯ ಕವಿ, ಜನಪ್ರಿಯ ಸಂಸ್ಕೃತಿ, ಜನಪ್ರಿಯ ಕವಿತೆ, ಜನಪ್ರಿಯ ಹಾಡುಗಾರ ಎಂದೆಲ್ಲ ಗುರುತಿಸುವುದನ್ನು ಇತ್ಯಾತ್ಮಕ ಅರ್ಥದಲ್ಲಿಯೇ ಕಾಣಬಹುದು.

ಯಾವುದೇ ಬಗೆಯ ಸಾಹಿತ್ಯದಲ್ಲಿ ಜನಪ್ರಿಯತೆಯ ಅಂಶಗಳನ್ನು ನಾವು ಕಾಣಬಹುದು. ಗಂಭೀರ ಸಾಹಿತ್ಯ ಜನಪ್ರಿಯತೆಯ ಆಧಾರದಿಂದಲೇ ರಚಿತವಾಗಿದೆ ಎಂದು ಹೇಳಬಹುದು. ಅದರ ಜನಪ್ರಿಯತೆಯು ಒಂದು ನಿರ್ಧಿಷ್ಟ ವಲಯಕ್ಕೆ ಅನ್ವಯವಾಗುತ್ತದೆ. ಜನಪ್ರಿಯತೆಯನ್ನು ವಿಮರ್ಶೆ ನಿರ್ವಚಿಸಿಕೊಂಡಿರುವ ಅರ್ಥದಲ್ಲಿ ಪರಿಗಣಿಸಬೇಕಾಗಿಲ್ಲ. ಏಕೆಂದರೆ ಜನಪ್ರಿಯತೆ ಎಂಬುದನ್ನು ಗಂಭೀರ ಸಾಹಿತ್ಯವು ಒಳಗೊಂಡಿರುತ್ತದೆ. ಹಾಗೆಯೇ ಜನಪ್ರಿಯ ಸಾಹಿತ್ಯದಲ್ಲಿ ಜನಪ್ರಿಯತೆಯ ಅಂಶವನ್ನು ಸರ್ವೆ ಸಾಮಾನ್ಯವಾಗಿ ಕಾಣಬಹುದು. ಅದರಿಂದಾಗಿ ಜನಪ್ರಿಯ ಸಾಹಿತ್ಯದ ಜೊತೆಯಲ್ಲಿಯೇ ಸಾಹಿತ್ಯದಲ್ಲಿ ಜನಪ್ರಿಯತೆಯ ಅಂಶಗಳನ್ನು ಚರ್ಚಿಸಬೇಕಾಗುತ್ತದೆ. ಹಾಗೆ ನೋಡಿದಾಗ ಜನಪ್ರಿಯತೆಯ ಅಂಶಗಳು ಜನಪ್ರಿಯ ಮತ್ತು ಗಂಭೀರ ಸಾಹಿತ್ಯಗಳೆರಡರಲ್ಲಿ ಕಂಡು ಬಂದರೂ ಜನಪ್ರಿಯ ಸಾಹಿತ್ಯ ಪರಿಕಲ್ಪನೆಗೆ ಇದು ಹೆಚ್ಚಾಗಿ ಪೂರಕವಾಗಿ ಬರುತ್ತದೆ. ಜನಪ್ರಿಯತೆ ಎಂಬುದು ಸಾಹಿತ್ಯದಲ್ಲಿ ಗುಣಾತ್ಮಕ ಅಂಶವಾಗಿ ಪರಿಭಾವಿಸಬಹುದು.

ಗಂಭೀರ ಮತ್ತು ಜನಪ್ರಿಯ ಎನ್ನುಬಹುದಾದ ಸಾಹಿತ್ಯದ ಅಂತರ ಬಹು ತೆಳುವಾದುದು ಮತ್ತು ಸಾಹಿತ್ಯದಲ್ಲಿ ಜನಪ್ರಿಯತೆ ಎಂಬುದು ಸಾಪೇಕ್ಷವಾದುದು. ಭಾರತೀಯ ಲಾಕ್ಷಣಿಕರು ಹೇಳುವ 'ಕಾಂತಾಸಮ್ಮಿತೆ' ಎಂಬ ಪರಿಕಲ್ಪನೆಯಿಂದ ಇಂದಿನ ಮನರಂಜನೆ ಮತ್ತು ಬೋಧನೆ ಎಂಬು ಪರಕಲ್ಪನೆಯ ತನಕ, ಮನರಂಜನೆ ಅಥವಾ ಓದುಗರಿಗೆ ಸಂತೋಷವನ್ನು ಕೊಡುವುದು ಸಾಹಿತ್ಯದ ಮುಖ್ಯ ಉದ್ದೇಶವೆಂಬುದನ್ನು ಎಲ್ಲರೂ ಒಪ್ಪುತ್ತಾರೆ. ಹಾಗಾಗಿ ಅಂದಿನಿಂದ ಇಂದಿನವರೆಗೆ ರಚಿತವಾಗಿರುವ ಎಲ್ಲಾ ಬಗೆಯ ಸಾಹಿತ್ಯದಲ್ಲಿಯೂ ಜನಪ್ರಿಯತೆಯ ಅಂಶವನ್ನು ಗುರುತಿಸಬಹುದು. ವಿವಿಧ ಕಾಲಘಟ್ಟದಲ್ಲಿ ಹಲವು ನೆಲೆಗಳಲ್ಲಿ ಜನಪ್ರಿಯತೆಯ ಅಂಶಗಳನ್ನು ಗುರುತಿಸಬಹುದು. ಸಾಹಿತ್ಯದ ಉದ್ದೇಶವೇ ಜನಪ್ರಿಯತೆ ಎಂದು ಒಪ್ಪಿಕೊಂಡರೂ ಸಾಹಿತ್ಯದ ಎಲ್ಲಾ ಅಂಶಗಳು ಜನಪ್ರಿಯತೆಗೆ ಕಾರಣವಾಗುವ ಅಂಶಗಳಾಗಲಾರವು. 'ಲೋಕೋಭಿನ್ನರುಚಿ:' ಎಂಬಂತೆ ಕಾಲ, ದೇಶ, ಜನಾಂಗ, ಪಂಥ ಪ್ರಕಾರಗಳಲ್ಲಿ ಜನಪ್ರಿಯತೆಯ ಅಂಶಗಳು ಭಿನ್ನವಾಗಿರಬಹುದು. ಸಾಹಿತ್ಯದಲ್ಲಿ ಜನಪ್ರಿಯತೆಯ ಅಂಶಗಳನ್ನು ನಿರ್ಧಿಷ್ಟವಾಗಿ ಗುರುತಿಸುವುದು ಕಷ್ಟ ಸಾಧ್ಯ. ಏಕೆಂದರೆ ಜನಪ್ರಿಯತೆ ಎಂಬುದು ಒಬ್ಬ ಕವಿಯ ಒಂದು ಕೃತಿಯ ಸ್ಥಿರವಾದ ಲಕ್ಷಣವಲ್ಲವೆಂದು ಹೇಳಬಹುದು. ಆದರೂ ಸಾಹಿತ್ಯದಲ್ಲಿ ಕೆಲವೊಂದು ಅಂಶಗಳು ಜನಪ್ರಿಯತೆಗೆ ಕಾರಣವೆಂದು ಗುರುತಿಸಲಾಗಿದೆ.

ಪಂಪಾದಿ ಕವಿಗಳ ಕಾವ್ಯಗಳು ಜನಮನ್ನಣೆ ಗಳಿಸಿರುವುದು ಓದುಗಬ್ಬವಾಗಿ, ದೇಶೀಯ ಸಾಹಿತ್ಯಗಳು ಹಾಡುಗಬ್ಬವಾಗಿ ಜನಪ್ರಿಯತೆ ಗಳಿಸಿವೆ. ವಚನ ಸಾಹಿತ್ಯ ದಾಸ ಸಾಹಿತ್ಯದ ಕೀರ್ತನೆಗಳು. ವಾಚನ, ಗಾಯನದ ಮೂಲಕ ಜನಪ್ರಿಯವಾಗಿವೆ. ಇದರಲ್ಲಿ ಕಾರಣ ಅವರಲ್ಲಿನ ಜೊತೆಗೆ ಆಡು ಮಾತಿನ ಶೈಲಿಯೇ ಪ್ರಮುಖ ಕಾರಣವಾಗಿದೆ. ಜನಪ್ರಿಯತೆಯ ಅಂಶಗಳನ್ನು ಕವಿ, ಕಾವ್ಯ, ಸಹೃದಯ ಸಂಬಂಧ ಇವುಗಳ ಅರ್ಥೈಸುವಿಕೆಯೊಂದಿಗೆ ಗುರುತಿಸಬಹುದು.

ಆಧುನಿಕ ಕಾಲಘಟ್ಟದಲ್ಲಿ ಸಾಹಿತ್ಯವು, ಕಾವ್ಯ, ಕಥೆ, ನಾಟಕ, ಕಾದಂಬರಿ ಇತ್ಯಾದಿ ಹಲವು ಪ್ರಕಾರಗಳಲ್ಲಿ ಬೆಳೆದಿದೆ. ಎಲ್ಲಾ ಪ್ರಕಾರಗಳಲ್ಲಿಯೂ ಜನಪ್ರಿಯತೆಯ ಅಂಶಗಳಿವೆ ಎಂದು ಹೇಳಬಹುದು. ಯಾವುದೇ ಪಂಥ ಪ್ರಕಾರಗಳನ್ನು ಮೀರಿಯೂ ಜನಪ್ರಿಯತೆಯ ಅಂಶಗಳಿವೆ ಎಂದು ಗುರುತಿಸಬಹುದು.

ಸಾಹಿತ್ಯದಲ್ಲಿನ ಜನಪ್ರಿಯತೆಯ ಅಂಶಗಳೆಂದು ಸಾಮಾನ್ಯವಾಗಿ ಹೀಗೆ ಗುರುತಿಸಿಕೊಳ್ಳಲಾಗಿದೆ. ಅವುಗಳೆಂದರೆ ಭಾವುಕತೆ, ರೋಚಕತೆ, ಭಾವನಾತ್ಮಕತೆ, ಹಾಸ್ಯ, ವ್ಯಂಗ್ಯ, ವಿನೋದ, ವಿಡಂಬನೆ, ಅನಿರೀಕ್ಷಿತ ತಿರುವುಗಳು, ನಿರೀಕ್ಷಿತ ಕತೆಯ ಬೆಳವಣಿಗೆ, ಹೇರಳವಾದ ಘಟನಾ ವಿವರಗಳು, ಸರಳ ಸಾಮಾನ್ಯ ವಸ್ತು ನಿರೂಪಣೆ, ಸಿದ್ಧ ಪಾತ್ರಗಳು, ಪ್ರೀತಿ–ಪ್ರೇಮ ಪ್ರಣಯಕ್ಕೆ ಸಂಬಂಧಿಸಿದ ಸಮೃದ್ಧ ಘಟನಾವಿವರಗಳು. ಸಾಹಿತ್ಯದಲ್ಲಿನ ಜನಪ್ರಿಯತೆಯ ಅಂಶಗಳಾಗುತ್ತವೆಂದು ಸ್ಥೂಲವಾಗಿ

ಗುರುತಿಸಬಹುದು. ಜೊತೆಗೆ ಆಡುಮಾತಿನ ಬಳಕೆ, ಪ್ರಾದೇಶಿಕತೆಯ ಚಿತ್ರಣಗಳೊಂದಿಗೆ ಸಾಹಿತ್ಯದ ಪಂಥ ಪ್ರಕಾರಗಳು ಜನಪ್ರಿಯತೆಗೆ ಕಾರಣವಾಗುತ್ತವೆ ಎಂದು ಹೇಳಬಹುದು. ಹಾಗೆಯೇ ಪಂಥ ಪ್ರಕಾರಗಳ ಪರಿಕಲ್ಪನೆಯನ್ನು ಮೀರಿ ಬೆಳೆದ ಸಾಹಿತ್ಯದಲ್ಲಿಯು ಜನಪ್ರಿಯತೆಯ ಅಂಶಗಳಿರುವುದನ್ನು ಕಾಣಬಹುದು.

ಆಧುನಿಕ ಗದ್ಯ ಸಾಹಿತ್ಯದಲ್ಲಿನ ಕಥನ ಪ್ರಕಾರದಲ್ಲಿನ ಜನಪ್ರಿಯತೆಗೆ ಕಾರಣವಾಗುವ ಅನಿರೀಕ್ಷಿತತೆ, ರೋಚಕ ತಿರುವುಗಳು, ಪ್ರೀತಿ, ಪ್ರೇಮ, ಪ್ರಣಯ ಸಂಬಂಧವಾದ ವಿಫುಲವಾದ ವರ್ಣನೆಗಳು ಸಮೃದ್ಧ ಘಟನಾ ವಿವರಗಳು ಪೂರ್ವ ನಿರೀಕ್ಷತತೆ ಸಾಮಾನ್ಯ ನಿರೂಪಣಾ ಶೈಲಿ ಜನಪ್ರಿಯತೆಗೆ ಕಾರಣವಾಗುತ್ತವೆ. ಕಥೆಯ ಸಾಗುವಿಕೆಯ ಬಗೆಯನ್ನು ಮೊದಲೇ ನಿರೀಕ್ಷಿಸಬಹುದು. ಕಥೆ, ಕಾದಂಬರಿಗಳಲ್ಲಿ ಕಥೆಯ ಬೆಳವಣಿಗೆಗೆ ಕುತೂಹಲಕರ ಓದಿಗೆ ಇವು ಕಾರಣವಾಗುತ್ತವೆ. ಮಾಸ್ತಿಯವರ 'ಸಣ್ಣ ಕಥೆಗಳು', 'ಕಾರಂತರ ಮರಳಿ ಮಣ್ಣಿಗೆ' ಕಾದಂಬರಿ, ಯು.ಆರ್.ಅನಂತ ಮೂರ್ತಿಯವರ 'ಸಂಸ್ಕಾರ' ಕಾದಂಬರಿ, ಗಿರೀಶ್ ಕಾರ್ನಾಡ್‌ರ 'ತುಘಲಕ್' ನಾಟಕಗಳಲ್ಲಿ ಇದನ್ನು ಕಾಣಬಹುದು. ಹಾಗೆಯೇ ಪೂರ್ಣಚಂದ್ರ ತೇಜಸ್ವಿಯವರ ಚಿದಂಬರ ರಹಸ್ಯ, ಜುಗಾರಿಕ್ರಾಸ್, ಕಾದಂಬರಿಗಳಲ್ಲಿ, ಯಶವಂತ ಚಿತ್ತಾಲರ 'ಶಿಕಾರಿ' 'ಛೇದ' 'ಪುರುಷೋತ್ತಮ' ಕಾದಂಬರಿಗಳಲ್ಲಿ ವ್ಯಕ್ತವಾಗುವ ಪತ್ತೆದಾರಿಕೆಯ ಗುಣವು ಜನಪ್ರಿಯತೆಯನ್ನು ನಿರ್ಧರಿಸುವ ಅಂಶಗಳಲ್ಲಿ ಒಂದಾಗಿದೆ ಎಂದು ಹೇಳಬಹುದು.

ಕಥೆಯ ಬೆಳವಣಿಗೆ ಮೊದಲೇ ನಿರೀಕ್ಷಿಸಬಹುದಾದ ಪೂರ್ವ ನಿರೀಕ್ಷಕತೆಯು ಕಥೆಯ ಬೆಳವಣಿಗೆಗೆ ಕಾರಣವಾಗುತ್ತವೆ. ನಿರ್ದಿಷ್ಟವಾದ ವಸ್ತು, ವಿಷಯ, ಧ್ಯೇಯ, ಧೋರಣೆಗಳ ಪ್ರತಿಪಾದನೆ ಕಥೆಗಳಲ್ಲಿ ಕಂಡುಬರುವುದು, ವಸ್ತು, ಪಾತ್ರ ಸನ್ನಿವೇಶಗಳು, ಪುನರಾವರ್ತನೆಗಳು ಕಥೆ ಕಾದಂಬರಿಗಳಲ್ಲಿರುವುದನ್ನು ಕಾಣಬಹುದು. ಈ ಅಂಶಗಳು ಆಧುನಿಕ ಸಾಹಿತ್ಯದ ಎಲ್ಲಾ ಪಂಥಗಳ ವಿವಿಧ ಲೇಖಕರ ಕಥೆ ಕಾದಂಬರಿಗಳಲ್ಲಿ ಜನಪ್ರಿಯ ಮತ್ತು ಗಂಭೀರ ಬರಹಗಾರರ ಬರಹದಲ್ಲೂ ಕಂಡು ಬರುತ್ತವೆ.

ಮೌಖಿಕ ಪರಂಪರೆಯ ಜಾನಪದ ಇತಿಹಾಸ, ಪುರಾಣದ ಕಥೆಗಳು ಸಮಕಾಲೀನ ಸಂವೇದನೆಗೆ ಆಶಯಗಳಿಗೆ ಪೂರಕವಾಗಿ ಲಿಖಿತ ಸಾಹಿತ್ಯದಲ್ಲಿ ಕಂಡು ಬರುತ್ತದೆ. ಹೀಗೆ ಜನಪದ ಕಥೆಗಳು ಕನ್ನಡ ಸಾಹಿತ್ಯದೊಂದಿಗೆ ವಿವಿಧ ಪ್ರಕಾರಗಳಲ್ಲಿ ಕಂಡುಬರುವುದು ಜನಪ್ರಿಯತೆಯ ಅಂಶವಾಗುತ್ತದೆ ಎಂದು ಹೇಳಬಹುದು. ಮಾಸ್ತಿಯವರ ಕಥನ ಕವನಗಳಲ್ಲಿ ಚಂದ್ರಶೇಖರ ಕಂಬಾರರ ಕಾವ್ಯ ನಾಟಕಗಳ ನಿರೂಪಣೆಯಲ್ಲೂ ಈ ಅಂಶಗಳು ಕಂಡು ಬರುತ್ತವೆ.

ಪುರಾಣದ ವಸ್ತು ವಿಷಯಗಳು ಪೌರಾಣಿಕ ಪಾತ್ರ, ವಸ್ತು ಕಥೆ ಕಾದಂಬರಿಗಳಲ್ಲೂ ಚಿತ್ರಿತವಾಗುವುದು ಜನಪ್ರಿಯತೆಯ ಅಂಶವೆಂದು ಹೇಳಬಹುದು. ಜನಪ್ರಿಯವಾಗಿರುವ ಸುಪರಿಚಿತ ಕಥೆ, ಪಾತ್ರ, ಸನ್ನಿವೇಶಗಳ ಮೂಲಕ ನವೀನ ವಿಚಾರಗಳ ಶೋಧದ ಮೂಲಕ ಸಮಕಾಲೀನ ಮೌಲ್ಯಗಳನ್ನು ಹೊಂದಿರುವ, ಇತಿಹಾಸಕ್ಕೆ ಸಂಬಂಧಿಸಿದ ವಿಚಾರಗಳನ್ನು ಸಾಹಿತ್ಯ ಬಳಸಿಕೊಂಡಾಗ ಅದು ಜನಪ್ರಿಯತೆಗೆ ಕಾರಣವೆಂದು ಹೇಳಬಹುದು. ಅಂದರೆ ಪೌರಾಣಿಕ, ಐತಿಹಾಸಿಕ ಪಾತ್ರ, ವಸ್ತು ವಿಷಯಗಳು, ಸಾಹಿತ್ಯದಲ್ಲಿನ ಜನಪ್ರಿಯತೆಯ ಅಂಶವಾಗುತ್ತವೆ. ಮಾಸ್ತಿ, ತ.ರಾಸು. ಇವರ ಬರಹಗಳಿಗೂ ಇದು ವ್ಯಕ್ತವಾಗುತ್ತವೆ.

ಪ್ರಸ್ತುತ ಸಂದರ್ಭದ ಸಮಕಾಲೀನ ಸಾಮಾಜಿಕ ಸನ್ನಿವೇಶದಲ್ಲಿನ ಚರ್ಚಿತ ವಿಷಯಗಳು ಸಾಹಿತ್ಯದಲ್ಲಿ ನಿರೂಪಿತವಾಗುವುದು ಜನಪ್ರಿಯತೆಗೆ ಕಾರಣವಾಗುತ್ತದೆ. ಮಹಿಳಾ ಸಂವೇದನೆ, ಮುಸ್ಲಿಂ ಸಂವೇದನೆ, ದಲಿತ ಸಂವೇದನೆಗಳು ವಿಭಿನ್ನ ನೆಲೆಗಳಲ್ಲಿ ಸಾಹಿತ್ಯದಲ್ಲಿ, ಅನಾವರಣಗೊಳ್ಳುವ ಮೂಲಕವೂ ಸಾಹಿತ್ಯ ಜನಪ್ರಿಯತೆಗಳಿಸುತ್ತದೆ. ವೀಣಾ ಶಾಂತೇಶ್ವರ, ಗೀತಾ ನಾಗಭೂಷಣ, ಭಾನು ಮಸ್ತಾಕ್, ಸಭೀಹ ಭೂಮಿಗೌಡ, ಫಕೀರ್ ಮಹಮದ್ ಕಟ್ಪಾಡಿ ಮುಂತಾದವರ ಬರಹದಲ್ಲಿ ಈ ಅಂಶಗಳು ವ್ಯಕ್ತವಾಗಿರುವುದನ್ನು ಕಾಣಬಹುದು.

ಪ್ರಾದೇಶಿಕ ಭಾಷಾ ಬಳಕೆ, ಪ್ರಾದೇಶಿಕ ಸಂವೇದನೆಗಳು, ಇವುಗಳನ್ನು ಒಳಗೊಂಡ ಪ್ರಾದೇಶಿಕತೆಯು ಜನಪ್ರಿಯತೆಯ ಅಂಶವಾಗಿ ಸಾಹಿತ್ಯದಲ್ಲಿ ಕಂಡುಬರುತ್ತದೆ. ಅಂದರೆ ಕಾವ್ಯ, ಕಥೆ, ಕಾದಂಬರಿ ನಾಟಕಗಳಲ್ಲಿ ವ್ಯಕ್ತವಾಗುವ ವಸ್ತು ಭಾಷೆಯ ನಿರೂಪಣೆಯಲ್ಲಿ ಪ್ರಾದೇಶಿಕತೆಯನ್ನು ಒಳಗೊಂಡಿರುವುದು, ಬೇಂದ್ರೆಯವರ ಕಾವ್ಯದ ಭಾಷೆ, ಕುಂ. ವೀರಭದ್ರಯ್ಯನವರ ಕಥೆ ಕಾದಂಬರಿಗಳ ಭಾಷೆ, ಬೆಸಗರಹಳ್ಳಿ ರಾಮಣ್ಣನವರ ಕಥೆಗಳಲ್ಲಿನ ವಸ್ತು ಭಾಷೆಯ ಬಳಕೆ, ಚಂದ್ರಶೇಖರ ಕಂಬಾರರ ಕಾವ್ಯ ನಾಟಕಗಳಲ್ಲಿ ಜಿ.ಎಸ್. ಸಿದ್ದಲಿಂಗಯ್ಯನವರ ಕಾವ್ಯದಲ್ಲಿ, ದೇವನೂರರ ಕಾದಂಬರಿಯಲ್ಲಿ ವಸ್ತು, ಭಾಷೆಯ ನಿರೂಪಣೆಯಲ್ಲಿ ಪ್ರಾದೇಶಿಕತೆಯನ್ನು ಗುರುತಿಸಬಹುದು. ಇದು ಕೂಡ ಸಾಹಿತ್ಯ ಜನಪ್ರಿಯತೆ ಗಳಿಸಲು ಸಹಕಾರಿಯಾದ ಅಂಶವಾಗುತ್ತದೆ ಎಂದು ಹೇಳಬಹುದು.

ಸಾಹಿತಿಗಳು ಸಾಹಿತ್ಯದ ಯಾವುದೇ ಬಗೆಯ ಪಂಥ ಪ್ರಕಾರಗಳ ಪರಿಕಲ್ಪನೆಯಿಂದ ಹೊರತಾಗಿ ಭಿನ್ನವಾದ ನೆಲೆಯ ಬರಹಗಳ ಮೂಲಕವೂ ಜನಪ್ರಿಯತೆಗಳಿಸುವುದನ್ನು ಕಾಣಬಹುದು. ಆಧುನಿಕ ಸಾಹಿತ್ಯದ ಪಂಥಗಳಾದ ನವೋದಯ, ಪ್ರಗತಿಶೀಲ, ನವ್ಯ ದಲಿತ ಬಂಡಾಯ ಎಂಬ ಪಂಥದಲ್ಲಿ ಗುರುತಿಸಿಕೊಳ್ಳದೆ ಅವೆಲ್ಲವನ್ನು ಮೀರುವ ಮೂಲಕವೂ ಸಾಹಿತ್ಯ ರಚಿಸಿ ಜನಪ್ರಿಯರಾಗಿದ್ದಾರೆ. ಹೀಗೆ ಪಂಥ ಪ್ರಕಾರಗಳನ್ನು ಮೀರುವುದೂ ಜನಪ್ರಿಯತೆಗೆ ಪೂರಕ ಅಂಶವಾಗುತ್ತದೆ. ಕೆ.ಎಸ್. ನರಸಿಂಹಸ್ವಾಮಿ, ಜಿ.ಪಿ.ರಾಜರತ್ನಂ ಕಾವ್ಯ, ಬಿ.ಜಿ.ಎಲ್.ಸ್ವಾಮಿ, ಪೂರ್ಣಚಂದ್ರ ತೇಜಸ್ವಿ ಅವರುಗಳ

'ಹಸಿರು ಹೊನ್ನು' ಮತ್ತು 'ಪರಿಸರದ ಕಥೆ' ಇವುಗಳಲ್ಲಿ ಪಂಥ ಪ್ರಕಾರಗಳನ್ನು ಮೀರಿದ ನೆಲೆಯನ್ನು ಗುರುತಿಸಬಹುದು.

ಪ್ರಗಿತಶೀಲ ಸಾಹಿತ್ಯದಲ್ಲಿನ ಬಹುತೇಕ ಅಂಶಗಳು ಜನಪ್ರಿಯತೆಗೆ ಕಾರಣವಾಗುತ್ತವೆ. ಅತಿಯಾದ ವಿವರಣೆ, ಹುಸಿ ವಾಸ್ತವತೆ, ಆದರ್ಶ, ಭ್ರಮೆ, ಭಾವುಕತೆ, ದಾಂಪತ್ಯ ಬದುಕಿನ ಘಟನಗಳು, ಅಶ್ಲೀಲವಾದ ವರ್ಣನೆಗಳು, ವಸ್ತು ವಿಷಯಗಳ ಪುನರಾವರ್ತನೆ, ಸಿದ್ದ ಮಾದರಿಯ ಪಾತ್ರ, ಸಂದರ್ಭ ಸನ್ನಿವೇಶಗಳು,ಪರಿಚಿತ ಪಾತ್ರಗಳ ಪುನರಾವರ್ತನೆ, ಚರ್ವಿತ ಚರ್ವಣ ಸಂಭಾಷಣೆ, ಸರಳ ಸಾಮಾನ್ಯವಾದ ಊಹೆಗೆ ಎಟುಕಬಹುದಾದ ಕಥಾ ಬೆಳವಣಿಗೆ, ಇವು ಜನಪ್ರಿಯತೆಗೆ ಕಾರಣವಾದ ಅಂಶಗಳು. ಜನಪ್ರಿಯ ಸಾಹಿತ್ಯದ ಮಿತಿಯೆಂದು ಇವುಗಳನ್ನು ವಿಮರ್ಶೆ ನಿರ್ವಚಿಸಿಕೊಂಡಿದೆ, ಈ ಅಂಶಗಳು ಅ.ನ.ಕೃ. ಬಸವರಾಜ ಕಟ್ಟಿಮನಿ, ಮೊದಲಾದ ಪ್ರಗತಿಶೀಲ ಪಂಥದವರ ಕಾದಂಬರಿಗಳಲ್ಲಿ ಕಂಡುಬರುವ ಅಂಶಗಳು,

ಪರಿಚಿತವಾಗಿರುವ ಪೌರಾಣಿಕ ಪಾತ್ರ ಸನ್ನಿವೇಶಗಳ ಮೂಲಕ ಹೊಸ ಘಟನಾವಳಿಗಳ ನಿರೂಪಣೆಯು ಜನಪ್ರಿಯ ಸಾಹಿತ್ಯದಲ್ಲಿ ಕಂಡುಬರುತ್ತದೆ. ಗಿರೀಶ ಕಾರ್ನಡರ ಯಾಯಾತಿ ನಾಟಕದಲ್ಲಿ ಬರುವ ಪುರು ಚಿತ್ರಲೇಖೆಯರ ಪಾತ್ರಗಳು ಮತ್ತು ಸನ್ನಿವೇಶಗಳು ಮುಂತಾದವುಗಳಲ್ಲಿ ಇದನ್ನು ಗುರುತಿಸಬಹುದು.

ಇತ್ತೀಚಿನ ದಿನಗಳಲ್ಲಿ ಹಾಸ್ಯ, ವಿನೋದ ಸಾಹಿತ್ಯವು ಹೆಚ್ಚು ಪ್ರಚಲಿತವಾಗಿದ್ದು ನಿಯತಕಾಲಿಕೆಗಳು ವಿನೋದ ಬರಹಗಳನ್ನು ಪ್ರಕಟಿಸುತ್ತಿದೆ. ಹಾಸ್ಯ-ವಿನೋದ, ವ್ಯಂಗ್ಯ, ವಿಡಂಬನೆಯು ಸಾಹಿತ್ಯದಲ್ಲಿನ ಜನಪ್ರಿಯತೆಯ ಅಂಶಗಳಾಗಿವೆ. ಹಾಸ್ಯ, ಧಾಟಿಯ ಲಘು ಬರಹ, ವ್ಯಂಗ್ಯ, ವಿನೋದ, ವಿಡಂಬನೆ, ಚುಟುಕ, ಇತ್ಯಾದಿ ಹೆಸರಿನ ಬರಹ ಪತ್ರಿಕೆಗಳಲ್ಲಿ ಪ್ರಕಟವಾಗಿ ಜನಪ್ರಿಯವಾಗುತ್ತಿರುವುದನ್ನು ಕಾಣಬಹುದು. ಹಾಸ್ಯದಿಂದ ಕೂಡಿದ ಲಘು ಬರಹಗಳು, ಹನಿಗವನಗಳು, ಸಮಕಾಲೀನ ಸಮಸ್ಯೆಗಳಿಗೆ ಹಾಸ್ಯ ಧಾಟಿಯಲ್ಲಿ ವಿಡಂಬಿಸುವ ಪಾತ್ರಗಳು ಸಂಭಾಷಣೆಗಳು, ಜನಪ್ರಿಯತೆಗೆ ಕಾರಣವಾಗುತ್ತವೆ. ಹಾಸ್ಯ ಸಾಹಿತ್ಯವು ಇಂದು ಬೆಳೆದು ಜನಪ್ರಿಯತೆಗಳಿಸುತ್ತಿದೆ.

ಟಿ. ಸುನಂದಮ್ಮನವರ ವಿನೋದ ಪ್ರಸಂಗಗಳ ನಿರೂಪಣೆ, ಎ.ಎನ್. ಮೂರ್ತಿರಾಯರ ಲಲಿತ ಪ್ರಬಂಧಗಳು, ಜನಪ್ರಿಯತೆಗೆ ಕಾರಣವಾದ ಅಂಶವಾಗಿರುವಂತೆ ಗಂಭೀರ ಸಾಹಿತ್ಯದಲ್ಲಿಯೂ ಮತ್ತು ಹಾಸ್ಯ ಬರಹಗಳಲ್ಲಿಯೂ ಕಾಣಿಸಿಕೊಳ್ಳುವ ಹಲವು ಪಾತ್ರಗಳು ಮನರಾವರ್ತನೆಯಾಗುವುದು ಜನಪ್ರಿಯತೆಗೆ ಕಾರಣವಾಗಿದೆ. ಟಿ. ಸುನಂದಮ್ಮನವರ ಮೈಲಾರಿ, ಸರಸು ಪಾತ್ರಗಳು ದಾಶರಥಿ ದೀಕ್ಷಿತ್ ರವರ ಗಾಂಪರೊಡೆಯ ಮದ್ವಿ, ಮರುಳ, ಪಾತ್ರಗಳು ಹೇಗೋ ಹಾಗೆಯೇ ತೇಜಸ್ವಿಯವರ ಕಿವಿ, ಪಾರ,

ಮಾರ, ಪಾತ್ರ ಗೊರೂರು ರಾಮಸ್ವಾಮಿ ಅಯ್ಯಂಗಾರ್‌ರವರ 'ನಮ್ಮ ಊರಿನ ರಸಿಕರು' ಹಳ್ಳಿಯ ಚಿತ್ರಗಳು, ಗರುಡಗಂಬದ ದಾಸಯ್ಯ, ಪ್ರಬಂಧಗಳಲ್ಲಿ ಬರುವ ಪಾತ್ರಗಳು ಪುನರಾವರ್ತನೆಯಾಗುತ್ತವೆ.

ನಿರ್ದಿಷ್ಟ ಪಾತ್ರ, ಪರಿಸರ, ಸನ್ನಿವೇಶಗಳ ಪುನರಾವರ್ತನೆಯು ಜನಪ್ರಿಯತೆಗೆ ಕಾರಣವಾಗುವ ಅಂಶಗಳಾಗುತ್ತವೆ. ಹಾಸ್ಯ-ವಿನೋದ ವಿಡಂಬನೆಯು ಜನಪ್ರಿಯತೆಗೆ ಕಾರಣವಾಗುತ್ತವೆ. ಸಮಕಾಲೀನ ವಸ್ತುವಿಷಯಗಳ ಬಗೆಗಿನ ವಿಡಂಬನೆ ವ್ಯಂಗ್ಯದ ನಿರೂಪಣೆ ಹಾಸ್ಯಕ್ಕೆ ಸಂಬಂಧಿಸಿದ ಲಘು ಬರಹಗಳು, ಚುಟುಕುಗಳು, ಹನಿಗನವನಗಳು, ಸಮಕಾಲೀನ ಸಮಸ್ಯೆಗಳಿಗೆ ಹಾಸ್ಯ ಧಾಟಿಯಲ್ಲಿ ವಿಡಂಬಿಸುವ ಪಾತ್ರಗಳಲ್ಲಿನ, ಸಂಭಾಷಣೆಗಳು ಜನಪ್ರಿಯತೆಗೆ ಕಾರಣವಾಗುತ್ತವೆ. ಜೀಚಿ, ದುಂಡಿರಾಜ್, ಜರಗನಹಳ್ಳಿ ಶಿವಶಂಕರ್, ಕಮಲಾ ಹೆಮ್ಮಿಗೆ ಮುಂತಾದವರ ಬರವಣಿಗೆಯಲ್ಲಿ ಈ ಅಂಶಗಳು ಬಿಂಬಿತವಾಗಿದ್ದು ಅವು ಜನಪ್ರಿಯತೆ ಗಳಿಸಿರುವುದನ್ನು ಕಾಣಬಹುದು.

ಕಾವ್ಯದಲ್ಲಿನ ಗೇಯತೆಯ ಅಂಶವು ಜನಪ್ರಿಯತೆಗೆ ಕಾರಣವಾಗುತ್ತದೆಂದು ಗುರುತಿಸಬಹುದು. ಆಧುನಿಕ ಸಾಹಿತ್ಯದ ನವೋದಯ ಕಾವ್ಯವು ಗಾಯನದ ಮೂಲಕ ಜನಪ್ರಿಯತೆಗಳಿಸಿವೆ. ಕುವೆಂಪು, ಬೇಂದ್ರೆ, ಪು.ತಿ.ನ., ಕೆ.ಎಸ್.ನರಸಹಿಂಹಸ್ವಾಮಿ, ಜಿ.ಎಂ.ಶ್ರೀ., ಜಿ.ಪಿ. ರಾಜರತ್ನಂ, ಜಿ.ಎಸ್. ಶಿವರುದ್ರಪ್ಪ, ಡಿ.ವಿ.ಜಿ. ಗೋಪಾಲಕೃಷ್ಣ ಅಡಿಗ, ಸು.ರಂ.ಎಕ್ಕುಂಡಿ, ಎನ್.ಎಸ್. ಲಕ್ಷ್ಮಿನಾರಾಯಣ ಭಟ್ಟ, ಎಚ್.ಎಸ್. ವೆಂಕಟೇಶಮೂರ್ತಿ, ದೊಡ್ಡ ರಂಗೇಗೌಡ ಮೊದಲಾದವರ ಗೀತೆಗಳು ಸುಗಮ ಸಂಗೀತದ ಮೂಲಕ ಜನಪ್ರಿಯತೆಗಳಿಸಿವೆ. ಇವುಗಳಲ್ಲಿ ವ್ಯಕ್ತವಾಗುವ ರಾಷ್ಟ್ರೀಯತೆ, ದೇಶಪ್ರೇಮ, ಪ್ರಕೃತಿ. ಪರಿಸರ ಪ್ರೀತಿ, ಪ್ರಣಯ, ಮೌಲ್ಯ, ಆದರ್ಶ, ಭಾವತೀವ್ರತೆಯ ಭಾವನಾ ಪ್ರಪಂಚ, ಇತ್ಯಾದಿ ಅಂಶಗಳು, ಪ್ರಾಸ ಬದ್ಧತೆ ರಮ್ಯತೆ, ಗೇಯತೆಯಿಂದ ಕೂಡಿದ್ದು ಲಯಬದ್ಧವಾಗಿ ಹಾಡಲು ಅನುಕೂಲಕರವಾದ ಕವಿತೆಗಳಾಗಿವೆ. ಆದುದರಿಂದ ಅವುಗಳ ಹಾಡುವಿಕೆಯ ಗುಣವೇ ಜನಪ್ರಿಯತೆಗೆ ಕಾರಣವಾಗಿ ಅದರ ಮೂಲಕ ಇವು ಜನ ಸಮೂಹವನ್ನು ಮೆಚ್ಚಿಸುವ ಗೀತೆಗಳಾಗಿವೆ. ಸುಗಮ ಸಂಗೀತವನ್ನು ಬೆಳೆಸಿರುವ ಗಾಯಕರಾದ ಪಿ. ಕಾಳಿಂಗರಾವ್, ಸಿ.ಅಶ್ವಥ್, ಸಿ. ಶಿವಮೊಗ್ಗ ಸುಬ್ಬಣ್ಣ, ವೈ. ಕೆ. ಮುದ್ದು ಕೃಷ್ಣ, ಮೈಸೂರು ಅನಂತಸ್ವಾಮಿ, ಉಪಾಸನಾ ಮೋಹನ್, ರಮೇಶ್ಚಂದ್ರ, ಜಿ.ವಿ. ಅತ್ರಿ, ರತ್ನಮಾಲ ಪ್ರಕಾಶ್, ಪಿ. ಸುಶೀಲ, ಮಾಲತಿ ಶರ್ಮ, ಕಸ್ತೂರಿಶಂಕರ್, ಬಿ.ಕೆ. ಸುಮಿತ್ರ, ಬಿ. ಜಯಶ್ರೀ, ಬಿ.ಆರ್. ಛಾಯಾ, ಸಂಗೀತ ಕಟ್ಟಿ, ಅರ್ಚನಾ ಉಡುಪ, ಸುಪ್ರಿಯ ಆಚಾರ್ಯ ಮೊದಲಾದವರು ವಿವಿಧ ಮಾಧ್ಯಮಗಳ ಮೂಲಕ, ಸಭೆ, ಸಮಾರಂಭ ಗೋಷ್ಠಿಗಳ ಮೂಲಕ ಒಂದು ವಿಶಿಷ್ಟವಾದ ಹಾಡುವ ಪರಂಪರೆಯನ್ನೇ ಬೆಳೆಸಿದ್ದಾರೆ. ಆ ಮೂಲಕ ಭಾವಗೀತೆಗಳನ್ನು ಜನ ಸಮೂಹಕ್ಕೆ ತಲುಪಿಸಿದ್ದಾರೆ. ಹಾಗೆಯೇ ವಿವಿಧ ಕವಿಗಳ ಕವಿತೆಗಳು ಧ್ವನಿಸುರುಳಿ, ಸಿ.ಡಿ. ಗಳ ಮೂಲಕವೇ ಹೆಚ್ಚಾಗಿ ಜನಪ್ರಿಯತೆ ಗಳಿಸಿರುವುದನ್ನು ಕಾಣಬಹುದು.

'ಕುರುಡು ಕಾಂಚಾಣ', 'ಬಾರಿಸು ಕನ್ನಡ ಡಿಂಡಿಮವ', 'ಇಳಿದು ಬಾ ತಾಯಿ ಇಳಿದು ಬಾ', 'ನಾನು ಬಡವಿ ಆತ ಬಡವ', 'ನೀ ಹೀಂಗ ನೋಡ ಬ್ಯಾಡ ನನ್ನ', ಓ ನನ್ನ ಚೇತನ, 'ಎಲ್ಲಾದರೂ ಇರು', 'ಆನಂದ ಮಯ ಈ ಜಗ ಹೃದಯ,' 'ಬ್ರಹ್ಮ ಸಿಂಗೆ ಜೋಡಿಸ್ತಿನಿ,' 'ಹೆಂಡ ಹೆಂಡ್ತಿ ಕನ್ನಡ ಪದಗೊಳ', 'ಅಳುವ ಕಡಲೊಳು', 'ಯಾವ ಮೋಹನ ಮುರಳಿ ಕರೆಯಿತು,' ರಾಯರು ಬಂದರು 'ಮಾವನ ಮನೆಗೆ', ಎದೆ ತುಂಬಿ ಹಾಡುವೆನು, 'ಜೋಗದ ಸಿರಿ ಬೆಳಕಿನಲ್ಲಿ', 'ಕುರಿಗಳು ಸಾರ್ ಕುರಿಗಳು', ಇತ್ಯಾದಿ ಕವಿತೆಗಳು ಜನರನ್ನು ರಂಜಿಸಿ ಜನಪ್ರಿಯವಾಗಿವೆ. ದಲಿತ ಬಂಡಾಯ ಕವಿಗಳ ಕವಿತೆಗಳು ಹಾಡುವುದಕ್ಕೆ ಯೋಗ್ಯವಾದ ಹಾಗೂ ಬದಲಾದ ಭಾಷೆಯೊಂದಿಗೆ ಜನರನ್ನು ತಲುಪಲು ಸಹಕಾರಿಯಾಗಿವೆ.

ಕೆ.ಎಸ್.ನರಸಿಂಹಸ್ವಾಮಿ, ಜಿ.ಪಿ.ರಾಜರತ್ನಂ, ಜಿ.ಎಸ್.ಶಿವರುದ್ರಪ್ಪ ಇವರು ಪಂಥವನ್ನು ಮೀರುವ ಅಂಶವು ಜನಪ್ರಿಯತೆಗೆ ಕಾರಣವೆಂದು ಹೇಳಬಹುದು. ಕೆ.ಎಸ್.ನರಸಿಂಹಸ್ವಾಮಿಯವರ 'ಮೈಸೂರು ಮಲ್ಲಿಗೆ' ಕವನಗಳು, ಜಿ.ಪಿ.ರಾಜರತ್ನಂ ರವರ 'ರತ್ನನ ಪದಗಳು' ವಿಶಿಷ್ಟವಾದವು. ಕೆ.ಎಸ್. ನರಸಿಂಹಸ್ವಾಮಿಯವರ ಗೀತೆಗಳು ಸರಳತೆ, ಬಾವುಕತೆ, ನವಿರಾದ ದಾಂಪತ್ಯ ಬದುಕಿನ ಚಿತ್ರಣಗಳು, ಅವರ ಕಾವ್ಯದ ವಿಶಿಷ್ಟತೆಗಳಾಗಿ ಅವು ಜನಪ್ರಿಯತೆಗೆ ಕಾರಣವಾಗಿವೆ. 'ರತ್ನನ ಪದಗಳು' ಇದರಲ್ಲಿನ ಗ್ರಾಮೀಣ ಭಾಷೆಯ ಸೊಗಡು, ರತ್ನ, ಪುಟ್ನಂಜಿ, ಮುನಿಯ ಪಾತ್ರಗಳ ಪುನರಾವರ್ತನೆ, ಪ್ರೀತಿ, ಬಡತನ, ಸಾಂಸಾರಿಕ ಚಿತ್ರಣ, ಕುಡಿತ, ಮೊದಲಾದ ವಿಷಯಗಳು ವಿವಿಧ ಕವನಗಳಲ್ಲೂ ವ್ಯಕ್ತವಾಗುವುವ ರೀತಿ ಜನಪ್ರಿಯತೆಗೆ ಕಾರಣವಾಗುತ್ತವೆ ಎಂದು ಹೇಳಬಹುದು.

ಈ ಎಲ್ಲಾ ವಿಚಾರಗಳು ಜನಪ್ರಿಯ ಮತ್ತು ಗಂಭೀರ ಸಾಹಿತ್ಯಗಳೆರಡರಲ್ಲೂ ಕಂಡು ಬರುವ ಅಂಶಗಳಾಗಿವೆ. ಕಾವ್ಯದ ಜನಪ್ರಿಯತೆಯು ಜನಪ್ರಿಯ ಸಾಹಿತ್ಯದ ನೆಲೆಯಲ್ಲಿ ಪರಗಣಿತವಾಗಿಲ್ಲ ಎಂಬುದು ಪ್ರಮುಖವಾದ ವಿಷಯವಾಗಿದೆ.

ಸಾಹಿತ್ಯದ ಪ್ರಕಾರಗಳಾದ ಕಥೆ, ಕವನ, ಕಾದಂಬರಿ, ಹಾಸ್ಯ ಬರಹಗಳಲ್ಲೂ ವ್ಯಕ್ತವಾಗಿರುವಂತೆ ನಾಟಕದಲ್ಲಿಯೂ ಜನಪ್ರಿಯತೆಯ ಅಂಶಗಳನ್ನು ಕಾಣಬಹುದು. ನಾಟಕವು ಕೃತಿ ರೂಪದಲ್ಲಿರುವುದು ಮತ್ತು ರಂಗದ ಮೇಲೆ ಪ್ರದರ್ಶನಗೊಳ್ಳುವುದು ಇವುಗಳ ನಡುವೆ ಅಂತರವಿದೆ. ನಾಟಕ ಅಭಿನಯ, ಪ್ರದರ್ಶನಕ್ಕೆ ಅನುಗುಣವಾದ ರೀತಿಯಲ್ಲಿ ಅಂಶಗಳನ್ನು ಕೃತಿಯು ಒಳಗೊಂಡಿರುತ್ತದೆ. ನಾಟಕದ ಬಹು ಮುಖ್ಯವಾದ ಅಂಶಗಳು ಪಾತ್ರಗಳು ಮತ್ತು ಸಂಭಾಷಣೆಗಳು, ಇದರಲ್ಲಿ ಹಾಸ್ಯ, ವ್ಯಂಗ್ಯ, ವಿಡಂಬನೆ, ದುಃಖ, ಸಂಭ್ರಮ, ಪ್ರೇಮ, ಪ್ರೀತಿ, ಪ್ರಣಯ ಮೊದಲಾದ ಭಾವಗಳು ಸಂಭಾಷಣೆಯಲ್ಲಿ ವ್ಯಕ್ತವಾಗುತ್ತವೆ. ಪಾತ್ರಗಳ ಅಭಿನಯದ ಮೂಲಕವು ಹೊರ ಹೊಮ್ಮುತ್ತದೆ. ನಾಟಕದ ಸಂಭಾಷಣೆಯಲ್ಲಿಯೇ ಜನಪ್ರಿಯತೆಯ ಅಂಶಗಳಿರುತ್ತವೆ. ವೃತ್ತಿ ರಂಗಭೂಮಿಯ ನಾಟಕಗಳಲ್ಲೂ ಸಂಭಾಷಣೆಯೇ

ಪ್ರಮುಖವಾಗಿವೆ. ಅಲ್ಲಿ ಬರುವ ಅಶ್ಲೀಲ ದ್ವಂದಾರ್ಥದ, ಸಂಭಾಷಣೆ, ಹಾಸ್ಯ, ವ್ಯಂಗ್ಯ, ವಿಡಂಬನೆಯಿಂದ ಕೂಡಿದ ಮಾತಿನ ಚಾತುರ್ಯ ಪ್ರಮುಖವಾಗಿ ಜನಪ್ರಿಯತೆಗೆ ಕಾರಣವಾದ ಅಂಶಗಳಾಗುತ್ತವೆ. ಕೈಲಾಸಂ ಸಾಮಾಜಿಕ ವಿಡಂಬನೆಯ ಸಮಕಾಲೀನ ವಸ್ತು ವಿಷಯದ ಬಗೆಗಿನ ವಿಡಂಬನಾತ್ಮಕ ಸಂಭಾಷಣೆಗಳಲ್ಲಿ ಇದನ್ನು ಗುರುತಿಸಬಹುದು. ಜೊತೆಗೆ ನಟ ನಟಿಯರ ಆಂಗಿಕ ಅಭಿನಯ, ಹಿನ್ನೆಲೆ ಸಂಗೀತ, ಬಳಸುವ ರಂಗ ಪರಿಕರಗಳು, ಬೆಳಕು, ಧ್ವನಿ ಇವುಗಳು ಪ್ರಮುಖ. ಅವುಗಳಿಂದಾಗಿ ನಾಟಕಗಳು ಜನಪ್ರಿಯತೆಗಳಿಸುತ್ತವೆ. ಹಾಗೆಯೇ ನಾಟಕದಲ್ಲಿ ವ್ಯಕ್ತವಾಗುವ ಪ್ರಾದೇಶಿಕತೆಯ ಅಂಶಗಳು, ಭಾಷೆಯ ಬಳಕೆ, ಪೌರಾಣಿಕ, ಐತಿಹಾಸಿಕ, ಸಾಮಾಜಿಕ ವಸ್ತು, ವಿಷಯ, ಪಾತ್ರಗಳು, ಅವುಗಳ ವೇಷ-ಭೂಷಣಗಳು ಜನಪ್ರಿಯತೆಗೆ ಕಾರಣವಾದ ಅಂಶಗಳಾಗಿರುತ್ತವೆ. ಚಂದ್ರಶೇಖರ ಕಂಬಾರರ ನಾಟಕಗಳಲ್ಲಿನ ವ್ಯಂಗ್ಯ, ಹಾಸ್ಯ, ಟಿ.ಪಿ. ಕೈಲಾಸಂ ಅವರು ಬಳಸುವ ಇಂಗ್ಲೀಷ್ ಪದಗಳ ಬಳಕೆ, ಈ ಅಂಶಗಳು ಜನಪ್ರಿಯತೆಗೆ ಕಾರಣವಾಗಿವೆ. ಅವುಗಳು ಪಡೆದಿರುವ ಯಶಸ್ಸಿನ ಮೂಲಕ ಗುರುತಿಸಬಹುದು. ಜಿ.ಆರ್.ಲಕ್ಷ್ಮಣರಾವ್ ಅವರ 'ನಂಗ್ಯಾಕೋಡೌಟು' ನಾಟಕವು ಈ ನೆಲೆಯಲ್ಲಿ ಯಶಸ್ಸು ಕಂಡಿರುವುದನ್ನು ಗುರುತಿಸಬಹುದು. ಸಾಮಾಜಿಕ, ಐತಿಹಾಸಿಕ, ಪೌರಾಣಿಕ ವಸ್ತು ವಿಷಯಗಳನ್ನೊಳಗೊಂಡ ನಾಟಕಗಳು ಸಮಕಾಲೀನ ಆಶಯ ಧೋರಣೆಗಳಿಗೆ ಸ್ಪಂದಿಸುವ ಅಂಶಗಳಿಂದ ಅವು ಪ್ರಭಾವಿತವಾಗಿರುವುದನ್ನು ಕಾಣಬಹುದು. ಈ ಬಗೆಯ ಅಂಶಗಳು ನಾಟಕದ ಜನಪ್ರಿಯತೆಗೆ ಕಾರಣವಾಗಿವೆ ಎಂದು ಹೇಳಬಹುದು.

ಪತ್ರಿಕೆಗಳು ಮಾಧ್ಯಮಗಳ ಮೂಲಕ ಕಥೆ, ಕಾದಂಬರಿ, ಕವಿತೆಗಳು ಜನಪ್ರಿಯತೆ ಗಳಿಸಿರುವುದನ್ನು ಕಾಣಬಹುದು. ಜನಪ್ರಿಯವಾಗಿರುವ ಪತ್ರಿಕೆಗಳಲ್ಲಿ ಪ್ರಕಟವಾಗುವ ಕಥೆಗಳು ಸಾಹಿತ್ಯ ಮೌಲ್ಯ ಹೊಂದಿರುವುದಿಲ್ಲವೆಂಬ ಅಂಶ ಇಲ್ಲಿ ಮುಖ್ಯವೆನ್ನುವುದಾದರೂ ಕನ್ನಡದ ಹಲವಾರು ಪ್ರಮುಖ ಕಥೆಗಳು ನಿಯತಕಾಲಿಕಗಳಲ್ಲೂ ವಾರ್ಷಿಕ ವಿಶೇಷಾಂಕಗಳಲ್ಲೂ ಪ್ರಕಟವಾಗುವ ಮೂಲಕ ಜನಪ್ರಿಯವಾಗಿರುವುದನ್ನು ಕಾಣಬಹುದು. ಪತ್ರಿಕೆಗಳು ಮಾಧ್ಯಮಗಳು ಸಾಹಿತ್ಯದ ಜನಪ್ರಿಯತೆಗೆ ಕಾರಣವಾಗಿರುವುದನ್ನು ಹೀಗೆ ಗುರುತಿಸಬಹುದು. ಪತ್ರಿಕೆಗಳ ಮಿತಿ, ಮಾಧ್ಯಮದ ಮಿತಿಯು ಕಥೆಯ ಮೇಲೆ ಪ್ರಭಾವ ಬೀರುವುದು ಮುಖ್ಯ ಎಂಬ ಅಂಶವನ್ನು ಗಮನದಲ್ಲಿಟ್ಟುಕೊಳ್ಳಬೇಕು. ಕುಂ. ವೀರಭದ್ರಪ್ಪ, ಲಂಕೇಶ್, ತೇಜಸ್ವಿ, ದೇವನೂರು ಮಹದೇವ, ಮೊಗಳ್ಳಿ ಗಣೇಶ, ಕೃಷ್ಣ ಆಲನಹಳ್ಳಿ, ರಾಘವೇಂದ್ರ ಪಾಟೀಲ, ವ್ಯಾಸರಾಯ ಬಲ್ಲಾಳ, ಬೆಸಗರಹಳ್ಳಿ ರಾಮಣ್ಣ, ವೈದೇಹಿ, ವೀಣಾ ಶಾಂತೇಶ್ವರ ಮೊದಲಾದವರ ಕಥೆಗಳನ್ನು ಈ ನೆಲೆಯಲ್ಲಿ ಗಮನಿಸಬಹುದು. ವಸ್ತು ವಿಷಯದ ನಿರೂಪಣೆಯ ಪುನರಾವರ್ತನೆ, ಪಾತ್ರಗಳು, ಸನ್ನಿವೇಶ, ಸಂಭಾಷಣೆ, ವರ್ಣನೆ ಇವುಗಳ ಕೆಲವು ಕಾದಂಬರಿಗಳಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುವುದು ನಿರ್ದಿಷ್ಟ ಸಿದ್ಧಾಂತ, ಸಾಮಾಜಿಕ ಕಳಕಳಿಯ ಬದ್ಧತೆ ಇವುಗಳು ಹೆಚ್ಚಿನ

ಸಂಖ್ಯೆಯ ಕಥೆಗಳಲ್ಲೂ ಬಂದಿರುವುದು, ಇವುಗಳಲ್ಲಿ ಜನಪ್ರಿಯತೆಯ ಅಂಶಗಳನ್ನು ಗುರುತಿಸಬಹುದು. ಆದರೆ ಜನಪ್ರಿಯ ನಿಯತಕಾಲಿಕಗಳಲ್ಲಿ ಪ್ರಕಟವಾಗುವ ಕಥೆಗಳನ್ನು ನೇತ್ಯಾತ್ಮಕ ಅರ್ಥದಲ್ಲಿ ಪರಿಗಣಿಸಬೇಕಿಲ್ಲ. ಈ ಕಥೆಗಳಿಗೆ ಸಂಬಂಧಿಸಿದಂತೆ ಪತ್ರಿಕಾ, ವಿಮರ್ಶೆ ಆಯ್ಕೆ, ಗಂಭೀರ ಪರಿಗಣನೆ ಮೊದಲಾದ ಅಂಶಗಳನ್ನು ಗುರುತಿಸಬಹುದು.

ಕು.ವೀರಭದ್ರಪ್ಪ, ಜಯಂತ ಕಾಯ್ಕಿಣಿ, ಮೊಗಳ್ಳಿ ಗಣೇಶ, ಬಾನು ಮಸ್ತಾಕ್, ಸಾರಾ, ಅಬೂಬಕರ್, ದೇವನೂರು ಮಹದೇವ, ವೈದೇಹಿ, ತೇಜಸ್ವಿ ಅವರ ಕಥೆಗಳನ್ನು ಗಮನಿಸಿದಾಗ ಪ್ರಾದೇಶಿಕತೆಯ ಬಳಕೆಯಿಂದಾಗಿ ಓದುಗರನ್ನು ಆಕರ್ಷಿಸಿರುವುದನ್ನು ಕಾಣಬಹುದು. ಕು.ವೀರಭದ್ರಪ್ಪ ನವರ ಕಥೆ, ಕಾದಂಬರಿಗಳಲ್ಲು ವ್ಯಕ್ತವಾಗುವ ಪ್ರಾದೇಶಿಕ ವಿವರದ ಜೊತೆಗೆ ಹಾಸ್ಯವು ಸೇರಿರುವುದು, ಚಿತ್ತಾಲರ ಕಥೆಗಳಲ್ಲಿ ಬರುವ ಹನೇಹಳ್ಳಿಯ ವಿವರ, ಕಾದಂಬರಿಯಲ್ಲೂ ಬರುವುದು. ಕೃಷ್ಣ ಆಲನಹಳ್ಳಿಯವರ ಕಾದಂಬರಿಯಲ್ಲಿನ ಕಾಡಿನ ವಿವರ, ವೈದೇಹಿಯವರು ಬಳಸುವ ಭಾಷೆ ಮತ್ತು ಕೊಡುವ ಪ್ರಾದೇಶಿಕ ವಿವರಗಳು, ಸಾರಾ ಅಬೂಬಕರ್ ಅವರಲ್ಲಿನ ಮುಸ್ಲಿಂ ಸಂವೇದನೆ, ಇವುಗಳು ಜನಪ್ರಿಯತೆಗೆ ಕಾರಣವೆಂದು ಹೇಳಬಹುದು. ದೇವನೂರು ಮಹಾದೇವ ಮತ್ತು ಮೊಗಳ್ಳಿ ಅವರ ಕಥೆ ಕಾದಂಬರಿಗಳಲ್ಲಿನ ದಲಿತ ಸಂವೇದನೆ ಈ ಅಂಶಗಳು ಜನಪ್ರಿಯ ಸಾಹಿತ್ಯದಲ್ಲಿ ಮಾತ್ರ ಕಂಡುಬರುವ ವಿಷಯಗಳಲ್ಲ, ಗಂಭೀರ ಸಾಹಿತ್ಯದಲ್ಲಿಯು ಜನಪ್ರಿಯತೆಯ ಅಂಶಗಳಿರುವುದು ಸಹಜ. ಜನಪ್ರಿಯತೆಯ ಅಂಶಗಳು ಕೇವಲ ಕೆಲವು ಪ್ರಕಾರಗಳಲ್ಲಿ ಮಾತ್ರ ಕಂಡು ಬರುವುದಿಲ್ಲ. ಅವು ಎಲ್ಲಾ ಬಗೆಯ ಸಾಹಿತ್ಯ ಪ್ರಕಾರಗಳಲ್ಲಿ ಕಂಡುಬರುವಂತದು ಹಾಗೆಯೇ ಪಂಥ ಪ್ರಕಾರಗಳನ್ನು ಮೀರುವುದರ ಮೂಲಕವು ಸಾಹಿತ್ಯ ಜನಪ್ರಿಯವಾಗಿರುವುದನ್ನು ಕಾಣಬಹುದು. ಅದರಿಂದಾಗಿ ಸಾಹಿತ್ಯದಲ್ಲಿ ಜನಪ್ರಿಯತೆಯ ಅಂಶಗಳನ್ನು ಸಾಹಿತ್ಯದ ಗುಣಾತ್ಮಕ ಅಂಶಗಳಾಗಿ ಗುರುತಿಸಬಹುದು. ಈ ಜನಪ್ರಿಯತೆಯ ಅಂಶಗಳೊಂದಿಗೆ ಗಂಭೀರ ಸಾಹಿತ್ಯವು ಜನಪ್ರಿಯತೆ ಗಳಿಸಿ ಸಾಮಾನ್ಯ ಓದುಗರನ್ನು ತಲುಪಿರುವುದಿದೆ. ಜನಪ್ರಿಯತೆಯ ಅಂಶವು ಸಾಹಿತ್ಯದ ಗುಣಾತ್ಮಕ ಅಂಶವಾಗಿ ಓದುಗರ ಮೇಲೆ ಪ್ರಭಾವ ಬೀರುವುದನ್ನು ಕಾಣಬಹುದು.

### ೩.೨ ಜನಪ್ರಿಯ ಸಾಹಿತ್ಯದ ಪರಿಕಲ್ಪನೆ

ಜನಪ್ರಿಯ ಸಾಹಿತ್ಯದ ಪರಿಕಲ್ಪನೆ ಆಧುನಿಕ ವಿಮರ್ಶೆಯಲ್ಲಿ ಕಂಡು ಬರುತ್ತದೆ. ಒಟ್ಟು ಸಾಹಿತ್ಯವನ್ನು 'ಗಂಭೀರ ಸಾಹಿತ್ಯ' ಮತ್ತು 'ಜನಪ್ರಿಯ ಸಾಹಿತ್ಯ' ವೆಂದು ವಿಮರ್ಶೆ ನಿರ್ವಚಿಸಿಕೊಂಡು ಈ ನೆಲೆಯಲ್ಲಿಯೇ ಸಾಹಿತ್ಯ ಚಿಂತನೆ ನಡೆಸುವುದು ಪ್ರಚಲಿತದಲ್ಲಿದೆ. ವಿವಿಧ ಮಾನದಂಡಗಳ ಆಧಾರದ ಮೇಲೆ ಈ ಬಗೆಯ ವಿಭಾಗವನ್ನು ಮಾಡಿದೆ. ವಿಮರ್ಶೆಯ ಪರಿಕಲ್ಪನೆಯಲ್ಲಿ ಗಂಭೀರ ಓದಿಗೆ ನಿಲುಕದ, ಗಂಭೀರ ಅಧ್ಯಯನಕ್ಕೆ ಅರ್ಹವಲ್ಲದ ಎರಡನೆ ದರ್ಜೆಯ ಸಾಹಿತ್ಯವೆಂದು 'ಜನಪ್ರಿಯ

ಸಾಹಿತ್ಯ' ವನ್ನು ವಿಮರ್ಶೆ ಗುರುತಿಸುತ್ತದೆ. ಪಾಶ್ಚಾತ್ಯರಲ್ಲಿ ಈ ವಿಷಯನ್ನು ಕುರಿತ ಚಿಂತನೆಗಳು ಒಂದು ಶಿಸ್ತಾಗಿಯೇ ಬೆಳೆದಿದೆ. ನಮ್ಮಲ್ಲಿ ಆ ದಿಕ್ಕಿನಲ್ಲಿ ಆಗಿರುವ ಚರ್ಚೆಗಳು ಕಡಿಮೆ ಎಂದು ಹೇಳಬಹುದು. ಜನಪ್ರಿಯ ಸಾಹಿತ್ಯವನ್ನು ಕುರಿತಂತೆ ಕನ್ನಡದ ಮಟ್ಟಿಗೆ ಪ್ರಚಲಿತವಾಗಿರುವ ಅಭಿಪ್ರಾಯ, ಚಿಂತನೆಗಳು, ಪರವಾದ ವಿರೋಧವಾದ ಧೋರಣೆಗಳನ್ನು ಒಟ್ಟು ಕ್ರೂಢೀಕರಿಸುವ ಮೂಲಕ ಜನಪ್ರಿಯ ಸಾಹಿತ್ಯದ ಪರಿಕಲ್ಪನೆಯನ್ನು ಕಂಡು ಕೊಳ್ಳುವ ಪ್ರಯತ್ನ ಮಾಡಲಾಗಿದೆ. ಅದಕ್ಕಾಗಿಯೆ ಈ ಭಾಗದಲ್ಲಿ ಜನಪ್ರಿಯ ಸಾಹಿತ್ಯ ಎಂದರೇನು ? ಜನಪ್ರಿಯ ಮತ್ತು ಗಂಭೀರ ಪರಿಕಲ್ಪನೆ ಸಾಧುವೆ ? ಜನಪ್ರಿಯ ಸಾಹಿತ್ಯವೆಂದು ಯಾವುದನ್ನು ಕರೆಯುತ್ತಾರೆ, ಹೇಗೆ ಜನಪ್ರಿಯ ಸಾಹಿತ್ಯವೆಂದು ಕರೆಯಬಹುದು? ಈ ಕಲ್ಪನೆ ಸಾಹಿತ್ಯದಲ್ಲಿ ಜನಪ್ರಿಯತೆಯನ್ನು ಯಾವ ಅರ್ಥದಲ್ಲಿ ಪರಿಗಣಿಸಲಾಗಿದೆ? ಎಂಬವೇ ಮೊದಲಾದ ವಿಷಯದ ಬಗ್ಗೆ ಚರ್ಚೆಗಳು, ಚಿಂತನೆಗಳನ್ನು ವಿವಿಧ ಲೇಖಕರು, ವಿಮರ್ಶಕರು ಹೇಗೆ ಗುರುತಿಸಿದ್ದಾರೆ ಎಂಬುದರ ಮೂಲಕವೇ ಅಧ್ಯಯನ ನಡೆಸಲಾಗಿದೆ.

ಜನಪ್ರಿಯ ಸಾಹಿತ್ಯವನ್ನು ಕುರಿತ ವಿವಿಧ ಲೇಖಕರ ಅಭಿಪ್ರಾಯಗಳನ್ನು ನೋಡಿದಾಗ, ಸಿ.ಎನ್.ರಾಮಚಂದ್ರನ್ ರವರು 'ಜನಪ್ರಿಯ ಸಾಹಿತ್ಯ' ಒಂದು ತಾತ್ವಿಕ ವಿಶ್ಲೇಷಣೆ ಎಂಬ ಲೇಖನದಲ್ಲಿ ಜನಪ್ರಿಯ ಸಾಹಿತ್ಯ ಎಂದರೇನು ? ಅಂತಹ ಸಾಹಿತ್ಯವನ್ನು 'ಗಂಭೀರ' ಸಾಹಿತ್ಯದಿಂದ ಬೇರ್ಪಡಿಸಿ, ಸ್ಪಷ್ಟವಾಗಿ ಗುರುತಿಸುವುದು ಸಾಧ್ಯವೆ ? ಓದುಗರ ಮೇಲೆ ಜನಪ್ರಿಯ ಸಾಹಿತ್ಯದಿಂದಾಗುವ ಪರಿಣಾಮಗಳನ್ನು ಕುರಿತು ಒಂದು ದಿಕ್ಕಿನಲ್ಲಿ ಸಾಹಿತಿಗಳು ಹಾಗೂ ಸಾಹಿತ್ಯ ವಿಮರ್ಶಕರು, ಮತ್ತೊಂದು ದಿಕ್ಕಿನಲ್ಲಿ ಸಮಾಜ ವಿಜ್ಞಾನಿಗಳು ಇವರುಗಳು ಮಂಡಿಸುವ ವಿಚಾರಗಳು ಎಷ್ಟು ಗ್ರಾಹ್ಯ ಎಂಬತ್ಯಾದಿ ಮೂಲಭೂತ ಪ್ರಶ್ನೆಗಳನ್ನು ಹಾಕಿಕೊಂಡು ತಮ್ಮ ತಾತ್ವಿಕ ವಿಶ್ಲೇಷಣೆಯನ್ನು ಸಮರ್ಥನೀಯವಾಗಿ ಮಂಡಿಸಿದ್ದಾರೆ. ಅವರ ದೃಷ್ಟಿಯಲ್ಲಿ 'ಜನಪ್ರಿಯ ಸಾಹಿತ್ಯ' ಮತ್ತು 'ಗಂಭೀರ ಸಾಹಿತ್ಯ' ಎಂಬ ಪರಿಕಲ್ಪನೆಯಲ್ಲೆ ತೊಡಕಿದೆ ಎಂದು ಭಾವಿಸುತ್ತಾರೆ. ಜನಪ್ರಿಯ ಸಾಹಿತ್ಯವೆಂದರೇನು ಎಂಬ ಪ್ರಶ್ನೆಯೇ ಬಾಲಿಶವೆಂದು ಅನೇಕರಿಗೆ ತೋರಬಹುದು. ಏಕೆಂದರೆ ಇದರ ಉತ್ತರ ಸ್ಪಷ್ಟ ಎಂದು ಕನ್ನಡದಲ್ಲಿ ಮಾಸ್ತಿ, ಕುವೆಂಪು, ಕಾರಂತರ ಕಾದಂಬರಿಗಳು 'ಗಂಭೀರ ಸಾಹಿತ್ಯ' ವೆಂದು, ಅನೇಕ ಲೇಖಕಿಯರ ಕಾದಂಬರಿಗಳು, ಸಾಪ್ತಾಹಿಕಗಳಲ್ಲಿ ಬರುವ ಧಾರವಾಹಿಗಳು 'ಜನಪ್ರಿಯ ಸಾಹಿತ್ಯ'ವೆಂದು ಬಹುಜನ ತೀರ್ಮಾನಿಸಬಹುದು. ಇದು ಕನ್ನಡದಲ್ಲಿ ಪ್ರಚಲಿತವಿರುವ ಧೋರಣೆ ಎಂದು ವ್ಯಕ್ತವಾಗುತ್ತದೆ (ರಾಮಚಂದ್ರನ್ ಸಿ.ಎನ್. ೧೯೯೫ ಪುಟ.೨೭) ಜನಪ್ರಿಯತೆ ಗಳಿಸಿರುವ ಎಂದರೆ ಹೆಚ್ಚು ಓದುಗರನ್ನು ಪಡೆದಿರುವ ಸಾಹಿತ್ಯ ಜನಪ್ರಿಯ ಸಾಹಿತ್ಯವೆನ್ನವುದು ಕಷ್ಟ, ಏಕೆಂದರೆ ಗಂಭೀರ ಸಾಹಿತಿಗಳೆಂದು ಪರಿಗಣಿಸುವವರ ಕೃತಿಗಳು ಅಪಾರ ಜನಪ್ರಿಯತೆ ಗಳಿಸಿರುವ ನಿರ್ದರ್ಶನಗಳಿವೆ. ಬೇಂದ್ರೆಯವರ ಕಾವ್ಯ, ಮಾಸ್ತಿಯವರ ಸಣ್ಣಕಥೆಗಳು, ಕಾರಂತರ 'ಮರಳಿ ಮಣ್ಣಿಗೆ' ಅನಂತಮೂರ್ತಿಯವರ ಸಂಸ್ಕಾರ, ಗಿರೀಶ್

ಕಾರ್ನಾಡರ 'ತುಘಲಕ್' ಅಪಾರ ಜನಪ್ರಿಯತೆ ಗಳಿಸಿವೆ ಎನ್ನುವ ಮೂಲಕ ಜನಪ್ರಿಯತೆಯೊಂದೆ ಜನಪ್ರಿಯ ಸಾಹಿತ್ಯದ ಲಕ್ಷಣವಾಗಲಾರದು ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. (ಅದೇ ಪುಟ-೨೭)

ಕನ್ನಡದ ಸಂದರ್ಭಕ್ಕೆ ಜನಪ್ರಿಯ ಸಾಹಿತ್ಯ ಪರಿಕಲ್ಪನೆಯನ್ನು ಗುರುತಿಸಲು ಸಹಕಾರಿಯಾಗುವ ವಿಚಾರ ಕೆ.ವಿ.ನಾರಾಯಣರಲ್ಲಿ ಹೀಗೆ ಕಂಡು ಬಂದಿದೆ. ಅವರ ಪ್ರಕಾರ "ಜನಪ್ರಿಯ ಸಾಹಿತ್ಯ" ಎಂಬ ಪದ ಕನ್ನಡದಲ್ಲಿ ಬಿಡುಬೀಸಾಗಿ ಬಳಕೆಯಾಗುತ್ತಿದ್ದು ವಿವಿಧ ಚರ್ಚೆಗಳ ಸಂದರ್ಭದಲ್ಲಿ ಅದರ ಅರ್ಥವ್ಯಾಪ್ತಿಯನ್ನು ವಿವರಿಸಕೊಳ್ಳಲು ಪ್ರಯತ್ನಿಸಲಾಗಿದೆ ಎಂಬುದನ್ನು ಗುರುತಿಸುತ್ತಾರೆ. ಈ ಸಂಬಂಧವಾಗಿ ಒಂದು ಕ್ರಿಯಾಶೀಲ ವ್ಯಾಖ್ಯೆ ರೂಪುಗೊಂಡಿದೆ ಎನಿಸುತ್ತಿಲ್ಲ. ಬಹುಮಟ್ಟಿಗೆ 'ಜನಪ್ರಿಯ ಸಾಹಿತ್ಯ' ಒಂದಿದೆ, ಅಥವಾ ಇರುತ್ತದೆ ಎಂದು ನಂಬಿ ಒಪ್ಪಿ ಅನಂತರ ನಮ್ಮ ಆಯ್ಕೆಯ ಕೃತಿಗಳನ್ನು ಆ ಪ್ರಕಾರದ ವ್ಯಾಪ್ತಿಯಲ್ಲಿ ಇರಿಸಿ ಬಿಡುತ್ತಿದ್ದೇವೆ. ಜನಪ್ರಿಯ ಸಾಹಿತ್ಯ ಅನ್ನುವುದು ನಮ್ಮ ಸಾಹಿತ್ಯ ವಿಮರ್ಶೆಯ ಮಾನಸಿಕ ರಚನೆ, ಇದೆಯೆಂದು ಭಾವಿಸಿ ಅದಕ್ಕೊಂದು ಆಕಾರ ಮತ್ತು ಗುಣಲಕ್ಷಣ ಕೊಡುವ ಬಗೆ (ನಾರಾಯಣ ಕೆ.ವಿ. ೧೯೯೭ ಪು.೧-೨) ಎನ್ನುತ್ತಾರೆ. ಹಾಗೆಯೇ ಜನಪ್ರಿಯ ಸಾಹಿತ್ಯ ಎಂಬುದನ್ನು ಕನ್ನಡ ವಿಮರ್ಶೆಯು ಮಾನಸಿಕವಾಗಿ ನಿರ್ವಚಿಸಿ ಕೊಂಡಿರುವಂತೆ ಜನಪ್ರಿಯ ಸಾಹಿತಿಗಳು ಎಂಬ ವರ್ಗವನ್ನು ಇಲ್ಲಿ ರೂಪಿಸಲಾಗಿದೆ. ಒಂದು ಕೃತಿಯು ಸೃಷ್ಟಿ, ಪ್ರಸಾರ ಮತ್ತು ಸಂವಾದ ಈ ಮೂರು ಹಂತಗಳಲ್ಲಿ ಜನಪ್ರಿಯತೆಯ ವ್ಯಾಖ್ಯಾನವನ್ನು ಬೆಳೆಸಿ ಅದಕ್ಕೆ ಬೇಕು ಬೇಕಾದ ಚಹರೆಗಳನ್ನು ಕಟ್ಟಿಕೊಡಲು ಯತ್ನಿಸುತ್ತಿದ್ದೇವೆ ಎಂದು ಕೆ.ವಿ. ನಾರಾಯಣರವರು ಜನಪ್ರಿಯ ಸಾಹಿತ್ಯದ ಪರಿಕಲ್ಪನೆಯನ್ನು ಗುರುತಿಸಿದ್ದಾರೆ.

ಬಿ.ಬಾಸ್ಕರರಾವ್ ರವರು ಜನಪ್ರಿಯ ಸಾಹಿತ್ಯದ ಪರಿಕಲ್ಪನೆ ಮತ್ತು ಜನಪ್ರಿಯ ಸಾಹಿತ್ಯದ ಲಕ್ಷಣಗಳ ಬಗ್ಗೆ ಚರ್ಚಿಸುತ್ತಾರೆ. ಅವರು ಗ್ರಹಿಸಿರುವಂತೆ "ಜನಪ್ರಿಯ ಸಾಹಿತ್ಯ" ಅಕ್ಷರ ಕಲಿತ ನಮ್ಮ ಲಕ್ಷ ಗಟ್ಟಲೆ ಜನಸಾಮಾನ್ಯ ಓದುಗ ಜಗತ್ತು ಅವರ ಅಭಿರುಚಿಗೆ ತಕ್ಕಂತೆ ಅವರ ಜೀವನದ ಕನಸುಗಳನ್ನು ಜೀವನ ಮೌಲ್ಯಗಳನ್ನು ಬದುಕಿನ ಆದರ್ಶಗಳನ್ನು ಸಂಭ್ರಮಗಳನ್ನು ಸರಳವಾಗಿ ಪ್ರತಿಫಲಿಸುವ ಪ್ರತಿಪಾದಿಸುವ ಸಾಹಿತ್ಯ ಅದು ಜನಸಾಮಾನ್ಯ ಓದುಗನೊಂದಿಗೆ ಸರಳ ನಿರೂಪಣೆ ಹಾಗೂ ಸಂವಾದದ ಮೂಲಕ ಅವನನ್ನು ನೇರವಾಗಿ ತಲುಪುವ ಪ್ರಯತ್ನ, ಅದು ಬದುಕಿನ ಸಂಕೀರ್ಣತೆಯನ್ನು ಬದುಕುವ ಪ್ರಕ್ರಿಯೆಯಲ್ಲಿ ಎದುರಾಗುವ ದ್ವಂದ್ವಗಳನ್ನು ಅದು ಓದುಗನಿಗೆ ಪರಿಚಯಿಸದಿರಬಹುದು. ಆ ದ್ವಂದ್ವಗಳಿಗೆ ಅವನನ್ನು ಮುಖಾಮುಖಿಯಾಗಿಸದಿರಬಹುದು. ಪ್ರಾಯಶಃ ಇಂತಹ ಮುಖಾಮುಖಿ ಅವನ ಉದ್ದೇಶವು ಅಲ್ಲ, ಮಿಗಿಲಾಗಿ ಅದರ ಓದುಗರು ಇಂತಹ ತುಮುಲ, ದ್ವಂದ್ವಗಳನ್ನು ಭೌದ್ಧಿಕ ಮಟ್ಟದಲ್ಲಿ ನಡೆಯುವ ಮನುಷ್ಯನ ತಾಕಲಾಟವನ್ನು ನಿರೀಕ್ಷಿಸುವುದು ಇಲ್ಲ. (ವಿವಿಧ ಲೇಖಕರು; ೧೯೯೪; ಪು.೨೨) ಎಂದು ಜನಪ್ರಿಯ ಸಾಹಿತ್ಯವನ್ನು ಗುರುತಿಸುವ ಮೂಲಕ ಅದರ ಲಕ್ಷಣಗಳನ್ನು ಈ ರೀತಿಯಲ್ಲಿ ಗ್ರಹಿಸುತ್ತಾರೆ.

- ಜನಪ್ರಿಯ ಸಾಹಿತ್ಯದಲ್ಲಿ ಬುದ್ಧಿಯ ಅಂಶಕ್ಕಿಂತ ಭಾವನೆಗಳಿಗೆ ಒತ್ತು ನೀಡಲಾಗಿರುತ್ತದೆ.
- ತಂತ್ರಗಾರಿಕೆಯಲ್ಲಿ ಹೊಸತನದ ಕೊರತೆ ಮತ್ತು ಅದರಿಂದಾಗಿ ಕಾಣುವ ಚರ್ವಿತ ಚರ್ವಣ, ಏಕತಾನತೆ.
- ಸಾಮಾನ್ಯವಾಗಿ ಜನಪ್ರಿಯ ಸಂಸ್ಕೃತಿಯಿಂದ ಪಡೆದ ಕಥಾವಸ್ತುವಾಗಿರುತ್ತದೆ.
- ಅಸಹಜ ಸಿನಿಮೀಯ ಅನ್ನಿಸುವಂತಹ ಧೋರಣೆ ಮತ್ತು ಸನ್ನಿವೇಶಗಳು ಕಂಡು ಬರುತ್ತದೆ
- ಸಿದ್ಧ ಮಾದರಿಗಳು (ಪ್ರೀತಿ, ಪ್ರೇಮ, ಗೃಹ ಕಲಹ, ಅತ್ತೆ ಸೊಸೆ ಜಗಳ ಇತ್ಯಾದಿ)
- ಜನರಿಂದ ದೂರವಾಗದೇ ಅವರ ದಿನನಿತ್ಯದ ಜಂಜಾಟಗಳಿಗೆ ಧ್ವನಿ ನೀಡುವ ಪ್ರಯತ್ನವಿರುತ್ತದೆ.
- ಜನಪ್ರಿಯತೆಯನ್ನು ಜನಪ್ರಿಯತೆಗಾಗಿಯೆ ಬರೆದಂತಿರುವ ಬರವಣಿಗೆಯಿರುತ್ತದೆ.
- ಓದುಗರ ನಿರೀಕ್ಷೆಗಳನ್ನು ಪೂರೈಸುವ ಕಥನ ಶೈಲಿ (ಅದೇ; ಪುಟ. ೨೯-೩೧) ಯಾಗಿರುತ್ತದೆ.

ನಮ್ಮ ಸಂಸ್ಕೃತಿಯನ್ನು ಅನುಭೋಗಿಸುವವರು, ಅರ್ಥೈಸುವರು ಮತ್ತು ಹಲವು ವೇಳೆ ಅದನ್ನು ಪುನರ್ ರೂಪಿಸುವವರು ಜನಪ್ರಿಯ ಸಾಹಿತಿಗಳೇ ಇರಬಹುದೇ ? ಎಂದು ಕೇಳುವ ಭಾಸ್ಕರರಾವ್ ಅವರ ಈ ಪ್ರಶ್ನೆ ಮಹತ್ವ ಪೂರ್ಣವಾದದು. ಜನಪ್ರಿಯ ಸಾಹಿತ್ಯ ಈಗಿನದಕ್ಕಿಂತ ಭಿನ್ನವಾಗಿ ಸಮಾಜ ಮುಖಿಯಾಗಿ ದ್ವೇಷ ಹಿಂಸೆಯನ್ನು ದೌರ್ಜನ್ಯವನ್ನು ತಡೆಗಟ್ಟಲು ಸಹಕಾರಿಯಾದರೆ ವಿಮರ್ಶಕರು ಸಾಹಿತ್ಯ ವಿಮರ್ಶೆಯ ಯಾವ ಮಾನದಂಡವನ್ನು ಇದಕ್ಕೆ ಅನ್ವಯಿಸದೆ ಒಪ್ಪಿಕೊಳ್ಳಬಹುದಾಗಿದೆ ಎನ್ನುತ್ತಾರೆ.

ಜನಪ್ರಿಯ ಸಾಹಿತ್ಯವು ನೇರವಾಗಿ ನಮ್ಮ ಭಾವನಾತ್ಮಕ ಸಂವೇದನೆಗಳ ಮೇಲೆ ಪ್ರಭಾವ ಬೀರುತ್ತದೆ, ಹುಂಬ ರಾಷ್ಟ್ರೀಯ ಭಾವ, ಆದರ್ಶಗಳ ವಿಪರೀತ ಕಲ್ಪನೆ, ಅಸಂಭಾವ್ಯ ಉತ್ಪ್ರೇಕ್ಷಗಳು ಮುಂತಾದುವುಗಳನ್ನು ದಿಗ್ದರ್ಶಿಸುವ ಮಾದರಿಯ ಬರಹಗಳು ಬಹು ಜನರ ಮೆಚ್ಚುಗೆಗೆ ಪಾತ್ರವಾಗುತ್ತವೆ. ಜನಪ್ರಿಯ ಸಾಹಿತ್ಯ ಬಿಂಬಿಸುವ ಮತ್ತೊಂದು ರೀತಿಯ ವಸ್ತು ಪ್ರಣಯ ಪ್ರೀತಿಯ ಕನಸುಗಳನ್ನು ಲೇಖಕ ನಮ್ಮ ಮುಂದೆ ಹತ್ತಾರು ರೀತಿಗಳಲ್ಲಿ ಇಟ್ಟಾಗ ಓದುಗರು ಇವುಗಳನ್ನು ತುಂಬಾ ಇಷ್ಟಪಡುತ್ತಾರೆ. ಜೀವನದ ಏಕತಾನತೆಯಿಂದ ಬೇಸತ್ತ ಜನಗಳು ಸಾಹಸ ಪ್ರಧಾನ ಬರಹಗಳನ್ನು ಇಷ್ಟಪಡುತ್ತಾರೆ. ಬದುಕಿನಿಂದ ಪಲಾಯನ ಮಾಡುವ ಪ್ರವೃತ್ತಿಯುಳ್ಳ ಈ ಬರಹಗಳು ಜನಪ್ರಿಯ ಮಾದರಿಗಳು. ಇನ್ನು ಪತ್ತೇದಾರಿ ಕತೆಗಳಲ್ಲಿ ನಮ್ಮ ತರ್ಕ ಪ್ರಜ್ಞೆಯನ್ನು ತೃಪ್ತಿಗೊಳಿಸುವ ಪ್ರಯತ್ನವಿರುತ್ತದೆ. ಹಾಗೆಯೆ

ಪ್ರತಿಯೊಬ್ಬ ಓದುಗನೂ ಪ್ರಾರಂಭದಲ್ಲಿ ಪತ್ತೇದಾರಿ ಕತೆಗಳಿಂದಲೇ ತನ್ನ ಓದನ್ನು ಪ್ರಾರಂಭಿಸುತ್ತಾನೆ. ಅದು ತೀರಾ ಜಡ್ಡು ಹಿಡಿದಾಗ ಓದುಗ ಬೇರೊಂದು ಬಗೆಯನ್ನು ಆಯ್ದುಕೊಳ್ಳುತ್ತಾನೆ. ಬಹುಪಾಲು ಜನ ಈ ಘಟ್ಟದಲ್ಲಿ ನಿಂತು ಬಿಡುತ್ತಾರೆ. ಅವರ ಓದು ಹೀಗೆ ನಿಲ್ಲಬಾರದು (ಶಾಮರಾಯ ತ.ಸು.(ಸಂ); ೧೯೯೧; ಪು.೨೮೦-೮೧) ಎನ್ನುತ್ತಾರೆ.

ಎಸ್.ಎಸ್. ಚಿದಂಬರರಾವ್ ರವರು "ಜನಪ್ರಿಯ ಸಾಹಿತ್ಯ ಹಾಗೂ ಗಂಭೀರ ಸಾಹಿತ್ಯ" ಎಂಬ ಲೇಖನದಲ್ಲಿ ಜನಪ್ರಿಯ ಮತ್ತು ಗಂಭೀರ ಸಾಹಿತ್ಯದ ಬಗ್ಗೆ ಹೇಳುತ್ತಾರೆ. 'ಸ್ವರೂಪ' ' ನಿಕ್ಷೇಪ' ಸಂಸ್ಕಾರ, 'ಪರ್ವ', 'ಶಿಕಾರಿ' 'ವೈಶಾಖ' 'ಪುರುಷೋತ್ತಮ' 'ಚಿದಂಬರ ರಹಸ್ಯ' ಇತ್ಯಾದಿ ಕೃತಿಗಳೆಲ್ಲಾ ಕಲಾಸತ್ವದ ಅಭಿವ್ಯಕ್ತಿಗಳು, ಇವುಗಳನ್ನು ಅಭ್ಯಾಸ ಮಾಡಬೇಕು ಎನ್ನುತ್ತಾ ಜನಪ್ರಿಯ ಸಾಹಿತ್ಯ ಇದಕ್ಕೆ ತದ್ವಿರುದ್ಧವಾದುದು ಎಂದು ಅವರು ಗುರುತಿಸುವ ಅಂಶಗಳು ಈ ಧೋರಣೆಗೆ ಪೂರಕವಾಗಿವೆ. "ಇಲ್ಲಿ ಬದುಕಿನ ಶೋಧನೆ ಇರುವುದಿಲ್ಲ ಬದುಕಿನ ಮೇಲ್ಪದರದಲ್ಲಿಯೇ ಕಲೆ ಸೃಷ್ಟಿಯಾಗುವುದರಿಂದ ಇಲ್ಲಿ ಪದೇ ಪದೇ ಅಭ್ಯಾಸ ಮಾಡುವ ಅವಶ್ಯಕತೆಯಿಲ್ಲ. ಒಮ್ಮೆ ಓದಿ ಮರೆತುಬಿಡಬಹುದಾದ ಕೃತಿಗಳಿವು. ಇಂಥ ಕೃತಿಗಳನ್ನು ತುಂಬ ಜನ ಓದುತ್ತಾರೆ. ಇದಕ್ಕೆ ಸ್ಪಷ್ಟ ಕಾರಣಗಳು ಇವೆ. ನಮ್ಮ ಜೀವನದ ಜಂಜಾಟದಲ್ಲಿ ಏನನ್ನಾದರೂ ಓದುವ ಹಂಬಲ ಹುಟ್ಟುವುದೇ ಅಪರೂಪ, ಓದಿದರೂ ಸಹ ಅದು ಪೆಡಸಾಗಿರಬಾರದು. ಬೇಗ ಅರ್ಥವಾಗುವಂತಿರಬೇಕೆಂದು ಬಯಸುತ್ತಾರೆ ಸುಲಭವಾಗಿ ಅರ್ಥವಾಗುವ ಎಂದರೇನು ? ಅದು ನಮ್ಮ ತರ್ಕ ಪ್ರಜ್ಞೆಗೆ ಹೊಂದುವಂತೆ ಇರಬೇಕು. ತರ್ಕಾತೀತ ವಿಷಯಗಳನ್ನು ಅರಿಯುವ ವ್ಯವಧಾನವಾದರೂ ಯಾರಿಗಿದೆ ? ತರ್ಕವನ್ನು ಮೀರಿದಂತ ಅಭಿವ್ಯಕ್ತಿಯನ್ನು ಕೇವಲ ಕೆಲವು ಜನ ಮಾತ್ರ ಬಯಸುತ್ತಾರೆ. ಬಹುಜನಗಳು ಬಯಸುವ ತರ್ಕಬದ್ಧವಾದ ಸಾಹಿತ್ಯವನ್ನು 'ಜನಪ್ರಿಯ ಸಾಹಿತ್ಯ' ಎನ್ನುತ್ತೇವೆ. (ವಿವಿಧ ಲೇಖಕರು; ೧೯೯೪: ಪು.೨೯) ಎಂದಿದ್ದಾರೆ.

ಕಾದಂಬರಿ ಪ್ರಕಾರವನ್ನು ಏಕೆ ಜನಪ್ರಿಯ ಸಾಹಿತ್ಯದ ಉದಾಹರಣೆಯಾಗಿ ಕೊಡಬೇಕು ? ಇವುಗಳೇ ಏಕೆ ಮತ್ತು ಹೇಗೆ ಗಂಭೀರ ಸಾಹಿತ್ಯವಾಗುತ್ತದೆ. ಜನಪ್ರಿಯ ಕಾವ್ಯ, ಜನಪ್ರಿಯ ನಾಟಕ, ಜನಪ್ರಿಯ ವಿಮರ್ಶೆ ಸಾಧ್ಯವಿಲ್ಲವೆ ? ಜನಪ್ರಿಯತೆಯನ್ನು ಗಳಿಸಿರುವ ಎಂದರೆ ಹೆಚ್ಚು ಓದುಗರನ್ನು ಗಳಿಸಿರುವ ಸಾಹಿತ್ಯ ಜನಪ್ರಿಯ ಸಾಹಿತ್ಯವೇ ? ಜನಪ್ರಿಯತೆಯು ಒಬ್ಬ ಲೇಖಕ, ಕೃತಿ, ಸಾಹಿತ್ಯ ಪ್ರಬೇಧದ ಸ್ಥಿರ ಲಕ್ಷಣವೇ? ಗಂಭೀರ ವೈಚಾರಿಕ ಹಿನ್ನಲೆಯೇನೂ ಇರದೆ ಕೇವಲ ಮನರಂಜನೆಯನ್ನು ಗುರಿಯಾಗಿಟ್ಟುಕೊಂಡಿರುವ ಸಾಹಿತ್ಯ ಜನಪ್ರಿಯ ಸಾಹಿತ್ಯವೇ ? ಕೇವಲ ವ್ಯಾಪಾರಿ ದೃಷ್ಟಿಕೋನದಿಂದ ಬರೆಯಲ್ಪಟ್ಟ ಕೃತಿಗಳು ಜನಪ್ರಿಯ ಸಾಹಿತ್ಯವೇ? ಕಥಾ ವಸ್ತು ವಿಷಯಗಳ ಆಯ್ಕೆಯ ಆಧಾರದ ಮೇಲೆ ಜನಪ್ರಿಯ ಸಾಹಿತ್ಯವನ್ನು ಗುರುತಿಸಬಹುದೇ ? ಎಂಬತ್ಯಾದಿ ಪ್ರಶ್ನೆಗಳೊಂದಿಗೆ ಸಿ.ಎನ್.ರಾಮಚಂದ್ರನ್‌ರವರು ಜನಪ್ರಿಯ ಸಾಹಿತ್ಯಕ್ಕೆ ಸಂಬಂಧಿಸಿದ ತೊಡಕುಗಳ ಬಗ್ಗೆ ವಿವೇಚಿಸಿದ್ದಾರೆ. ಕೇವಲ ಕಾದಂಬರಿ ಪ್ರಕಾರವನ್ನು ಈ ಚರ್ಚೆಯಲ್ಲಿ ಗಮನಿಸಬೇಕಾಗಿಲ್ಲ. ಜನಪ್ರಿಯ ಸಾಹಿತ್ಯದ ಲಕ್ಷಣ

ಜನಪ್ರಿಯತೆಯೊಂದೆ ಆಗಲಾರದು. ಹಾಗೆ ಜನಪ್ರಿಯತೆಯು ಒಬ್ಬ ಲೇಖಕನ ಒಂದು ಕೃತಿಯ, ಒಂದು ಸಾಹಿತ್ಯದ ಸ್ಥಿರಲಕ್ಷಣವಲ್ಲ. ಅದು ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಹೋಗುವಂತಹದು. ಕೇವಲ ಮನರಂಜನೆಯೊಂದನ್ನು ಗುರಿಯಾಗಿಟ್ಟುಕೊಂಡಿರುವ ಸಾಹಿತ್ಯವನ್ನು ಜನಪ್ರಿಯ ಸಾಹಿತ್ಯವೆಂದು ಹೇಳುವಂತಿಲ್ಲ. ವ್ಯಾಪಾರಿ ದೃಷ್ಟಿಕೋನದಿಂದ ಬರೆಯಲ್ಪಟ್ಟ ಸಾಹಿತ್ಯವನ್ನು ಸಾರಾಸಗಟಾಗಿ ಹಾಗೆ ಗುರುತಿಸುವಂತಿಲ್ಲ. ಕಥಾ ವಸ್ತು, ವಿಷಯಗಳ ಆಯ್ಕೆಯ ಮೇಲೂ 'ಜನಪ್ರಿಯ ಸಾಹಿತ್ಯ' ಎನ್ನುವಂತಿಲ್ಲ. ಖಚಿತವಾಗಿ ಜನಪ್ರಿಯತೆ ಲೇಖಕನ ಉದ್ದೇಶ ವಸ್ತು, ಇವಾವುದೂ ಒಪ್ಪತಕ್ಕ ಮಾನದಂಡವಾಗಿರಲಾರದು ಎಂದು ಸ್ಪಷ್ಟವಾಗಿ ಗುರುತಿಸುತ್ತಾರೆ (ರಾಮಚಂದ್ರನ್ ಸಿ.ಎನ್; ೧೯೯೫; ಪು.೨೭) ತಕ್ಕಮಟ್ಟಿಗೆ ಸಾಹಿತ್ಯ ಕೃತಿಗಳ ಆಕೃತಿ ಬಂಧಗಳ ಆಧಾರದ ಮೇಲ್ 'ಗಂಭೀರ ಸಾಹಿತ್ಯ' 'ಜನಪ್ರಿಯ ಸಾಹಿತ್ಯ' ಎಂದು ಬೇರ್ಪಡಿಸುವಿಕೆ ಸಾಧ್ಯವಿದೆ. ನಾಟಕ, ಕಥೆ, ಕಾದಂಬರಿಗಳೇ ಆಗಲಿ ಯಾವುದನ್ನು ಜನಪ್ರಿಯವೆಂದು ಗುರುತಿಸಲಾಗುತ್ತದೋ ಅವು ಅತ್ಯಂತ ನಿರೀಕ್ಷಿತ ರೀತಿಯಲ್ಲಿ ನಿರೀಕ್ಷಿತ ಮಟ್ಟದಲ್ಲಿ ರಚನೆಯಾಗಿರುತ್ತದೆ. ಪೂರ್ವ ನಿಶ್ಚಿತತೆ ಇದರ ಪ್ರಮುಖ ಲಕ್ಷಣ ತೇಲು ಮಟ್ಟದ ಆದರ್ಶ ಪ್ರಿಯತೆ, ಪಡಿಯಚ್ಚುಗಳ ಪುನರಾವರ್ತನೆ ಜನಪ್ರಿಯ ಕೃತಿಗಳ ಪ್ರಮುಖ ಲಕ್ಷಣಗಳು ಎಂದು ಹೇಳುವ ಸಿ.ಎನ್.ರಾಮಚಂದ್ರನ್ ರವರು ಜನಪ್ರಿಯ ಸಾಹಿತ್ಯದ ಜನಪ್ರಿಯತೆಯ ಕಾರಣಗಳನ್ನು ಹೀಗೆ ಗ್ರಹಿಸುತ್ತಾರೆ.

೧. ಜನಪ್ರಿಯ ಸಾಹಿತ್ಯ ಓದುಗರ ನಿರೀಕ್ಷೆಗಳನ್ನು ಪೂರೈಸುತ್ತದೆ. ಓದುಗ ತಾನೆ ಯೋಚಿಸಿ, ವಿಚಾರಿಸಿ ಅರ್ಥೈಸಲು ಕೃತಿಯಲ್ಲಿ ಯಾವುದೇ 'ಗ್ಯಾಪ್, ಬ್ಲಾಂಕ್' ಗಳಿಲ್ಲದಿರುವುದರಿಂದ ಸಾಮಾನ್ಯ ಓದುಗನಿಗೆ ಹೆಚ್ಚು ಪ್ರಿಯವಾಗುತ್ತದೆ. ಅದು ಓದುಗನ ನಂಬಿಕೆಗಳು, ವಿಚಾರಗಳು, ಅನುಭವಗಳನ್ನು, ಯಾವುದೇ ವಿಧವಾದ ಧಕ್ಕೆಯುಂಟು ಮಾಡದೆ ಸಮರ್ಥಿಸುತ್ತದೆ.

೨. ಮನುಷ್ಯರೆಲ್ಲರಿಗೂ ಸಹಜವಾಗಿರುವ 'ಕಥಾಪ್ರಿಯತೆ' ಆದಿಮಾನವನಿಂದ ಇಂದಿನ ನಾಗರೀಕನವರೆಗೆ ಪ್ರತಿಯೊಬ್ಬನೂ ತನ್ನ ನಿಜ ಜೀವನದಲ್ಲಿರದ ಅಥವಾ ಸಾಧ್ಯವಾಗದ ರೋಚಕತೆಯನ್ನು ಅದ್ಭುತ ಸಾಹಸ ಪ್ರಣಯ ಕಥೆಗಳ ಮೂಲಕ ಕಾಲ್ಪನಿಕವಾಗಿ ಅನುಭವಿಸುವ ಆಸಕ್ತಿಯನ್ನು ಜನಪ್ರಿಯ ಸಾಹಿತ್ಯ ತಣಿಸುತ್ತದೆ ಮತ್ತು ಘಟನೆಗಳನ್ನು ರೋಚಕವಾಗಿ ಹೆಣೆಯಲಾಗಿರುತ್ತದೆ. ಗಂಭೀರ ಸಾಹಿತ್ಯ ಘಟನೆಗಳಿಗಿಂತ ಹೆಚ್ಚಾಗಿ ಪಾತ್ರಗಳ ಮಾನಸಿಕ ಚಿತ್ರಣಕ್ಕೆ ಒತ್ತುಕೊಡುವುದರಿಂದ ಮುಂದೇನು ಎಂಬ ಕುತೂಹಲಕ್ಕೆ ಆಸ್ಪದವಿರುವುದಿಲ್ಲ.

೩. ಜನಪ್ರಿಯ ಸಾಹಿತ್ಯದ ಜನಪ್ರಿಯತೆಗೆ ಕಾರಣವೆಂದರೆ ಅದು ಓದುಗರ ಮೆದುಳಿಗಿಂತ ಹೃದಯಕ್ಕೆ ಲಗ್ಗೆ ಇಡುತ್ತದೆ. ಮನುಷ್ಯ ಮೂಲತಃ ಭಾವಜೀವಿಯಾದುದರಿಂದ ವಿವಿಧ ಭಾವನೆಗಳನ್ನು ಅದು ಪ್ರಚೋದಿಸುವುದರ ಮೂಲಕ ಜನಪ್ರಿಯತೆ ಗಳಿಸುತ್ತದೆ. (ಅದೇ; ಪುಟ.೩೦)

ಕೊನೆಯದಾಗಿ ಸಿ.ಎನ್.ರಾಮಚಂದ್ರನ್ ರವರು ಅಭಿಪ್ರಾಯ ಪಡುವುದೇನೆಂದರೆ ಜನಪ್ರಿಯ ಸಾಹಿತ್ಯವನ್ನು ಖಚಿತವಾಗಿ ಗುರುತಿಸುವ ಯಾವ ಮಾನದಂಡಗಳೂ ಇಲ್ಲ.

- ಸಾಹಿತ್ಯಕೃತಿಗಳಲ್ಲಿ 'ಜನಪ್ರಿಯ' ಗಂಭೀರ ಎಂದು ಎರಡು ವರ್ಗಗಳೇ ಅಲ್ಲ. ಒಂದನ್ನೊಂದು ಒಳಗೊಳ್ಳುವ ಅನೇಕ ವರ್ಗಗಳಿವೆ.
- ಕೇವಲ ಕಾದಂಬರಿ ಪ್ರಕಾರವೊಂದೇ ಜನಪ್ರಿಯ ಸಾಹಿತ್ಯವಾಗಬೇಕಿಲ್ಲ.
- ಎಲ್ಲಾ ಕಾಲದಲ್ಲಿಯೂ ಕೇವಲ ಗಂಭೀರ ಎನಿಸುವ ಕಲಾಕೃತಿಗಳು ನಿರ್ಮಾಣವಾಗಲು ಸಾಧ್ಯವಿಲ್ಲ.
- ಒಂದರ್ಥದಲ್ಲಿ ಜನಪ್ರಿಯ ಸಾಹಿತ್ಯದ ಆಧಾರವಿಲ್ಲದೆ ಗಂಭೀರ ಸಾಹಿತ್ಯ ಸೃಷ್ಟಿ ಆಗುವುದಿಲ್ಲ.
- ಜನಪ್ರಿಯ ಮಾಧ್ಯಮಗಳ ಪರಿಣಾಮದ ಬಗ್ಗೆ ಉತ್ಪ್ರೇಕ್ಷ ಹಾಗೂ ಉಪೇಕ್ಷೆಗಳ ಅತಿರೇಕಕ್ಕಿಂತ ಬೇರೆಯಾವ ಹಾದಿ ಬೇಕಾಗಿದೆ.
- ಇಂದು ಜನ ಏನನ್ನಾದರೂ ಓದುತ್ತಾರೆ ಎಂಬುದು ಮುಖ್ಯ. ಇಂದಿನ ಯಾಂತ್ರಿಕ ಗಡಿಬಿಡಿಯ ಬದುಕಿನಲ್ಲಿ ಜನರಲ್ಲಿ ಓದುವಿಕೆ ಉಳಿದಿದೆ ಎಂಬುದೇ ಪ್ರಮುಖವೆಂದು ಹೇಳುವ ಅವರ ಮಾತುಗಳು ಪ್ರಮುಖವಾಗಿವೆ. (ಅದೇ; ಪು. ೩೮)

ಯು.ಆರ್.ಅನಂತಮೂರ್ತಿಯವರು ತಮ್ಮ 'ಜನಪ್ರಿಯ ಕಲೆ ಮತ್ತು ಮಧ್ಯಮ ವರ್ಗ–ನಾಗರಹಾವು ಚಿತ್ರದ ವಿಶ್ಲೇಷಣೆ ಮತ್ತು ಬೈರಪ್ಪನವರ ಬಗ್ಗೆ' ಎಂಬ ಲೇಖನದಲ್ಲಿ ಬೈರಪ್ಪನವರ ಕಥನ ಕಲೆ ನೆಲೆಯಿಂದ ನೋಡುತ್ತಾ ಜನಪ್ರಿಯ ಕಲೆ ವಂಚಿಸಿ ರಂಜಿಸುವಂತಹುದು ಎಂದು ಅಭಿಪ್ರಾಯ ಪಟ್ಟಿದ್ದಾರೆ. (ಅನಂತಮೂರ್ತಿ ಯು.ಆರ್.; ೨೦೦೪; ಪು. ೧೭೭–೧೭೩)

ಜನಪ್ರಿಯ ಸಾಹಿತ್ಯದ ಬಗೆಗೆ ಕಂಡು ಬರುವ ಪ್ರಾರಂಭಿಕ ಚಿಂತನೆ ಮತ್ತು ವಿಮರ್ಶೆಯಲ್ಲಿ ಈ ಧೋರಣೆ ಮುಂದುವರೆದುಕೊಂಡು ಬಂದಿರುವಂತೆ ಕೆ.ವಿ.ನಾರಾಯಣ ಅವರು ತಮ್ಮ 'ಜನಪ್ರಿಯ ಸಾಹಿತ್ಯ; ಚರ್ಚೆಯ ನೆಲೆಗಳು' ಎಂಬ ಲೇಖನದಲ್ಲಿ ಜನಪ್ರಿಯ ಸಾಹಿತ್ಯದ ಬಗೆಗಿನ ಚರ್ಚೆಗಳಲ್ಲಿ ಆರ್ಥಿಕ ವ್ಯವಸ್ಥೆ ಸಂಬಂಧಿ ಪದಗಳಾದ ಉತ್ಪಾದನೆ, ಮಾರುಕಟ್ಟೆ, ಹಂಚಿಕೆ, ಗ್ರಾಹಕ, ದಳ್ಳಾಳಿ, ಇವುಗಳನ್ನು ಬಳಸಬೇಕಾಗುತ್ತದೆ ಎಂದು ಅಭಿಪ್ರಾಯ ಪಟ್ಟಿರುತ್ತಾರೆ. (ನಾರಾಯಣ ಕೆ.ವಿ. ೧೯೯೭ ಪು. ೪೨–೪೫)

ಹೊಸಗನ್ನಡ ಸಾಹಿತ್ಯ ಚರಿತ್ರೆಯಲ್ಲಿ 'ಜನಪ್ರಿಯ ಕಾದಂಬರಿಗಳು' ಎಂಬ ಉಲ್ಲೇಖದಲ್ಲಿ ಎಲ್.ಎಸ್. ಶೇಷಗಿರಿರಾಯರು 'ಜನಪ್ರಿಯತೆ ಕಾದಂಬರಿಯ ಹೆಗ್ಗಳಿಕೆಯೂ ಆಗಬೇಕಿಲ್ಲ. ತಿರಸ್ಕಾರಕ್ಕೆ

ಕಾರಣವು ಆಗಬೇಕಿಲ್ಲ. ಆದರೆ ಕಾದಂಬರಿಯು ಸಾಹಿತ್ಯದ ಅತ್ಯಂತ ಜನಪ್ರಿಯ ಪ್ರಕಾರವಾಗಿರುವ ಸಂದರ್ಭದಲ್ಲಿ ಒಂದು ಮಾತನ್ನು ಹೇಳಬೇಕು. ಅತಿಭಾವುಕತೆ ಅಥವಾ ಭಾವಾಶೈಥಿಲ್ಯ ಮಾನಸಿಕ ಆರೋಗ್ಯಕ್ಕೆ ಶತ್ರು. ಭಾವುಕತೆಯಲ್ಲಿ ಸಂಭ್ರಮಿಸುವ ಕಾದಂಬರಿಗಳು ತಮ್ಮ ವರ್ಣನೆಗಳಲ್ಲಿ ವಾಸ್ತವವೆಂದು ಕಂಡರೂ ಬದುಕಿನ ವಾಸ್ತವ ಸ್ವರೂಪವನ್ನು ಕಾಣಿಸಲಾರವು. ಅನೇಕ ಜನಪ್ರಿಯ ಕಾದಂಬರಿಗಳಲ್ಲಿ ಭಾವದ ಸೂಕ್ಷ್ಮತೆ ಇರುವುದಿಲ್ಲ. ಸ್ಥೂಲ ಒರಟು ಭಾವಗಳು ಉದ್ವೇಗದ ಭಾಷೆಯಲ್ಲಿ ಮೆರೆಯುತ್ತವೆ. ಬದುಕಿನಲ್ಲಿ ನಾವು ಕಾರ್ಯಾನ್ಮುಖರಾಗುವುದು. ನಮ್ಮ ಭಾವವು ತೀವ್ರವಾದಾಗ ಭಾವವು ಆರೋಗ್ಯಕರವಾಗಿರುವಂತೆ, ಸಂವೇದನೆ ಸೂಕ್ಷ್ಮವಾಗಿರುವಂತೆ ಉಳಿಸಿಕೊಳ್ಳಬೇಕು ಎಂದು ಅಭಿಪ್ರಾಯ ಪಟ್ಟಿದ್ದಾರೆ (ಶೇಷಗಿರಿರಾವ್ ಎಲ್.ಎಸ್.;೨೦೦೨) ಪು.೨೬೩).

ಜನಪ್ರಿಯ ಕಲೆ, ಸಂಸ್ಕೃತಿ, ಸಾಹಿತ್ಯಗಳ ಸಂಬಂಧದ ನೆಲೆಯಲ್ಲಿ ರಾಜೇಂದ್ರ ಚೆನ್ನಿ ಹಾಗೂ ರಹಮತ್ ತರಿಕೆರೆಯವರು ಚರ್ಚಿಸುತ್ತಾ ಮನುಷ್ಯನ ಉಗಮ, ವಿಕಾಸ ಹಾಗೂ ಕಲೆ ಧರ್ಮಗಳ ಸಂಬಂಧ ಹಾಗೂ ಅಂತರಂಗಗಳನ್ನು ಗಮನಿಸುತ್ತಾ ಜನಪ್ರಿಯ ಕಲೆಯ ಬಗೆಗೆ ಪ್ರಸ್ತಾಪಿಸಿದ್ದಾರೆ. 'ವ್ಯವಸ್ಥೆ ತಾನು ನಿರಂತರವಾಗಿ ಉಳಿಯಲು ಸುಸೂತ್ರವಾದ ಪಡಿಯಚ್ಚುಗಳನ್ನು ಪುನರಾವರ್ತನೆಯ ಮೂಲಕ ಗಟ್ಟಿಗೊಳಿಸುತ್ತವೆ. ಜನಪ್ರಿಯ ಕಾದಂಬರಿಯ ಭಾಷೆ, ಪಾತ್ರಗಳು, ಧೋರಣೆಗಳು ಇವೆಲ್ಲವುಗಳು ಪಡಿಯಚ್ಚುಗಳೇ ಅನುಭವದಲ್ಲಿ ವಿಶಿಷ್ಟವಾಗಿರುವುದನ್ನು ನುಣ್ಣನೆ ಸವರಿಬಿಟ್ಟು ಅನುಭವವನ್ನು ಸೃಷ್ಟಿಸುವ ಸೃಜನಶೀಲತೆಯಿಲ್ಲದ ವಾಹಕ ಭಾಷೆಯನ್ನು ಬಳಸುತ್ತಾ ಈ ಕಾದಂಬರಿಗಳು ನಮಗೆ ಗೊತ್ತಿರುವುದನ್ನು ಗೊತ್ತಿರುವ ರೀತಿಯಲ್ಲಿ ಹೇಳುತ್ತವೆ. ಆದ್ದರಿಂದಲೇ ಅವುಗಳನ್ನು ಸುಲಭವಾಗಿ ಬಸ್ಸು, ರೈಲಿನಲ್ಲಿ ಮತ್ತು ಅರ್ಧ ಎಚ್ಚರದ ಸ್ಥಿತಿಯಲ್ಲಿ ಓದಬಹುದು. ಕಾದಂಬರಿಯಲ್ಲಿ ಘಟನೆಗಳನ್ನು ಮಾತ್ರ ಹಿಗ್ಗಾ ಮುಗ್ಗಾ ಎಳೆದಾಡುತ್ತಾ ಏನೋ ಆಗುವುದರಲ್ಲಿದೆ ಎನ್ನುವ ಭ್ರಮೆಯನ್ನು ಹುಟ್ಟಿಸುತ್ತಾ ಕೊನೆಗೆ ನಮಗೆ ಗೊತ್ತಿದ್ದದ್ದು ನಿಜ ಎನ್ನುವ ಆತ್ಮ ಸಂತೃಪ್ತಿಯನ್ನು ನೀಡುತ್ತವೆ. ವಾಸ್ತವದಿಂದ ಹಿಂದೇಟು ಹಾಕುವ ಪ್ರವೃತ್ತಿ ಕೇವಲ ಅಪ್ರಬುದ್ಧ ಮನಸ್ಸಿನ ವಿಕೃತಿಯಲ್ಲ. ಇಡೀ ಸಂಸ್ಕೃತಿಯೊಂದು ಈ ಪ್ರವೃತ್ತಿಗೆ ತನ್ನನ್ನು ಒಡ್ಡಿಕೊಳ್ಳುವುದು ನಾವೆಂದುಕೊಳ್ಳುವುದಕ್ಕಿಂತ ಸಾಮಾನ್ಯ ಎನ್ನುವುದನ್ನು ನೆನಪಿಸಿಕೊಂಡರೆ ಸಾಕು. ಜನಪ್ರಿಯ ಸಾಹಿತ್ಯದ ಆಕರ್ಷಣೆಯನ್ನು ಗುರುತಿಸುವುದು ಸುಲಭವಾಗುತ್ತದೆ. ಅಲ್ಲದೆ ವಾಸ್ತವಕ್ಕೆ ಎಚ್ಚರವಹಿಸಿ ಸೂಕ್ಷ್ಮಗೊಳಿಸಿ ನೈತಿಕ ನಿಷ್ಕರ್ಷೆಯಲ್ಲಿ ಗುರುತರವಾಗಿಸುವ ನಿಜವಾದ ಕಲೆ ಯಾಕೆ ಈ ಅರ್ಥದಲ್ಲಿ ಜನಪ್ರಿಯವಲ್ಲವೆನ್ನುವುದು ಗೊತ್ತಾಗುತ್ತದೆ. ಚಿಕ್ಕಂದಿನಲ್ಲಿ ನಾವು ಇಷ್ಟ ಪಡುವ ಅಡುಗೂಲಜ್ಜಿ ಕಥೆಗಳಲ್ಲಿ ಎಲ್ಲವೂ ನಿಶ್ಚಳವಾಗಿರುತ್ತದೆ, ಢಾಳಾಗಿರುತ್ತದೆ. ಒಳಿತು–ಕೆಡಕು, ತಪ್ಪು–ಒಪ್ಪು ಇವುಗಳು ಖಚಿತವಾಗಿರುವುದರಿಂದ ಅವನ್ನು ಕೇಳುವವರಿಗೆ ನೈತಿಕ ನಿಷ್ಕರ್ಷೆ ಮಾಡುವ ಜವಾಬ್ದಾರಿಯಿರುವುದಿಲ್ಲ. ಆದರೆ ವಾಸ್ತವದಲ್ಲಿ ಈ ರೀತಿಯ ಖಚಿತತೆಯ ಬದಲು ದ್ವಂದ್ವಗಳ ಅಸ್ಪಷ್ಟತೆಗಳಿರುತ್ತವೆ. ಆದ್ದರಿಂದ

ಎಲ್ಲವೂ ನಿಶ್ಚಳವಾಗಿರುವ ಜನಪ್ರಿಯ ಸಾಹಿತ್ಯ ಮತ್ತು ಕಲೆ ನಮ್ಮಲ್ಲಿಯ ಅಪ್ರಬುದ್ಧತೆಯ ಅಂಶಕ್ಕೆ ಕುಮ್ಮಕ್ಕು ಕೊಡುತ್ತವೆ" (ರಾಜೇಂದ್ರ ಚೆನ್ನಿ: ೨೦೦೨; ಪು.೨೧೫) ಎನ್ನುತ್ತಾರೆ.

ಕನ್ನಡ ವಿಮರ್ಶೆಯು 'ಜನಪ್ರಿಯ ಸಾಹಿತ್ಯ'ವನ್ನು ಜನಪ್ರಿಯ ಸಂಸ್ಕೃತಿಯ ಭಾಗವಾಗಿ ಪರಿಗಣಿಸಿದ್ದಿದೆ. ರಹಮತ್ ತರಿಕೆರೆಯವರು "ನಮ್ಮ ಆರ್ಥಿಕ ಸಾಮಾಜಿಕ ಸಂದರ್ಭದ ಅನಿವಾರ್ಯ ಬೆಳವಣಿಗೆಯಿಂದಾಗಿ ಈ ಜನಪ್ರಿಯ ಸಾಹಿತ್ಯವು ಹುಟ್ಟುತ್ತಿದ್ದು, ಜೀವಿಸುತ್ತಿದ್ದು ನಮ್ಮ ಒಟ್ಟು ಸಂಸ್ಕೃತಿಯ ಒಂದು ಸಹಜ ಇರುವಿಕೆಯ ಭಾಗವಾಗಿ ಬಿಟ್ಟಿದೆ. ಹೀಗಾಗಿ ಅಕ್ಷರಸ್ಥರ ಸಂಖ್ಯೆ ಹೆಚ್ಚಾಗುತ್ತಿದ್ದರೂ ನಮ್ಮ ಮಹತ್ವದ ಬರಹಗಾರರ ಅಲ್ಪಸಂಖ್ಯೆಯ ಗಂಭೀರ ಓದುಗರ ಕಲಾತ್ಮಕ ಕೃತಿಗಳು, ಸಿನಿಮಾಗಳು, ಆಯ್ದ ವಿಮರ್ಶಕರ ಸ್ವತ್ತಾಗಿರುವ ಸ್ಥಿತಿಯೇರ್ಪಟ್ಟಿದೆ. ಜನಪ್ರಿಯ ಸಾಹಿತ್ಯದ ಜೊತೆ ಸಂವಾದ ನಡೆಸುವುದೇ ಈ ಬಗ್ಗೆ ಆಲೋಚನೆ ನಡೆಸುವುದೇ ಕನ್ನಡ ವಿಮರ್ಶೆಗೆ ಸಾಧ್ಯವಾಗಿಲ್ಲ. ಈತನಕ ಕನ್ನಡದಲ್ಲಿ ಈ ಬಗ್ಗೆ ನಡೆದಿರುವ ಅತ್ಯಲ್ಪ ಚರ್ಚೆಯೂ ಇದಕ್ಕೆ ಸಾಕ್ಷಿ. ಜನಪ್ರಿಯ ಸಾಹಿತ್ಯವು ಮುಖ್ಯಧಾರೆಯಿಂದ ಹೊರಗು ಎನ್ನಲಾಗುತ್ತದೆ. ಆದರೆ ಪ್ರಮಾಣ ದೃಷ್ಟಿಯಿಂದ ಗಂಭೀರ ವಿಮರ್ಶಕರ ಮೂಗು ಮುರಿತವನ್ನು ಮೀರಿ ಅದೇ ಮುಖ್ಯಧಾರೆಯಾಗಿದೆ. ಕನಸನ್ನು ಕೊಡುವ ಬರಹಗಳಿಗಿಂತ ಕನಸು ಮಾಡುವವರೇ ಸಂತೆ ತುಂಬ ನೆರೆದಿದ್ದಾರೆ. ಬಹುಸಂಖ್ಯಾತ ಓದುಗ ವಲಯವನ್ನು ಕುವೆಂಪು, ಬೇಂದ್ರೆ, ಕಾರಂತ, ಮಾಸ್ತಿಯವರ ಸಾಹಿತ್ಯ ಸಂವೇದನೆಗೆ ಒಳಪಡಿಸುವುದು ಹೇಗೆ? (ವಿವಿಧ ಲೇಖಕರು; ೧೯೯೪; ಪು.೧೮) ಎನ್ನುತ್ತಾರೆ.

'ಮಧ್ಯಮವರ್ಗದ ಏಕತಾನದ, ಪರಿಳಿತಗಳಿಲ್ಲದ ಕಠಿಣ ಶ್ರಮವಿಲ್ಲದ ಬಾಳಿನ ರೀತಿಗೂ, ಅಂಥ ಬಾಳಿನಲ್ಲಿ ದುತ್ತನೆ ಎದುರಾಗುವ ಏಕತಾನವನ್ನು ಒಡೆದು ರೋಮಾಂಚನದ ಮಿಸುಕಾಟವನ್ನು ಕೊಡುವ ಜನಪ್ರಿಯ ಸಾಹಿತ್ಯ ಸಿನಿಮಾಗಳ ಆಶಯಗಳಿಗೂ ಗಾಢ ಸಂಬಂಧವಿದೆ. ಯಾವುದು ವಾಸ್ತವದ ನಿಜದ ಸೂಜಿ ಮೊನೆಗೆ ತಾಗಿಸಿ ಚುಚ್ಚಿ, ಆಲೋಚನೆಗೆ ಕ್ರಿಯೆಗೆ, ಹಚ್ಚುವುದೋ ಅದು ಬೇಡವಾಗಿ, ಕಹಿಯಾಗಿ, ಯಾವುದು ಜನಸಮೂಹದ ಮನಸ್ಸನ್ನು ವಾಸ್ತವದಿಂದ ವರ್ಗಾಯಿಸಿ ಹುಸಿ ಲೋಕದಲ್ಲಿಟ್ಟು ರಂಜಿಸಿ ತೆಗೆಸುತ್ತಿದೆಯೋ ಅದೇ ಬೇಕಾಗಿರುವುದರಿಂದ ಅದೇ ಜನಪ್ರಿಯವಾಗಿರುವುದು, ಕಣ್ಕಟ್ಟಿನ ಕೆಲಸ ಮಾಡುತ್ತಿರುವುದು. ಕಠೋರವಾದ ದೈನಿಕದ ವಾಸ್ತವಗಳಿಗೆ ಡಿಕ್ಕಿ ಹೊಡೆ ಹೊಡೆದು ಭರ್ಜರಿತವಾಗಿರುವ ಜನಕ್ಕೆ ತಾತ್ಕಾಲಿಕ ಮರೆವಿನ ತೆರೆ ಹಾಕಿ ಶಮನದ ಅಮಲಿನ ಕೆಲಸ ಮಾಡುವ ಮಾಯೆಯು ಬೇಕಾಗಿದೆ. ಅದಕ್ಕೆಂದೇ ಜನಪ್ರಿಯ ಸಂಸ್ಕೃತಿಯು ಅನಿವಾರ್ಯವಾಗಿ ಸಹಜವಾಗಿ ಜೀವಿಸುತ್ತವೆ. ಈ ಆಟಗಳನ್ನು ಆಡುವವರು ನಿರಾಶರಾಗಿಲ್ಲ, ನಿರದ್ಯೋಗಿಗಳಾಗಿಲ್ಲ. (ಅದೇ: ಪು–೧೫) ವಿಮರ್ಶೆ ಜನಪ್ರಿಯ ಸಾಹಿತ್ಯವನ್ನು ನೇತ್ಯಾತ್ಮಕವಾಗಿ ನೋಡಿದೆ.

ಜನಪ್ರಿಯ ಸಾಹಿತ್ಯ ಕೆಡುಕನ್ನುಂಟು ಮಾಡುವಂತಹದು ಎಂಬ ಅಂಶವು ಇವೆ. 'ಜನಪ್ರಿಯ ಸಾಹಿತ್ಯ' ದಲ್ಲಿ ಲೈಂಗಿಕತೆ ಎಂಬುದು ವಾಣಿಜ್ಯಕ ಉದ್ದೇಶದಿಂದ ಬಳಕೆಯಾಗುತ್ತವೆ ಎನ್ನಲಾಗುತ್ತದೆ. ಇವೇ ಅಂಶವನ್ನು ಪ್ರಚಾರಕ್ಕೆ, ಹಣಕ್ಕೆ ಚಾಚಿಕೊಂಡಿರುವ, ಯಾವುದೇ ಮೌಲ್ಯಗಳ ಬಗೆಗೆ ಕಾಳಜಿಯಿಲ್ಲದ ಕೃತಿಗಳ ಜನಪ್ರಿಯತೆ ಕೇಡಿನದು. 'ಜನಪ್ರಿಯತೆ' ಎಂಬುದೇ ಕೇಡಿನ ಸಂಕೇತವಲ್ಲ. ಪ್ರಸಿದ್ಧಿಗಾಗಿ ಹಾತೊರೆವ ಬರಹಗಳಲ್ಲಿ ಸೆಕ್ಸ್ ಎನ್ನುವುದು ಹಾದಿಹೋಕರನ್ನು ಕಣ್ಸೆಳೆಯುವ 'ಪೋಸ್ಟರಿನ ಗ್ಲಾಮರ್' ಆಗಿರುತ್ತದೆಯೇ ಹೊರತು ಗಂಡು ಹೆಣ್ಣುಗಳ ನಡುವಣ ಸಂಬಂಧಗಳೊಳಗಿನ ಅನ್ಯೋನ್ಯ ಜಗತ್ತಿನ ಶೋಧನೆಯಾಗುವುದಿಲ್ಲ ಎಂಬ ತರೀಕೆರೆಯವರ ಅಭಿಪ್ರಾಯ ಗಮನಾರ್ಹವಾದುದು. (ವಿವಿಧ ಲೇಖಕರು; ೧೯೯೪; ಪು.೧೫).

ಈ ಕೃತಿಗಳು ಆಕರ್ಷಕತೆಯ ಮುಸುಗಿನಲ್ಲಿ ಸಂಪ್ರದಾಯಗಳನ್ನು ಒಳಗೊಳಗೆ ಸಮರ್ಥಿಸುತ್ತವೆ ಎಂದೇನೂ ಅಲ್ಲ. ಇವು ಆಯಾ ಲೋಕಕ್ಕೆ ಯಾವ ಮೌಲ್ಯ ಚಲಾವಣೆಯಲ್ಲಿರುತ್ತವೆಯೋ ಅದನ್ನು ಗಬಕ್ಕನೆ ಹಿಡಿದುಕೊಳ್ಳುತ್ತದೆ. ಅದು ಸ್ತ್ರೀ ಸ್ವಾತಂತ್ರ್ಯವಾಗಿರಬಹುದು, ಪ್ರತಿಭಟನೆಯಾಗಬಹುದು. ನಮ್ಮ ಸಮಾಜದ ಮೂಲಭೂತ ಗೆರೆಗಳನ್ನು ಪ್ರಶ್ನಿಸದೆ, ಸಂಪ್ರದಾಯಿಕ ವಿವಾಹದ ತಳಪಾಯ ರಚನೆಗಳನ್ನು ಅಲುಗಿಸದೆ ಸಣ್ಣ ಪುಟ್ಟ ಅಲುಗಾಟವನ್ನು ಮಾಡಿ, ಯಥಾ ಸ್ಥಿತಿಯನ್ನುಳಿಸುವ ಜನಪ್ರಿಯ ಕಾದಂಬರಿಗಳ ಉದ್ದೇಶ ಸ್ಪಷ್ಟವಾಗಿವೆ. ಅಂತರ್ ಜಾತಿ ಮದುವೆಗಳು, ಸಾಕಾರಗೊಳ್ಳುತ್ತಿರುವ ಸಮಾಜ, ಬಹುಮುಖೀ ಬದುಕಿನ ವಿಧಾನಗಳು, ಈ ಕೃತಿಗಳಲ್ಲಿ ಇಲ್ಲದಿರುವುದೂ ಸಹಜವಾಗಿದೆ. ಮಧ್ಯಮ ವರ್ಗದ ಬೋರಿಡುವ ಊಟ, ಮದುವೆ, ನೌಕರಿ, ಆಫೀಸುಗಳ ಕಥನಗಳು, ಅಲ್ಲಿನ ಪಡಯಚ್ಚುಗಳಂಥ ಪಾತ್ರಗಳು, ಸಜ್ಜನಮಾವ, ದುಷ್ಟ ಅತ್ತೆ, ವಿಧೇಯ ಆಳು, ಶ್ರೀಮಂತರಾದರೂ ಸುಖಿಯಲ್ಲದ ಶ್ರೀಮಂತರು ಯಾಕೆ ರಾಶಿ ಬೀಳುತ್ತವೆ? ಎನ್ನುವ ಮಾತಿನಲ್ಲಿ (ಅದೇ; ಪು.೧೬) ಜನಪ್ರಿಯ ಸಾಹಿತ್ಯ ಅಕ್ಷರ ಬಲ್ಲ ಮಧ್ಯಮ ವರ್ಗದವರಿಗಾಗಿ ಬಿಡುವಿನ ವೇಳೆಯ ಕಳೆಯಲಿಕ್ಕಾಗಿ ಸೃಷ್ಟಿಯಾಗುತ್ತವೆ ಎಂದು ಕನ್ನಡ ವಿಮರ್ಶೆ ಪರಿಭಾವಿಸಿರುವುದನ್ನು ಕಾಣಬಹುದು.

'ಕನ್ನಡದಲ್ಲಿ 'ಜನಪ್ರಿಯ ಸಾಹಿತ್ಯ ಎಂದರೆ ಮೂಗು ಮುರಿಯುವ ಮಂದಿಯೂ ಇದ್ದಾರೆ. ಜನಪ್ರಿಯವಾದದ್ದು ಗಂಭೀರವಾದದ್ದಲ್ಲ ಎಂದು ಸರಳ ತರ್ಕ ಮತ್ತು ತೀರ್ಮಾನಗಳಿಗೆ ತಲುಪಿದ ಇಂಥವರು ಪೂರ್ಣ ಸತ್ಯವನ್ನು ಮನಗಂಡಿಲ್ಲವೆಂದು ನನ್ನ ಅನಿಸಿಕೆ. ಜನಪ್ರಿಯರಾದ ಅನೇಕ ಸಾಹಿತಿಗಳು ಗಂಭೀರ ಆಸಕ್ತಿಯನ್ನು ಆಹ್ವಾನಿಸುವುದಿಲ್ಲವೆಂಬುದು ನಿಜವಾದರೂ ಜನಪ್ರಿಯ ಸಾಹಿತ್ಯವೆಲ್ಲವೂ ಇದೇ ಮಾದರಿಯಂದು ತೀರ್ಮಾನಿಸಲಾಗದು. ಚದುರಂಗ, ನಿರಂಜನ, ಬಸವರಾಜ ಕಟ್ಟೀಮನಿ, ದು.ನಿಂ.ಬೆಳಗಲಿ ಸತ್ಯಕಾಮ, ಅ.ನ.ಕೃ. ಅವರ ಪ್ರಮುಖ ಕಾದಂಬರಿಗಳು. ಹೀಗೆ ಹೆಸರುಗಳನ್ನು ಪಟ್ಟಿ ಮಾಡುತ್ತಾ ಹೋದಂತೆ 'ಜನಪ್ರಿಯ ಸಾಹಿತ್ಯ'ವೆಂಬ ವಿಭಾಗಕ್ಕೆ ಘನತೆ, ಗೌರವ

ತಂದ ಸೃಜನಶೀಲತೆ ತನಗೆ ತಾನೇ ನೆನಪಾಗುತ್ತದೆ (ಗಂಗೂ ಆರ್.ಮೂಲಿಮನಿ; ೨೦೦೩; ಪು.೮) ಎಂಬ ಬರಗೂರು ರಾಮಚಂದ್ರಪ್ಪರವರ ಮಾತು ಗಂಭೀರ ಸಾಹಿತ್ಯದಲ್ಲಿ ಪರಿಣಿತರಾದವರು. ಜನಪ್ರಿಯ ಸಾಹಿತ್ಯಕ್ಕೆ ಘನತೆ, ಗೌರವ ತಂದುಕೊಟ್ಟವರೆಂಬ ಮಾತು ಆಸಕ್ತಿದಾಯಕವೆನಿಸುತ್ತದೆ.

'ಜನಪ್ರಿಯ ಸಾಹಿತ್ಯವೆಲ್ಲವೂ' 'ಅಗ್ಗದ ಸಾಹಿತ್ಯ'ವಲ್ಲ, ಅಗ್ಗದ ಸಾಹಿತ್ಯ ಜನಪ್ರಿಯವಾಗಿದ್ದರೂ ಅದನ್ನು ಜನಪ್ರಿಯ ಸಾಹಿತ್ಯವೆಂಬ ವಿಭಾಗಕ್ಕೆ ಸೇರಿಸಬೇಕಿಲ್ಲ. ಅಗ್ಗದ ಸಾಹಿತ್ಯ ಮತ್ತು ಜನಪ್ರಿಯ ಸಾಹಿತ್ಯವನ್ನು ಪ್ರತ್ಯೇಕವಾಗಿ ನೋಡಬೇಕು, ಜನಪ್ರಿಯ ಸಾಹಿತ್ಯವೆಲ್ಲವೂ ಅಗ್ಗದ ಸಾಹಿತ್ಯವಲ್ಲ. ಅಗ್ಗದ ಸಾಹಿತ್ಯವೊಂದೇ ಜನಪ್ರಿಯ ಸಾಹಿತ್ಯವಲ್ಲ. ರಚನಾ ಸ್ವರೂಪದಲ್ಲಿ ಸಂವಹನ ಶೀಲ ಸರಳತೆಯನ್ನು ಪಡೆದು ಗಂಭೀರ ಸಂಗತಿಗಳನ್ನು ಒಳಗೊಳ್ಳುವ ಪ್ರಯತ್ನಗಳನ್ನು ಅನೇಕ ಜನಪ್ರಿಯ ಸಾಹಿತಿಗಳು ಮಾಡಿದ್ದಾರೆ. ಇದೊಂದು ವಿಶಿಷ್ಟ ಅಭಿವ್ಯಕ್ತಿ ವಿಧಾನ. ಅರ್ಥವಾಗುವ ವಿವರಗಳಲ್ಲಿ ಆಲೋಚನಾ ಕ್ರಮವನ್ನು ಕಟ್ಟಿಕೊಡುವ ಪ್ರಯತ್ನಗಳು ಅಭಿರುಚಿ ನಿರ್ಮಾಣದಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ. ಜೊತೆಗೆ ಓದುಗ ಸಮೂಹವನ್ನು ಹೆಚ್ಚಿಸುತ್ತವೆ. ಅಭಿರುಚಿ ನಿರ್ಮಾಣ ಮತ್ತು ಓದುಗ ಸಮುದಾಯದ ವಿಸ್ತರಣೆಗಳು ನನ್ನ ದೃಷ್ಟಿಯಲ್ಲಿ ಸಾಂಸ್ಕೃತಿಕ ಮಹತ್ವದ ಕ್ರಿಯೆಗಳು. ಈ ದಿಕ್ಕಿನಲ್ಲಿ ನಮ್ಮ ಚರ್ಚೆಗಳು ಗಂಭೀರವಾಗಿ ನಡೆದಷ್ಟು ಸಾಹಿತ್ಯ ಕ್ಷೇತ್ರಕ್ಕೆ ಆರೋಗ್ಯ ಭಾಗ್ಯ ಲಭ್ಯವಾಗುತ್ತದೆ ಎಂದು ಹೇಳುವ ಬರಗೂರು ರಾಮಚಂದ್ರಪ್ಪನವರ ಅಭಿಪ್ರಾಯ ಗಮನಾರ್ಹವಾಗಿದೆ (ಅದೇ: ಪು.೮).

ಜನಪ್ರಿಯ ಸಾಹಿತ್ಯವನ್ನು ಕುರಿತು ಮೂರು ಬಗೆಯಲ್ಲಿ ಚರ್ಚೆ ನಡೆದಿವೆ ಎಂದು ಕೆ.ವಿ. ನಾರಾಯಣರವರು ಗುರುತಿಸದ್ದಾರೆ. ಮೊದಲನೆಯದು: ನಿರಾಕರಣೆಯ ವಿಧಾನ. ಸಾಹಿತ್ಯ ವಿಮರ್ಶೆಯ ವ್ಯಾಪ್ತಿಯಿಂದ ಜನಪ್ರಿಯವೆಂದು ಹೆಸರಿಸಲಾದ ಕೃತಿಗಳನ್ನು ಹೊರಗಿಡುವ ವಿಧಾನವಿದು. ಅಗ್ಗದ ಮನರಂಜನೆ ನೀಡುವ, ಕೀಳು ಅಭಿರುಚಿಯನ್ನುಂಟು ಮಾಡುವ ಭಾವೋದ್ರೇಕತೆ, ರೋಚಕತೆಯನ್ನು ಓದುಗನಿಗೆ ಉಂಟು ಮಾಡುವ, ಕೃತಿಗಳೆಂದೂ ಕೆಲವು ಕೃತಿಗಳನ್ನು ಜನಪ್ರಿಯತೆಯ ವ್ಯಾಪ್ತಿಗೆ ತಳ್ಳಲಾಗುತ್ತದೆ. ಈ ಎಲ್ಲಾ ಲಕ್ಷಣಗಳು ಓದಿನ ಪರಿಣಾಮವನ್ನು ಆಧರಿಸಿದೆ. ಹಾಗೆ ನೋಡಿದರೆ ಈ ಬಗೆಯ ಸಾಹಿತ್ಯ ವಿಮರ್ಶೆ ಕೃತಿಯು ಓದುಗರಲ್ಲಿ ಯಾವ ಪರಿಣಾಮವನ್ನುಂಟು ಮಾಡುವುದೆಂಬ ಅಂಶ ಪರಿಗಣನೆಗೆ ಬರುವುದಿಲ್ಲ. ಆದರೆ ಜನಪ್ರಿಯ ಸಾಹಿತ್ಯ ಕೃತಿಗಳ ಲಕ್ಷಣವನ್ನು ಹೇಳುವಾಗ ಮಾತ್ರ ಪರಿಣಾಮವನ್ನು ಆಧರಿಸಲಾಗಿದೆ. ಇದೊಂದು ವಿಪರ್ಯಾಸ. ಅಥವಾ ಮೇಲೆ ಹೇಳಿದ ಪರಿಣಾಮಗಳನ್ನುಂಟು ಮಾಡುವ ಕೃತಿ ಪ್ರಥಮ ಹಂತದಲ್ಲೇ ತ್ಯಾಜ್ಯವೆಂಬ ನಿಲುವು ಸಾಧ್ಯವಾಗಿ ವಿಮರ್ಶಕನ ಕುತೂಹಲ ಔಪಚಾರಿಕವಾಗುತ್ತವೆ.

ಎರಡನೆಯದು 'ವಿವರಣೆಯ ವಿಧಾನ' ಇದರಲ್ಲಿ ಗ್ರಾಹಕ, ಸಂಸ್ಕೃತಿಯ ಭಾಗವೆಂದು ಸಾಹಿತ್ಯ ಕೃತಿಯನ್ನು ಪರಿಗಣಿಸುವ ವಿಧಾನವಿದು. ಒಂದು ಸಂಸ್ಕೃತಿ ಯಲ್ಲಿ ಸಾಹಿತ್ಯ ಕೃತಿಗಳು ಯಾಕೆ ಹುಟ್ಟುತ್ತವೆ? ಹೇಗೆ ಜನರನ್ನು ತಲುಪುತ್ತವೆ? ಓದುಗರ ಮೇಲೆ ಯಾವ ಪರಿಣಾಮ ಉಂಟು ಮಾಡುತ್ತದೆ? ಎಂದು ಮಾರುಕಟ್ಟೆಯ ಪರಿಭಾಷೆಯಲ್ಲಿ ಈ ಬಗೆಯ ವ್ಯಾಖ್ಯಾನವಿರುತ್ತದೆ.

ಮೂರನೆಯದು ವಿಶ್ಲೇಷಣೆಯ ವಿಧಾನ, ಇಲ್ಲಿ ಜನಪ್ರಿಯ ಸಾಹಿತ್ಯವನ್ನು ಗುರುತಿಸುವ ಗೋಜಿಗೆ ಹೋಗದೆ ಎಲ್ಲಾ ಘಟನೆಗಳನ್ನು ಒಂದು ಸಾಂಸ್ಕೃತಿಕ ಸಂದರ್ಭದ ಸಂಭವಗಳೆಂದು ಈ ವಿಧಾನ ಗುರುತಿಸುತ್ತದೆ. ಎಲ್ಲಾ ಸಂಭವಗಳನ್ನು ಸಾಂಸ್ಕೃತಿಕ ವಿನ್ಯಾಸಗಳ ಮೂಲಕ ಅರಿತುಕೊಳ್ಳಲು ಸಾಧ್ಯವಿದೆ. ಆದ್ದರಿಂದ ಇದು ಜನಪ್ರಿಯ ಸಾಹಿತ್ಯ ಕೃತಿ, ಹಾಗಾಗಿ ಇದು ನಿರಾಕರಣೆಗೆ ತಕ್ಕುದೆಂದು ತಿಳಿಯುವುದನ್ನು ಈ ಬಗೆಯ ಚರ್ಚೆ ಒಪ್ಪುವುದಿಲ್ಲ. ಯಾವ ಉದ್ದೇಶಕ್ಕಾಗಿ ಒಂದು ಸಾಹಿತ್ಯ ಕೃತಿ ರೂಪುಗೊಂಡಿದೆ ಎಂಬುದನ್ನು ಗುರುತಿಸುವುದು ಮುಖ್ಯವೇ ಹೊರತು ಅದು ಜನಪ್ರಿಯವೆ ಅಲ್ಲವೆ ಎಂಬುದು ಮುಖ್ಯವಲ್ಲ (ಅದೇ; ಪು.೨೪) ಎನ್ನುತ್ತಾರೆ.

ಶೇಷ ನಾರಾಯಣರವರು ತಮ್ಮ 'ಜನಪ್ರಿಯ ಸಾಹಿತ್ಯದ ಒಳಗೆ' ಎಂಬ ಲೇಖನದಲ್ಲಿ 'ಜನಪ್ರಿಯ ಸಾಹಿತ್ಯ' ಎಂಬ ಪ್ರಕಾರ ಇದೆ ಮುಂದೆಯೂ ಗಟ್ಟಿಯಾಗಿ ಇರುತ್ತವೆ ಎಂದು ಹೇಳುತ್ತಾ ಆಧುನಿಕ ಸಂದರ್ಭದಲ್ಲಿ ಜನತೆ ಸುಲಭದಲ್ಲಿ ಓದುವ ಅರ್ಥ ಮಾಡಿಕೊಳ್ಳುವ ಸಾಹಿತ್ಯ 'ಜನಪ್ರಿಯ ಸಾಹಿತ್ಯ' ಎಂದಾಯಿತು. ಕಾಳಿನೊಂದಿಗೆ ಜೊಳ್ಳು ಸೇರಿದ್ದರಿಂದ ಜನಪ್ರಿಯ ಸಾಹಿತ್ಯ ಎಂದರೆ 'ಅಗ್ಗದ ಸಾಹಿತ್ಯ' ಎಂದು ವಿಮರ್ಶಕರ ದೃಷ್ಟಿಯಲ್ಲಿ ಟೀಕೆಗೆ ಗುರಿಯಾಯಿತು ಎಂದಿದ್ದಾರೆ. ಜನಪ್ರಿಯ ಸಾಹಿತ್ಯವೆಂದರೆ ಲಘುಬರವಣಿಗೆಯಲ್ಲ. ನಮ್ಮ ಜನ ಓದುವಂತೆ ಹೆಚ್ಚು ಸಾಕ್ಷರರನ್ನಾಗಿ ಮಾಡಿರುವುದೇ ಜನಪ್ರಿಯ ಸಾಹಿತ್ಯ. ನಾಡಿನ ಉದ್ದಗಲಕ್ಕೂ ಲಕ್ಷಾಂತರ ಮಂದಿ ಸಾಹಿತ್ಯವನ್ನು ಓದುತ್ತಾರೆ. ಜನರಿಗೆ ತಿಳುವಳಿಕೆ ಬರುವುದು ಈ ಜನಪ್ರಿಯ ಲೇಖರಿಂದ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಅವರ ಪ್ರಕಾರ ಸರಳವಾಗಿ ಹೇಳುವುದೂ ಒಂದು ಕಲೆ. ನೈಪುಣ್ಯತೆ, ಸೊಗಸುಗಾರಿಕೆ ಅದಕ್ಕಿರಬೇಕು ಎನ್ನುತ್ತಾರೆ (ವಿವಿಧ ಲೇಖಕರು; ೧೯೯೪; ಪು.೪೩-೪೫).

ಕಮಲಾ ಹಂಪನ ಅವರು 'ಕನ್ನಡ ಮಹಿಳಾ ಸಾಹಿತ್ಯ' ಎಂಬ ಲೇಖನದಲ್ಲಿ 'ಕನ್ನಡದಲ್ಲಿ ಕೆಲವರಾದರೂ ಜನಪ್ರಿಯ ಲೇಖಕಿಯರಿದ್ದಾರೆ. ಆದರೆ ಜನಪ್ರಿಯತೆಯೊಂದೇ ಸಾಹಿತ್ಯಕ್ಕೆ ಮೌಲಿಕ ಕೊಡುಗೆಯ ಮಾನದಂಡವಲ್ಲ. ಕಾಲದ ಅಗ್ನಿಪರೀಕ್ಷೆಯನ್ನು ಗೆದ್ದು ನಿಲ್ಲುವ ಸಾರಸ್ವತವನ್ನು ಸೃಷ್ಟಿಸುವತ್ತ ದೃಷ್ಟಿ ಕೇಂದ್ರೀಕರಿಸಬೇಕು. ಮಹಿಳೆಯರಿಂದ ರಚಿತವಾಗುತ್ತಿರುವ ಈ ಕಥೆ ಕಾದಂಬರಿಗಳಲ್ಲಿ ಸರಳ ಸಾಮಾಜಿಕ ಚಿತ್ರಗಳನ್ನು ಸಪ್ಪೆಯಾದ ರೀತಿಯಲ್ಲಿ, ಕೃತಕವಾದ ಭಾಷೆಯಲ್ಲಿ ನಿರೂಪಿಸಿರುವುದು

ದೊಡ್ಡದಾಗಿ ಎದ್ದು ಕಾಣುವ ದೋಷ. ಸರಳತೆ ಗುಣವೂ ಹೌದು, ಆದರೆ ತೀರಾ ಸರಳವಾದರೆ ತೆಳುವಾದರೆ ಹಿಂಜಿ ಜಾಳು ಜಾಳಾದರೆ ಆಗ ಅದು ದುರ್ಬಲವಾಗುತ್ತದೆ. (ವಿವಿಧ ಲೇಖಕರು; ೧೯೯೩; ಪು. ೨೦೩) ಎಂದು ಜನಪ್ರಿಯ ಲೇಖಕಿಯರ ಬಗ್ಗೆ ಪ್ರಸ್ತಾಪಿಸಿದ್ದಾರೆ.

ಚಂದ್ರಶೇಖರ ಪಾಟೀಲ ಅವರು 'ಜನಪ್ರಿಯ ಸಾಹಿತ್ಯ' ಇದುವರೆಗೆ ಒಂದು ವರ್ಗದ ವಿಮರ್ಶಕರು ನೋಡಿದ್ದಕ್ಕಿಂತ ಭಿನ್ನವಾಗಿ ಪರಿಭಾವಿಸಬೇಕಾದ ಅಗತ್ಯವಿದೆಯೆಂದು ಹೇಳುತ್ತಾರೆ (ಜಾಕಬ್ ಲೋಬೋ ಸಿ.ಎಚ್ (ಸಂ): ೧೯೯೩; ಪು. ೭).

ತೆಲುಗು ಕಾದಂಬರಿಗಳ ಅನುವಾದಕ ಅಜ್ಜಂಪುರಿ ಜಿ.ಸೂರಿ ಯವರು 'ಜನಪ್ರಿಯ ಸಾಹಿತ್ಯವನ್ನು' ಮೈಲಿಗೆ ತರಹ ಕಾಣುವುದಾಗಿ ಪ್ರಸ್ತಾಪಿಸುತ್ತಾ ಜನರಿಗೆ ಪ್ರಿಯವಾದ ಸಾಹಿತ್ಯ ಜನಪ್ರಿಯ ಸಾಹಿತ್ಯವಲ್ಲವೇ ಎಂಬ ಪ್ರಶ್ನೆಯನ್ನು ಹಾಕಿಕೊಳ್ಳುತ್ತಾರೆ. ಕಾದಂಬರಿಯೊಂದೆ ಅಲ್ಲದೆ ಕಥೆ ನಾಟಕಗಳಲ್ಲಿ ಈ ಅಂಶ ಗುರುತಿಸಬಹುದು. ಜನಪ್ರಿಯ ಸಾಹಿತ್ಯದ ಆಧಾರವಿಲ್ಲದೆ ಗಂಭೀರ ಸಾಹಿತ್ಯ ಸೃಷ್ಟಿಯಾಗಲಾರದು ಎಂಬುದು ಅವರ ಅಭಿಪ್ರಾಯವಾಗಿದೆ. (ವಿವಿಧ ಲೇಖಕರು : ೧೯೯೪ : ಪುಟ ೬೦).

'ಜನಪ್ರಿಯ ಸಾಹಿತ್ಯ' ವೆಂಬ ಪರಿಕಲ್ಪನೆ ನವ್ಯ ಸಾಹಿತ್ಯ ಉಗಮದೊಡನೆ ಬಂದ ನವ್ಯ ಮೀಮಾಂಸೆಯ ಜೊತೆಗೆ ಕನ್ನಡವನ್ನು ಪ್ರವೇಶಿಸಿದೆ. ಸಾಹಿತ್ಯ ವಿಮರ್ಶೆಗೆ ಬಂದರೆ ನವ್ಯದ ಈ ಆತಂಕ ವ್ಯಕ್ತವಾಗುವುದು ಅದು ಕೃತಿಗಳನ್ನು ಶ್ರೇಣೀಕರಿಸುವುದರಲ್ಲಿ ಎಲ್ಲವನ್ನು ಒಪ್ಪದೆ ಉತ್ತಮವಾದುದನ್ನು ಮಾತ್ರ ಸಾಧಿಸಲು, ಉತ್ತಮವಾದುದನ್ನು ಮಾತ್ರ ಚರ್ಚಿಸಲು ಸಿದ್ದವಾಗುತ್ತವೆ. ಅದನ್ನು ಬಿಟ್ಟು ಉಳಿದುದೆಲ್ಲವನ್ನು ಅದು ನಿರಾಕರಿಸುತ್ತವೆ. ಸಾಹಿತ್ಯದಲ್ಲು ನಿರಾಕರಣೆಯ ನೆಲೆಗಳು ವ್ಯಕ್ತವಾದ ಹಲವು ಬಗೆಗಳಲ್ಲಿ ಜನಪ್ರಿಯತೆಯ ನೆಲೆಯು ಒಂದೇ ತಾನೆ. ಯಾವಾಗ ಕೃತಿಯೊಂದನ್ನು ಜನಪ್ರಿಯವೆಂದು ಸೂಚಿಸಲಾಗುವುದೋ ಆಗಲೇ ಅದು ಉತ್ತಮವಲ್ಲವೆಂದು ಪರೋಕ್ಷವಾಗಿ ಹೇಳಿದಂತೆಯೂ ಆಗಿ ಬಿಡುತ್ತವೆ ಎಂದು ಕೆ.ವಿ.ನಾರಯಣರವರು ಅಭಿಪ್ರಾಯ ಪಡುತ್ತಾರೆ. (ವಿವಿಧ ಲೇಖಕರು ೧೯೯೪-ಪು-೫೫) 'ಉತ್ತಮವಲ್ಲದ ಶ್ರೇಷ್ಠವಲ್ಲದ ಕೃತಿಗಳನ್ನು ಜನಪ್ರಿಯವೆಂದು ಪರಿಗಣಿಸೋಣ. ಆದರೆ ಉತ್ತಮವಾದವುಗಳೂ ಕಾಲದೇಶಗಳ ಚೌಕಟ್ಟಿನಲ್ಲಿ ತಮ್ಮ ಮಹತ್ವವನ್ನು ಸಾಧಿಸಿ ತೋರಿಸುತ್ತವೆಂದು ಹೇಳುವುದು ಹೇಗೆ? ನವ್ಯ ಸಾಹಿತ್ಯ ಮೀಮಾಂಸೆಯೇ ಮಹತ್ವದ ಕೃತಿಗಳೆಂದು ಎತ್ತಿ ಹಿಡಿದ ಎಷ್ಟೋ ಕೃತಿಗಳು ಇಂದಿನ ಓದುಗರ ಮೊದಲ ಓದನ್ನೂ ಪಡೆದುಕೊಳ್ಳುತ್ತಿಲ್ಲ. ಹೆಚ್ಚು ಕಾಲ ಬಾಳುವ, ತಾಳುವ ಹೆಚ್ಚು ಚರ್ಚೆಗೆ ಒಳಗಾಗುವ ಕೃತಿಯನ್ನು ಉತ್ತಮವೆಂದು ಕರೆಯುವುದು ಈಗ ಸಾಧ್ಯವಾಗುತ್ತಿಲ್ಲ. ನವ್ಯ ಸಾಹಿತ್ಯದ ಸಂದರ್ಭದಲ್ಲಿ ಹೀಗೆ ಕೃತಿಯೊಡನೆ ಅದರ ಚರ್ಚೆಯೂ ಮೈ ತಳೆಯುತ್ತಾ ಬಂದುದು ಇವೇ ಕಾರಣವಾಗಿಯೇ ಇದ್ದಿತು. ಕೃತಿಯನ್ನು ಓದುವುದು ಆ ಕೃತಿಯನ್ನು ಕುರಿತ ಚರ್ಚೆಯನ್ನು ಓದದೆ

ಸಾಧ್ಯವಾಗದ ಪರಿಸ್ಥಿತಿ ಉಂಟಾಯಿತು. ಯಾವ ಕೃತಿಗಳಿಗೆ ಇಂಥ ಚರ್ಚೆಯ ಪರಿವೇಷ ಬೆಳೆಯಲಿಲ್ಲವೋ ಅದು ಉತ್ತಮವಲ್ಲ. ಕೇವಲ ಜನಪ್ರಿಯತೆಯ ಕಾರಣದಿಂದ ಯಾವ ಕೃತಿಕಾರರಿಗೆ ಚರ್ಚೆಯ ಸಹಬಾಳ್ವೆ ಇರುವುದಿಲ್ಲವೋ ಆ ಕೃತಿಕಾರರು ಜನಪ್ರಿಯತೆಯ ವಲಯಕ್ಕೆ ಸೇರಿ ಬಿಡುತ್ತಾರೆ. ಈ ತರ್ಕವನ್ನು ಕಾಲದ ಗತಿ ಒಪ್ಪಿಲ್ಲ. ಸಂಸ್ಕೃತಿ ತನ್ನದೇ ಆದ ರೀತಿಯಲ್ಲಿ ಆಯ್ಕೆ ಮಾಡುತ್ತಾ ಹೋಗುತ್ತದೆ. ತಾಳುವ ಕೃತಿಗಳನ್ನು ಚರ್ಚೆಯ ಮೂಲಕ ನಿರ್ಧರಿಸಲು ಸಾಧ್ಯವಿಲ್ಲ. ಚರ್ಚೆ ಇಲ್ಲದಿದ್ದಲ್ಲಿ ಕೃತಿ ತಾಳವೆಂದು ವಾದಿಸಲು ಬರುವುದಿಲ್ಲ ಎನ್ನುವ ಕೆ.ವಿ. ನಾರಯಣರ ಅಭಿಪ್ರಾಯ ಪ್ರಮುಖವಾದುದು (ಅದೇ; ಪು.೨) ಇದಕ್ಕೆ ಕಾರಣ 'ಇಂದು ಜನರು ಹೆಚ್ಚು ಕೃತಿಗಳನ್ನು ಕಡಿಮೆ ಅವಧಿಯಲ್ಲಿ ಓದಿ ಮುಗಿಸಬೇಕಾಗಿ ಬಂದಿದೆ. ಒತ್ತಡವನ್ನು ನಿವಾರಿಸಿಕೊಳ್ಳಲು ಸಂಸ್ಕೃತಿ ಒಂದು ತಂತ್ರವನ್ನು ರೂಪಿಸಿಕೊಡುತ್ತದೆ. ಒಟ್ಟು ಕೃತಿಗಳ ಮೊತ್ತದಲ್ಲಿ ಸಾಕಷ್ಟನ್ನು ಓದುಗ ಸಮುದಾಯದ ನೆನಪಿನಿಂದ ಹೊರಗಿಡುತ್ತದೆ. ಅವುಗಳನ್ನು ಓದುವ ಹೊಣೆಯನ್ನು ಓದುಗರಿಗೆ ನೀಡುವುದಿಲ್ಲ. ಮನುಷ್ಯನ ಸಾಧ್ಯತೆಗಿರುವ ಮಿತಿಯನ್ನು ನಾವು ಹೀಗೆ ಒಪ್ಪಿಕೊಳ್ಳಲೇಬೇಕು. ಹೀಗೆ 'ನಿಲ್ಲುವ' ಕೃತಿಗಳನ್ನು ಕ್ರಿಯೇಟಿವ್ ಮೈನಾರಿಟಿ ಸೃಷ್ಟಿಸುತ್ತವೆ ಎಂದು ತಿಳಿಯಲು ಯಾವುದೇ ಆಧಾರಗಳಿಲ್ಲ. ಸಂಸ್ಕೃತಿಯೇ ಈ ಆಯ್ಕೆಯನ್ನು ಮಾಡುತ್ತದೆ. ಉಳಿದ ನೂರಾರು ಸಂಖ್ಯೆಯ ಕೃತಿಗಳು ರೂಪುಗೊಳ್ಳಲೇ ಬೇಕು. ನಿರಾಕರಣೆಗೊಳ್ಳಲೇಬೇಕು (ಅದೇ ಪುಟ ೫) ಎನ್ನುತ್ತಾರೆ. ಈ ನೂರಾರು ಕೃತಿಗಳು ಇಂದು ಬಂದು ನಾಳೆ ಹೋಗುವಂಥವು ಎಂದು ಅನ್ನಿಸಿದರೂ ಅವು ಸಮಾಜದ ಹಲವು ವಿನ್ಯಾಸಗಳಲ್ಲಿ ಗುಪ್ತವಾಗಿ ತಮ್ಮಲ್ಲಿ ಸಂಕೇತಿಸಿಕೊಂಡಿರುತ್ತವೆ ಎಂಬುದನ್ನು ತಿಳಿಸುತ್ತಾರೆ. ಆ ಮೂಲಕ ಜನಪ್ರಿಯ ಸಾಹಿತ್ಯದ ಅಧ್ಯಯನದ ಮಹತ್ವದ ಬಗ್ಗೆ ಬೆಳಕು ಚೆಲ್ಲುತ್ತಾರೆ. ಜನಪ್ರಿಯ ಸಾಹಿತ್ಯ ಈಗ ಒಂದು ಮೈಲಿಗೆಯ ಶಬ್ದವಾಗಿ ಬಿಟ್ಟಿದೆ. ಜನಪ್ರಿಯ ಸಾಹಿತ್ಯವೆಂದರೆ ಒಂದು ಬಗೆಯ ತಿರಸ್ಕಾರ. ಇದು ಬೇರೆ ವಲಯಗಳಲ್ಲಿ ಜನಪ್ರಿಯವಾದುದರ ಬಗೆಗೆ ಈ ತರಹದ ತಿರಸ್ಕಾರವಿಲ್ಲ ಎಂಬುದು ಪ್ರಮುಖವಾದ ವಿಷಯ.

ವಿಮರ್ಶೆಯ ಮಾನದಂಡಗಳ ಮೂಲಕ ಲೇಖಕರೂ 'ಜನಪ್ರಿಯ ಸಾಹಿತ್ಯ' ಎಂಬುದನ್ನು ಪ್ರಶ್ನಿಸುವುದು, ಒಪ್ಪಿಕೊಳ್ಳುವುದು. ತಮ್ಮ ಬರಹಗಳಲ್ಲಿ ಸಮರ್ಥಿಸಿಕೊಳ್ಳುವುದನ್ನು ಗುರುತಿಸಬಹುದು.

ಕನ್ನಡ ವಿಮರ್ಶೆಯು ಪರಿಕಲ್ಪನೆಯಾದ ಜನಪ್ರಿಯ ಸಾಹಿತ್ಯದ ಪರಿಕಲ್ಪನೆಯನ್ನು ವಿವಿಧ ನೆಲೆಗಳಲ್ಲಿ ಪರಿಭಾವಿಸಿರುವುದನ್ನು ಕಾಣಬಹುದು. ಕೆಲವು ಚರ್ಚೆಗಳು ಈ ಪರಿಕಲ್ಪನೆಯನ್ನು ಸಮರ್ಥಿಸುವ ರೀತಿಯಲ್ಲಿ ಸಾಗಿದರೆ ಮತ್ತೆ ಕೆಲವು ಚರ್ಚೆಗಳು ಪ್ರಶ್ನಿಸುತ್ತವೆ. ಮತ್ತೆ ಕೆಲವು ಚರ್ಚೆಗಳು ಇದು ಕೇವಲ ವಿಮರ್ಶಕರ ಪರಿಕಲ್ಪನೆಗಷ್ಟೆ ಸೀಮಿತವಾಗುತ್ತವೆ ಎನ್ನುತ್ತವೆ. ಒಟ್ಟಾರೆ 'ಜನಪ್ರಿಯ ಸಾಹಿತ್ಯ' ಎಂಬುದೇ ದ್ವಂದ್ವಗಳಿಂದ, ಗೊಂದಲಗಳಿಂದ ಕೂಡಿದ್ದು ಪರ, ವಿರೋಧಿ ನಿಲುವುಗಳು, ವ್ಯಕ್ತವಾಗಿ ತೊಡಕುಗಳಿಂದ ಹೊರ ಬರಲು ಸಾಧ್ಯವಾಗಿಲ್ಲವೆಂದೆ ಹೇಳಬಹುದು. ವಿಮರ್ಶೆಯು ಜನಪ್ರಿಯ

ಸಾಹಿತ್ಯದ ಪರಿಕಲ್ಪನೆಯನ್ನು ಮುಖ್ಯವಾಗಿ ಕಾದಂಬರಿ ಪ್ರಕಾರಕ್ಕೆ ಹೆಚ್ಚಾಗಿ ಕೇಂದ್ರೀಕರಿಸಿ ಕೊಂಡಿರುವುದನ್ನು ಕಾಣಬಹುದು. ಆದರೆ ಇತರ ಸಾಹಿತ್ಯ ಪ್ರಕಾರಗಳಿಗೂ ಈ ಮಾತು ಅನ್ವಯವಾಗುವ ಮೂಲಕ ಅವುಗಳನ್ನು 'ಜನಪ್ರಿಯ ಸಾಹಿತ್ಯ'ದ ಒಳಗೆ ಪರಿಗಣಿಸಬಹುದಾದ ಸಾಧ್ಯತೆಗಳಿವೆ. ಜನಪ್ರಿಯ ಸಾಹಿತ್ಯ ಕಲ್ಪನೆ ಬೆಳೆದು ಬಂದಿರುವುದೇ ವಿಮರ್ಶೆಯ ಮೂಲಕ ನವ್ಯೋತ್ತರ ಸಾಹಿತ್ಯದ ನಂತರದ ಕಾಲಘಟ್ಟದಲ್ಲಿ ಸಾಹಿತ್ಯ ಮತ್ತು ಜನಪ್ರಿಯತೆಯ ನಡುವೆ ಅಂತಃ ಸಂಬಂಧವಿದೆ. ಇದು ಗಂಭೀರ ಸಾಹಿತ್ಯಕ್ಕೂ ಅನ್ವಯವಾಗುತ್ತದೆ. ಕೇವಲ ಜನಪ್ರಿಯತೆಯೊಂದೆ ಜನಪ್ರಿಯ ಸಾಹಿತ್ಯದ ಮಾನದಂಡವಾಗಲಾರದು. ಹಾಗೆಯೇ ಸರಳತೆಯು ಜನಪ್ರಿಯ ಸಾಹಿತ್ಯದ ಲಕ್ಷಣವಾಗಬೇಕಿಲ್ಲ. ಜನಪ್ರಿಯತೆಯ ಅಂಶಗಳು ಗಂಭೀರ ಸಾಹಿತ್ಯದಲ್ಲಿಯೂ ಕಂಡು ಬರುತ್ತವೆ. ಅವುಗಳಿಂದಾಗಿ ಜನಪ್ರಿಯತೆ ಗಳಿಸುವುದು ಇದೆ. ಜನಪ್ರಿಯ ಸಾಹಿತ್ಯವೆಂಬುದು ಅಗ್ಗದ ಸಾಹಿತ್ಯವಲ್ಲ. ಜನಪ್ರಿಯತೆಯ ಕಾರಣಕ್ಕಾಗಿ ಅದು ಕಳಪೆ ಗುಣಮಟ್ಟದ ದ್ವಿತೀಯ ದರ್ಜೆಯ ಸಾಹಿತ್ಯವೆಂದು ಪರಿಗಣಿಸಬೇಕಾಗಿಲ್ಲ. ಜನಪ್ರಿಯತೆಯು ಒಬ್ಬ ಕವಿಯ, ಒಂದು ಕೃತಿಯ ಒಂದು ಪ್ರಕಾರದ ಸ್ಥಿರವಾದ ಲಕ್ಷಣವೂ ಅಲ್ಲ ಎಂಬುದು ಚರ್ಚೆಗಳಿಂದ ಸ್ಪಷ್ಟವಾಗುತ್ತದೆ. ಈ ಚರ್ಚೆಗಳಿಂದಾಗಿ ಜನಪ್ರಿಯ ಸಾಹಿತ್ಯ ಎಂಬ ಪರಿಕಲ್ಪನೆಯ ಮೂಲಕ ಸಾಹಿತ್ಯ ಮತ್ತು ಜನಪ್ರಿಯತೆ, ಸಾಹಿತ್ಯ ಮತ್ತು ಜನಪ್ರಿಯತೆಯ ಅಂತಃಸಂಬಂಧಗಳು, ಸಾಹಿತ್ಯದಲ್ಲಿ ಜನಪ್ರಿಯತೆಯ ಅಂಶಗಳು. ಇವುಗಳ ನಡುವಿನ ಸಂಬಂಧಾಂತರಗಳು ಸ್ಪಷ್ಟವಾಗುತ್ತವೆ. 'ಜನಪ್ರಿಯ ಮತ್ತು ಗಂಭೀರ' ಎಂಬ ಕಲ್ಪನೆಗಳಲ್ಲೆ ದ್ವಂದ್ವ ಗೊಂದಲಗಳಿವೆ. ಅದರಿಂದಾಗಿ ಒಂದು ಕಾಲಕ್ಕೆ ಜನಪ್ರಿಯವೆಂದು ಅವಗಣನೆಗೊಳಗಾದುದು ಮುಂದಿನ ದಿನಗಳಲ್ಲಿ ಗಂಭೀರ ಚಿಂತನೆಯಲ್ಲಿ ಪರಿಗಣಿತವಾಗಬಹುದು. ಅಪಾರ ಸಂಖ್ಯೆಯ ಓದುಗರು ಮೆಚ್ಚುವ ಜನಪ್ರಿಯ ಸಾಹಿತ್ಯದಲ್ಲಿಯೂ ಗಂಭೀರವಾದ ವಿಷಯಗಳನ್ನು ಕಾಣಬಹುದು. ಗಂಭೀರ ಶಿಷ್ಟವೆಂದು ಪರಿಗಣಿಸಿದ ಸಾಹಿತ್ಯದಲ್ಲಿಯು ಜನಪ್ರಿಯತೆಯ ಅಂಶಗಳು ಬರುತ್ತವೆ. ಮತ್ತೆ ಕೆಲವು ಕೃತಿಗಳು ಯಾವುದೇ ರೀತಿಯ ಪಂಥ ಪ್ರಕಾರಗಳನ್ನು ಒಳಗೊಳ್ಳದೆ ಜನಪ್ರಿಯತೆ ಗಳಿಸಿವೆ. ಸಾಹಿತ್ಯದಲ್ಲಿ ಜನಪ್ರಿಯತೆಯು ಸಾಮಾನ್ಯವಾದುದು. ಹಾಗೆಯೇ ಸಾಹಿತ್ಯವು ಜನಪ್ರಿಯವಾಗುವುದು ಸಹಜವೇ. ಆದರೆ ಜನಪ್ರಿಯ ಸಾಹಿತ್ಯವನ್ನು ವಿಮರ್ಶೆ ಪರಿಭಾವಿಸುವ ನೆಲೆಯಲ್ಲಿ ಸಾಹಿತ್ಯದ ನೇತ್ಯಾತ್ಮಕ ಅಂಶವಾಗಿ ಪರಿಗಣಿಸಬೇಕಾಗಿಲ್ಲ. ಜನಪ್ರಿಯತೆಯನ್ನು ಸಾಹಿತ್ಯದ ಗುಣಾತ್ಮಕ ಅಂಶವಾಗಿ ಪರಿಗಣಿಸಬಹುದು. ಒಟ್ಟಾರೆ ಜನಪ್ರಿಯ ಸಾಹಿತ್ಯದ ಪರಿಕಲ್ಪನೆಯೇ ದ್ವಂದ್ವ ಗೊಂದಲಗಳಿಂದ ಕೂಡಿದ್ದು ಇದಕ್ಕೆ ಹೊರತಾದ ನೆಲೆಯಲ್ಲಿ ಚರ್ಚಿಸಬೇಕಾಗುತ್ತದೆ.

ಈ ರೀತಿಯಲ್ಲಿ ಜನಪ್ರಿಯ ಸಾಹಿತ್ಯ ಪರಿಕಲ್ಪನೆಯಲ್ಲಿ ದ್ವಂದ್ವಗಳು, ಪರ, ವಿರೋಧ, ನಿಲುವುಗಳು, ತೊಡಕುಗಳು ಗೋಚರವಾಗಿದೆ.

# ಅಧ್ಯಾಯ ೪

## ಬಿ.ಆರ್. ಲಕ್ಷ್ಮಣರಾವ್ ಅವರ ಕಾವ್ಯ ಮತ್ತು ಜನಪ್ರಿಯತೆ

೪.೧ ಜನಪ್ರಿಯತೆಯ ಅಂಶಗಳಾಗಿ ಹಾಸ್ಯ-ವಿನೋದ, ವಿಡಂಬನೆ ಇತ್ಯಾದಿ.

೪.೨ ಜನಪ್ರಿಯತೆಯ ಅಂಶಗಳಾಗಿ ಪ್ರೀತಿ, ಪ್ರೇಮ, ಪ್ರಣಯ ಇತ್ಯಾದಿ

೪.೩ ಬಿ.ಆರ್. ಲಕ್ಷ್ಮಣರಾವ್ ಅವರ ಕಾವ್ಯ ಮತ್ತು ಸುಗಮ ಸಂಗೀತ

ಕಾವ್ಯ ಸಹೃದಯರನ್ನು ತಲುಪಿದಾಗಲೇ ಅದರ ಸಾರ್ಥಕತೆ ಎಂಬ ಮಾತಿದೆ. ತಮ್ಮ ಕಾವ್ಯ ಎಲ್ಲಾ ವರ್ಗದ ಓದುಗರನ್ನು ತಲುಪಬೇಕು ಜನಪ್ರಿಯತೆಗಳಿಸಬೇಕೆಂಬ ಬಯಕೆ ಕವಿಗಳಲ್ಲಿರುವುದು ಸಹಜವಾದದು. ಕವಿಯ ಕಾವ್ಯ ಜನ ಮೆಚ್ಚುಗೆ ಗಳಿಸುವುದು ಕವಿಗೆ ಮತ್ತಷ್ಟು ಬರೆಯಲು ಒತ್ತಾಸೆಯಾಗುತ್ತದೆ. ಬಿ.ಆರ್. ಲಕ್ಷ್ಮಣ್ ರಾವ್ ಅವರಿಗೆ ಇದು ಸ್ವಲ್ಪಮಟ್ಟಿಗೆ ಹೆಚ್ಚಾಗಿಯೇ ಇರುವಂತಿದೆ.

ಜನಪ್ರಿಯತೆಗೆ ಹಲವು ಕಾರಣಗಳಿರುತ್ತವೆ. ಅವುಗಳಲ್ಲಿ ಪ್ರಮುಖವಾಗಿ ಓದುಗರ ನಿರೀಕ್ಷೆಗಳನ್ನು ಪೂರೈಸುವ, ಅವರ ಮನಸ್ಸಿಗೆ ಖುಷಿಕೊಡುವ, ಬದುಕಿಗೆ ಹತ್ತಿರವಾದ ಸಾಮಾನ್ಯ ಸರಳ ವಿಷಯಗಳು ನಿರೂಪಣೆಯಿಂದಾಗಿ ಜನಪ್ರಿಯತೆ ಗಳಿಸಲು ಸಾಧ್ಯವಾಗುತ್ತದೆ. ಬಿ.ಆರ್. ಲಕ್ಷ್ಮಣ್ ರಾವ್ ಅವರ ಕಾವ್ಯ ಜನಪ್ರಿಯತೆಗೆ ಪ್ರಮುಖವಾದ ಅಂಶವೆಂದರೆ ಕಾವ್ಯದ ವಸ್ತು, ವಿಷಯ, ನಿರೂಪಣಾ ಶೈಲಿಯೇ ಅವರಿಗೆ ಹೆಚ್ಚಿನ ಜನಪ್ರೀತಿ ತಂದು ಕೊಟ್ಟಿದೆ. ಕಾವ್ಯದಲ್ಲಿ, ನಿರೂಪಿತವಾಗಿರುವ ಪ್ರೀತಿ, ಪ್ರೇಮ, ಪ್ರಣಯದ ವಿಷಯಗಳು, ಹಾಗೆಯೇ ಹಾಸ್ಯ, ವ್ಯಂಗ್ಯ, ವಿನೋದ, ವಿಡಂಬನೆಗಳು ಜನಪ್ರಿಯತೆಗೆ ಕಾರಣವಾಗಿವೆ ಎಂದು ಹೇಳಬಹುದು. ಸರಳವಾದ ಭಾಷೆ, ಆಕರ್ಷಕವಾಗಿ ಅಭಿವ್ಯಕ್ತಿಸುವ ಶೈಲಿ, ಸುಲಭವಾಗಿ ಅರ್ಥವಾಗುವ ಅವರ ಕವಿತೆಗಳ ಭಾವ ಇವುಗಳಿಂದಾಗಿ ಅವರ ಕಾವ್ಯ ಜನಪ್ರಿಯತೆ ಗಳಿಸಿವೆ ಎಂದು ಹೇಳಬಹುದು. ಯಾವುದೇ ಪಥ-ಪಂಥಗಳಲ್ಲೂ ಗುರುತಿಸಿಕೊಳ್ಳದೆ ತಮ್ಮದೇ ಆದ ವಿಶಿಷ್ಟವಾದ ದಾರಿಯಲ್ಲಿ ಸಾಗುವ ಅವರ ಕಾವ್ಯದ ದಾರಿ ಎಲ್ಲರಿಗೂ ಮೆಚ್ಚುಗೆಯಾಗುತ್ತದೆ. ಮುಕ್ತವಾದ ಅನುಭವದ ಅಭಿವ್ಯಕ್ತಿಯೇ ಅವರ ಕಾವ್ಯ ಜನಪ್ರಿಯತೆಗೆ ಕಾರಣವಾಗಿದೆ. ಮಧ್ಯಮ ವರ್ಗದ ನಾಗರೀಕ ಬದುಕಿನ ನಿತ್ಯದ ಘಟನೆಗಳೇ ವಸ್ತುಗಳಾಗಿ ಅವರ ಕವಿತೆಗಳು ಓದುಗರಿಗೆ ಆಪ್ತವಾಗುತ್ತವೆ. ಬದುಕನ್ನು ಕುರಿತ ಅವರ ಕಳಕಳಿ, ಸರಳತೆ, ಕಾವ್ಯ ಓದುಗರಿಗೆ ಸುಲಭವಾಗಿ ಅರ್ಥವಾಗುವುದು. ಓದುಗರಿಗೆ ಖುಷಿ ತರುವುದು. ಕವಿಯ ಲವಲವಿಕೆ, ತುಂಟತನಗಳು ಕಾವ್ಯದಲ್ಲಿ ರೂಪು ತಳೆಯುವ ಬಗೆಯೇ ಅವರ ಕಾವ್ಯದ ಜನಪ್ರಿಯತೆಗೆ ಕಾರಣವಾಗಿದೆ ಎಂದು ಹೇಳಬಹುದು.

ಬಿ.ಆರ್. ಲಕ್ಷ್ಮಣ್ ರಾವ್ ಅವರ ಕಾವ್ಯದ ಜನಪ್ರಿಯತೆಯ ಅಂಶಗಳಾಗಿ ಅವರ ಕವಿತೆಗಳಲ್ಲಿ ಪ್ರೀತಿ-ಪ್ರೇಮ, ಪ್ರಣಯ ಇತ್ಯಾದಿ ಅಂಶಗಳು ಹೇಗೆ ಅಭಿವ್ಯಕ್ತವಾಗಿವೆ? ಹಾಸ್ಯ, ವಿನೋದ, ವ್ಯಂಗ್ಯ ವಿಡಂಬನೆಯ ಮೂಲಕ ಸಾಮಾಜಿಕ ಕಳಕಳಿ ಹೇಗೆ ವ್ಯಕ್ತವಾಗಿದೆ. ಸುಗಮ ಸಂಗೀತದ ಮೂಲಕ ಅವರ ಗೀತೆಗಳು ಯಾವ ರೀತಿಯಲ್ಲಿ ಜನಪ್ರಿಯತೆ ಸಾಧಿಸಿಕೊಂಡಿವೆ ಎಂಬಿತ್ಯಾದಿ ವಿಷಯಗಳ ಚರ್ಚೆಯ

ಮೂಲಕ ಜಿ. ಆರ್. ಲಕ್ಷ್ಮಣ್‌ರಾವ್ ಅವರ ಕಾವ್ಯದ ಜನಪ್ರಿಯತೆಯ ಮರ್ಮವೇನೆಂಬುದನ್ನು ಸ್ಪಷ್ಟಪಡಿಸಿಕೊಳ್ಳಲಾಗುವುದು. ಅವರ ಒಟ್ಟು ಕವಿತೆಗಳಲ್ಲಿ ಪ್ರಮುಖವಾದ ಕವಿತೆಗಳ ವಿಶ್ಲೇಷಣೆಯ ಮೂಲಕ ಅವರ ಕಾವ್ಯದ ಜನಪ್ರಿಯತೆಯನ್ನು ತಿಳಿಯುವ ಪ್ರಯತ್ನ ಮಾಡಲಾಗುವುದು.

ಅವರ ಕಾವ್ಯದಲ್ಲಿ ವ್ಯಕ್ತವಾಗುವ ಜನಪ್ರಿಯತೆಯ ಅಂಶಗಳಾವುವು? ಅವು ಹೇಗೆ ಜನಪ್ರಿಯತೆ ಗಳಿಸಿವೆ ಎಂಬುದನ್ನು ಚರ್ಚಿಸಿದಾಗ ಸಾಮಾನ್ಯವಾಗಿ ಜನಪ್ರಿಯತೆಯ ಅಂಶಗಳೆಂದು ಗುರುತಿಸುವ ಕೆಲವು ವಿಷಯಗಳೆಂದರೆ ಪ್ರೀತಿ, ಪ್ರೇಮ, ಪ್ರಣಯಕ್ಕೆ ಸಂಬಂಧಿಸಿದ ವಿಷಯಗಳು. ಹಾಗೆಯೇ ಹಾಸ್ಯ, ವಿನೋದ, ವಿಡಂಬನೆಗಳು ಸಾಹಿತ್ಯದಲ್ಲಿ ಜನಪ್ರಿಯತೆಯ ಅಂಶಗಳಾಗುತ್ತವೆಂದು ಗುರುತಿಸಲಾಗಿದೆ. ಇದು ಅಧುನಿಕ ಸಾಹಿತ್ಯದ ಎಲ್ಲಾ ಪಂಥ ಪ್ರಕಾರಗಳ ಸಾಹಿತ್ಯದಲ್ಲಿ ಸಾಮಾನ್ಯವಾಗಿ ಕಂಡು ಬರುವ ಅಂಶಗಳೆಂದು ಹೇಳಬಹುದು. ಇತ್ತೀಚಿನ ದಿನಗಳಲ್ಲಿ ಹಾಸ್ಯ, ವಿನೋದ, ವ್ಯಂಗ್ಯ ಬರಹಗಳು ಹೆಚ್ಚು ಜನಪ್ರಿಯತೆ ಗಳಿಸುತ್ತಿರುವುದನ್ನು ಕಾಣಬಹುದು. ಅದರಿಂದಲೇ ಜನಪ್ರಿತೆಯ ಕವಿಗಳು, ಜನಪ್ರಿಯ ಕಥೆ, ಜನಪ್ರಿಯ ಲೇಖನಗಳು ಎಂದು ಗುರುತಿಸಿಕೊಂಡಿರುವುದನ್ನು ಕಾಣುತ್ತೇವೆ.

**೪.೧ ಜನಪ್ರಿಯತೆಯ ಅಂಶಗಳಾಗಿ ಹಾಸ್ಯ-ವಿನೋದ, ವಿಡಂಬನೆ ಇತ್ಯಾದಿ :**

ಜನಪ್ರಿಯ ಕವಿಗಳೆಂದು ಗುರುತಿಸಿಕೊಂಡಿರುವ ಜಿ.ಆರ್. ಲಕ್ಷ್ಮಣ್ ರಾವ್ ಅವರ ಕಾವ್ಯದಲ್ಲಿ ಹಾಸ್ಯ, ವಿನೋದ, ವಿಡಂಬನೆಗಳು ಹೇಗೆ ಜನಪ್ರಿಯತೆಯ ಅಂಶಗಳಾಗಿ ಕಾಣಿಸಿಕೊಂಡಿವೆ. ಆ ಮೂಲಕ ಅವರ ಕಾವ್ಯ ಹೇಗೆ ಜನಪ್ರಿಯವಾಗಿವೆ, ಅವರ ಕಾವ್ಯದಲ್ಲಿ ಈ ಅಂಶಗಳು ಯಾವ ನೆಲೆಯಲ್ಲಿ ನಿರೂಪಿತವಾಗಿವೆ. ಅದರಿಂದಾಗಿ ಕವಿತೆಗಳು ಹೊರಹೊಮ್ಮಿಸುವ ನಿಲುವುಗಳೇನು ? ಅವುಗಳಿಂದ ವ್ಯಕ್ತವಾಗಿರುವ ಕಾವ್ಯದ ಧೋರಣೆಗಳೇನು ಎಂಬಿತ್ಯಾದಿ ವಿಷಯಗಳನ್ನು ಕುರಿತು ಅವರ ಒಟ್ಟು ಕಾವ್ಯದಲ್ಲಿನ ಕವಿತೆಗಳನ್ನು ಈ ನೆಲೆಯಲ್ಲಿ ಗುರುತಿಸಿಕೊಂಡು ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

ಮುಖ್ಯವಾಗಿ ಜಿ.ಆರ್. ಲಕ್ಷಣ್‌ರಾವ್ ಅವರನ್ನು ಜನಪ್ರಿಯ ಕವಿ ಎಂದು ಗುರುತಿಸಿರುವಂತೆಯೇ ಅವರ ಸಾಹಿತ್ಯಮಯ ತುಂಟಕವಿ, ಪೋಲಿಕವಿ ಎಂದು ಕರೆಯುವುದುಂಟು. ಇದಕ್ಕೆ ಕಾರಣವೂ ಇದೆ. ಲಕ್ಷ್ಮಣ್ ರಾವ್ ರವರ ವ್ಯಕ್ತಿತ್ವ ಮತ್ತು ಕಾವ್ಯ ವ್ಯಕ್ತಿತ್ವ ಒಂದೆ ಆಗಿರುವುದು. ಅದರಂತೆ ಅವರು ಕವಿತೆಗಳಲ್ಲಿ ಹಾಸ್ಯದ ಮೂಲಕ ತುಂಟತನವನ್ನು ಅಭಿವ್ಯಕ್ತಿಸುವ ಮೂಲಕ ಓದುಗರಿಗೆ ಕಚಗುಳಿ ನೀಡುತ್ತಾರೆ. ಖುಷಿ ಕೊಡುತ್ತಾರೆ. ಅವರ ಭಾಷಾ ಬಳಕೆಯಲ್ಲೆ ಹಾಸ್ಯ –ತುಂಟತನ ವ್ಯಕ್ತವಾಗುತ್ತದೆ. ಅದರಿಂದಾಗಿ ಅವರ ಕವಿತೆಗಳಲ್ಲಿ ಓದುಗನಿಗೆ ನಗೆಯ ಪುಲಕವನ್ನು ನೀಡುವುದರ ಜೊತೆಗೆ ನಗೆಯ ಬೆಳಕನ್ನು ನೀಡುತ್ತಾರೆ. ನಗೆಯ ಮೂಲಕವೇ ಗಂಭೀರತೆಯೆಡೆಗೆ ಓದುಗರನ್ನು ಕರೆದೊಯ್ಯುವುದು ಅವರ ಕವಿತೆಗಳ ವೈಶಿಷ್ಟ್ಯವೆಂದು ಹೇಳಬಹುದು. ಅವರ ಪ್ರಾರಂಭದ ಕವಿತೆಗಳಲ್ಲಿ ಒಂದಾದ "ಗೋಪಿ ಮತ್ತು ಗಾಂಡಲೀನ" ಕವಿತೆಯ ಸಾಲುಗಳಲ್ಲೆ ಇದನ್ನು ಕಾಣಬಹುದು.

"ಗುಂಡು ಗುಂಡು ಗಾಂಡಲೀನ
ಕ್ಯಾಬರಿಸುತ್ತಾ
ಬುರಬುರ ಊದಿ ಗಿರಗಿರ ತಿರುಗುವ
ಬೋಂಡವಾದ ಗೋಪಿ
ಅವನ ಹಂಡೆ ಹೊಟ್ಟೆಯ ಸುತ್ತುವರಿದು
ಅವನ ಚೊಂಬು ಕೆನ್ನೆಯ ಮೇಲೆ
ತನ್ನ ತೊಂಡೆ ತುಟಿಗಳನ್ನು ಚುಂಬಿಸಿದಾಗ
ಜುಮ್ಮೆನ್ನಿಸಿ, ಗೋಪಿ ಅವಳು ಜಗಿದು ಹೀರುತ್ತಿದ್ದ ಚ್ಯೂಯಿಂಗ್ ಗಮ್ಮಾದ" ಎನ್ನುವ ಮಾತುಗಳಲ್ಲಿ ಕವಿತೆಯ ನಾಯಕನಾದ ಗೋಪಿಯ ಗಾಂಪತನ, ಮುಗ್ಧತೆ, ದೈಹಿಕ ಚಹರೆಯ ಬಗ್ಗೆ ಹಾಸ್ಯದ ಲಹರಿಯಲ್ಲಿ ತೇಲುವ ಓದುಗನಿಗೆ ನೀತಿಬದ್ಧವಾದ ಯುವಕನ ಬೆರಗು ಅಚ್ಚರಿಯ ಜೊತೆ ಭಯ ಸೇರಿ ನೀತಿ ತನ್ನ ಗಡಿ ಮೀರಿದಾಗ ಕವಿತೆಯು ಹಾಸ್ಯದ ಕಡೆಗೆ ಅಂತಿಮವಾಗಿ ಕೌತುಕದಿಂದ ಮತ್ತೆ ಹಾಸ್ಯಕ್ಕೆ ಹೊರಳುವ ಜೊತೆಗೆ ಗಂಭಿರತೆಯನ್ನು ಒಳಗೊಳ್ಳುತ್ತದೆ.

'ಹಾ ವೆಂಕಟಲಕ್ಷ್ಮಿ ' ಎಂದು
ಧರ್ಮಪತ್ನಿಯ ನೆನೆದು, ನೊಂದು
ನೆಂದು ಪರನಾರೀ ಸಹೋದರ
ಗಾಂಡಲೀನಳ ಪಾದ ಪದ್ಮಂಗಳಿಗೆ ಧಡಾರನೆ ಅಡ್ಡ ಬಿದ್ದನೋ ?
ಅಥವಾ ಜಾರಿಬಿದ್ದನೋ ? ಎನ್ನುವಲ್ಲಿ

ಕ್ಯಾಮರಾ ಕಣ್ಣು; ಪು.೨೦-೨೧

ಕೊನೆಯ ಸಾಲಿನ ಅರ್ಥ ದ್ವಂದದಿಂದ ಕೂಡಿ ಓದುಗರಿಗೆ ಖುಷಿಯ ಜೊತೆಗೆ ಎಚ್ಚರಿಕೆಯನ್ನು ತರುವುದು. ಹಾಗೆಯೇ ನೀತಿ ಬದ್ಧ ಮನಸ್ಸು ಜಾರಲಾಗದು ಎಂಬುದನ್ನು ತೋರಿಸಿರುತ್ತಾರೆ. ಇದೇ ಕವಿತೆಯ ಮೆಚ್ಚುಗೆಗೆ ಕಾರಣವಾಗಿದೆ. ಈ ಗೀತೆ ಬಿ.ಆರ್. ಲಕ್ಷ್ಮಣ್‌ರಾವ್ ಅವರಿಗೆ ಹೆಚ್ಚಿನ ಜನಪ್ರಿಯತೆ ಗಳಿಸಿಕೊಟ್ಟು ಕವಿತೆಯಾಗಿದೆ ಎಂಬುದು ಗಮನಾರ್ಹವಾಗಿದೆ.

'ಅರ್ಧೀನ' ಕವಿತೆಯಲ್ಲಿಯೂ ಹಾಸ್ಯದ ಮೂಲಕ ಪ್ರೇಮ ನಿವೇದನೆಯನ್ನು ತರುತ್ತಾರೆ. ಪ್ರೇಮಿ ತನ್ನ ಪ್ರೇಯಸಿಯ ಬಳಿ ಹೇಳುವ ಮಾತಿನಲ್ಲಿ ಪ್ರೇಮ ಅರ್ಪಿಸಿಕೊಂಡ, ಅದನ್ನು ಪಡೆದ ಪ್ರೇಮಿಗೆ ತನ್ನೆಲ್ಲವನ್ನು ಅವಳಿಗೆ ಅರ್ಪಿಸಿ ಕೊಟ್ಟ ಮೇಲೆ ಉಳಿಯುವುದು ಏನು ಎಂಬಲ್ಲಿ ತಿಳಿಯಾದ ಹಾಸ್ಯದ ಲೇಪನವಿದೆ. "ಪ್ರಿಯ ನಿನ್ನ ಪಳಗಿದ ಕೈಗೆ ನಾನೊಂದು ಏಡಿ", ನೀರಲ್ಲಿ ಸಲೀಸಾಗಿ ಕೈ ಆಡಿಸಿ ಲಟ್ಟಾಗಿದ್ದ ನನ್ನ ತಟ್ಟನೆ ಹಿಡಿದು ಕೈ ಕಾಲು ಕೊಂಡಿ ಲಟಲಟನೆ ಮುರಿದು ನಿನ್ನ ಬುಟ್ಟಿಗೆ ಇಳಿಬಿಟ್ಟೆ. "ನನ್ನ ಕಣ್ಣಿಗೊಂದು ಕನ್ನಡಕ ಬಳುವಳಿ ಕೊಟ್ಟೆ. ಅದರಲ್ಲಿ ನಿನ್ನೊಬ್ಬಳ ಬಿಟ್ಟು ಮಿಕ್ಕವರೆಲ್ಲಾ ಸೊಟ್ಟೆ"

ಎನ್ನುವ ಮಾತುಗಳಲ್ಲಿ ಪ್ರೇಮಕ್ಕೆ ವಶನಾದ ಪ್ರೇಮಿಯ ಅವಸ್ಥೆಯನ್ನು ಕುರಿತು ಹೇಳುವ ಬಗೆ ಆಕರ್ಷಕವಾಗಿದೆ.

'ಕೇಳಿ' ಕವಿತೆಯಲ್ಲಿ ವ್ಯಕ್ತವಾಗುವ ಭಾವದಲ್ಲಿಯು ಹಾಸ್ಯದ ಸಿಂಚನವಿದೆ. ಅದರಲ್ಲಿನ ದ್ವಂದಾರ್ಥವು ಪ್ರೇಮಿಗಳ ನಡುವಿನ ಸಂವಾದದಲ್ಲಿ ವ್ಯಕ್ತವಾಗುವ ಚೇಷ್ಟೆಯನ್ನು ಓದುಗರು ಮೆಚ್ಚುತ್ತಾರೆಂದು ಗುರುತಿಸಬಹುದು.

ಪ್ರಿಯ ನನ್ನ ನಡು
ಇಂಗ್ಲೀಷ್‌ನಲ್ಲಿ ಕೈ ಬಿಡು
ವೆಯ
ಲೋಳೆ ದಾರದ ಮೇಲೆ
ಜೋ
ಲಾಡುವ ನಾನು
ನಕ್ಕೆ
ಜಿಡುತ್ತೇನೆ
ಯೆ
ಛೀ
ಪ್ರಿಯ ಇಲ್ಲ
ಎಂದಿಗೂ ಇಲ್ಲ ಎಂದು
ಬಿಟ್ಟೆ

ಕ್ಯಾಮರಾ ಕಣ್ಣು; ಪು.೩೬

ದ್ವಂದ್ವಾರ್ಥ, ತಿಳಿಹಾಸ್ಯ ಲೇಪಿತವಾದ ಆ ಕವಿತೆಯಲ್ಲಿ ಪ್ರೇಮಿಗಳ ನಡುವಿನ ಸಂಭಾಷಣೆಯಲ್ಲಿ ಹಾಸ್ಯದ ತುಣುಕು ಇಣಿಕಿರುವುದನ್ನು ಕಾಣಬಹುದು.

ಪ್ರೇಮಿ ತನ್ನ ಪ್ರೇಮ ಸಂದೇಶವನ್ನು ರವಾನಿಸುವ ಪತ್ರದ ರೀತಿಯೇ ಹಾಸ್ಯಮಯವಾಗಿದೆ.

ರೀಮುಗಟ್ಟಲೆ ಕಾಗದವಾದರೂ ಸಾಲದು
ನಿನಗೆ ನೆಲಕಾಣಿಸವ
ಆ ಡೋಮುಗಳ ವರ್ಣಿಸಲು
ನಿನ್ನ ಕಟಿ
ಯೇ ನನಗೆ ಪವಿತ್ರ ಗಂಗಾತಟಿ
ಅಲ್ಲೇ ನನ್ನ ಪ್ರೇಮಯೋಗದ

ಪರ್ಣಕುಟಿ ಎಂದೆಲ್ಲಾ
ಉತ್ಪ್ರೇಕ್ಷಿಸಿ
ನಾನಿನ್ನ ಕುರಿ
ತೊರೆದು – ಬರೆದು
ನಿನ್ನ ಕುಂಟು ಕುದುರೆಯ
ಕುರುಡು ಬಂಟನ ಕೈಲಿ
ನಿನಗೆ ಕಳಿಸಿದ
ಪ್ರೇಮ ಕವಿತೆ
ನಿನಗೆ ತಲುಪಿತೆ ? (ಕ್ಯಾಮರಾಕಣ್ಣು; ಪು.೩೯)

ಎನ್ನುವ ಮಾತುಗಳಲ್ಲಿ ಪ್ರೇಮ ಪ್ರಾರಂಭದಲ್ಲೆ ದಾರಿತಪ್ಪಿ ಎಡವಿ ಬೀಳುವ ಅಂಶವನ್ನು ಪ್ರೇಮಿಗೆ ತನ್ನ ಪ್ರೇಮ ಸಂದೇಶ ರವಾನಿಸಲಾಗದ ವಿಷಾದವನ್ನು ಭಯದಿಂದ ಕೂಡಿದ ಹಾಸ್ಯದಂತ ಮಾತುಗಳಲ್ಲಿ ಹೇಳಿರುವುದು ಓದುಗರಿಗೆ ಕಚಗುಳಿ ನೀಡುವ ಮೂಲಕ ಖುಷಿ ಕೊಡುತ್ತದೆ. 'ಚಳಿ' ಯನ್ನು ಕುರಿತು ಕವಿಯ ಹಾಸ್ಯಭರಿತ ನಿರೂಪಣೆ ಓದುಗರನ್ನು ಮನಮುಟ್ಟುವಂತೆ ರಂಜಿಸುತ್ತವೆ. ಚಳಿಯ ಹಿತವಾದ ಅನುಭವ ವಯೋ ಸಹಜವಾದ ರೀತಿಯಲ್ಲಿ ಹೇಗೆ ಭಿನ್ನವಾಗಿದೆ ಎಂಬುದನ್ನು ಹಾಸ್ಯದ ಧಾಟಿಯಲ್ಲೇ ಚೇಷ್ಟೆ ಮಾಡುವ ರೀತಿಯಲ್ಲಿ ಅಭಿವ್ಯಕ್ತಿಸಿರುವುದು ಓದುಗರಿಗೆ ಇಷ್ಟವಾಗುತ್ತವೆನ್ನಬಹುದು. 'ಚಳಿ' ಅದು ಮರಿ ಇಲಿ, ಪೋಲಿ ಚಳಿ, ಹಾಗೆಯೇ ಚಳಿಯಲ್ಲಿನ ಬಾಯಿ ಚಪಲ ಮುದುಕರಲ್ಲಿ, ದಂಪತಿಗಳಿಗೆ, ಯುವಕರಿಗೆ ಚಳಿಯ ಹಿತವಾದ ಭಾವ ಹೇಗೆಂಬುದನ್ನು ತಿಳಿಯಾದ ಭಾಷೆ ಲಘುವಾದ ಹಾಸ್ಯದ ಮೂಲಕ ಅಭಿವ್ಯಕ್ತಿಸುತ್ತಾರೆ.

ಹುರಿಗಾಳು ಮಿದು ಚುಕ್ಕುಲಿ
ಬಿಸಿಬಿಸಿ
ಚುರುಚುರು ಮೆಣಸಿನಕಾಯಿ
ಬೋಂಡ ಕಾಫಿ
ಗಳಿಗೇ ಮಾಫಿ
ಮಾಡಿ ಹರಿಹರಿ
ಎಂದು ಮುದುರಿ
ಸಹಿಸುವ
ಬಿಳಿತ ಕಳಿತ ಕೊರೆತ
ಮುದುಕನಿಗೆ

ಆಹಾ ಎಂದಷ್ಟು ಮಲಗಿ ಮುಲುಗಿ
ಸುಖಿಸುವ
ದಂಪತಿಗಳಿಗೆ
ಸರಿ
ಈ ಚಳಿ. (ಕ್ಯಾಮರಾಕಣ್ಣು; ಪು.೪೩)

ಎನ್ನುವ ಮಾತಿನಲ್ಲಿ ಚಳಿಯ ಬಗೆಗಿನ ಅನುಭವದಲ್ಲಿ ಹಾಸ್ಯ ಸಿಂಚನವನ್ನು ಕಾಣಬಹುದು.

'ಶಶಿಯ ಮೊರೆ' ಕವಿತೆಯ ಹಾಸ್ಯದ ಮೂಲಕ ಗಂಭಿರತೆ ಕಡೆಗೆ ಸಾಗುವುದನ್ನು ಕಾಣಬಹುದು.

ಲೇ ಶಶೀ
ಬರಿ ಐಸ್ ಕ್ರೀಂ ನಲ್ಲೇನಿದೆಯೇ ಖುಷಿ
ಹಸಿ ಹೆಣ್ಣೆ ಹಿಡಿ
ಈ ಅಮೇರಿಕಾದ ಕಾಕ್‌ಟೇಲ್ ಕುಡಿ'
ಸುಡಲ ನಿನ್ನ ಮಡಿ
ಥೂ ಬಿಡೀಪ್ಪ
ನನಗೊತ್ತಿಲ್ವೆ ನಿಮ್ಮ ಮಾತಿನ ಮೋಡಿ
ಮೆತ್ತಗೆ ಮತ್ತೇರಿಸಿ
ನನ್ನ ಕ್ಷೇತ್ರದಲ್ಲಿ ನಿಮ್ಮ ಧ್ವಜ ನೆಟ್ಟು
ನನ್ನ ಬಸಿರಲ್ಲಿ ಒಂದು ವಿಯೆಟ್ನಾಂ ಬಿತ್ತಬೇಡಿ

(ಕ್ಯಾಮರಾ ಕಣ್ಣು : ಪು : ೪೫)

ಎನ್ನುವ ಕೊನೆಯ ಸಾಲಿನಲ್ಲಿ ಹರಿತವಾದ ವ್ಯಂಗ್ಯವನ್ನು ತರುತ್ತಾರೆ. ದೇಶೀಯ ಸಂಸ್ಕೃತಿಯ ನಾಶ ಮಾಡಿ ಪಾಶ್ಚಾತ್ಯ ಸಂಸ್ಕೃತಿಯ ಬಗೆಗಿನ ಒಲವು, ಅದನ್ನು ವಿರೋಧಿಸುವ ಈ ನೆಲದ ಹೆಣ್ಣಿನ ಮನದಾಳದ ಮಾತು ತನ್ನತನದ ಮೇಲೆ ಗಂಡಿನ ಧಾಳಿಯನ್ನು ಸಹಿಸದ ಆಕೆಯ ವ್ಯಂಗ್ಯಪೂರಿತ ನುಡಿಗಳಿಂದ ವ್ಯಕ್ತವಾಗಿದೆ.

'ನಿರಕ್ಷರ ಕುಕ್ಷಿ' ಗೆ ಕವಿತೆ ಬಹಳ ಪ್ರಮುಖವಾದ ಗಂಭೀರ ಚಿಂತನೆಯ ಕವಿತೆ ಎನ್ನಬಹುದು. ಇದರಲ್ಲಿ ವ್ಯಕ್ತವಾಗುವ ವಿಡಂಬನೆ, ಪ್ರಸ್ತುತ ಸಮಾಜದಲ್ಲಿ ದೇಶದ ಬೆನ್ನೆಲುಬಾದ ರೈತನ ಬವಣೆಯನ್ನು ಕುರಿತದ್ದಾಗಿದೆ.

"ಭಾರತದ ಅಕ್ಷಿಯಾದ ನಿರಕ್ಷರ ಕುಕ್ಷಿಯೇ ನಮ್ಮ ಬೆನ್ನೆಲುಬು. ಆದ್ದರಿಂದ ಎಲುಬಾಗಿಯೇ ಇರಬೇಕಾದುದೆ ನಿನ್ನ ಧರ್ಮ, ಭಾರ ಹೊರಬೇಕಾದ್ದು ನಿನ್ನಿ ಕರ್ಮ" ಎಂದು ಹೇಳುವ ಕವಿ ರೈತನ ಈ ಸ್ಥಿತಿಗೆ ಆಧ್ಯಾತ್ಮಿಕ ಸಮರ್ಥನೆಯನ್ನು ನೀಡುತ್ತಾರೆ.

"ಉಪವಾಸವಾದರೂ

ವನವಾಸವಾದರೂ

ಭಾರ ಹೊರಬೇಕಾದ್ದು ನಿನ್ನ ಕರ್ಮ

ಇದು ಶ್ರೀ ಕೃಷ್ಣ ಪರಮಾತ್ಮ ಭಗವದ್ಗೀತೆಯಲ್ಲಿ

ಭೋಧಿಸಿದಂತ

ನಿಷ್ಕಾಮ ಕರ್ಮದ ಧರ್ಮಸೂಕ್ಷ್ಮ

ಈ ಸೂಕ್ಷ್ಮಗಳಲ್ಲಿ ನಿನಗೆ ಅರ್ಥವಾಗುವುದಿಲ್ಲ ಬಿಡು

(ಕ್ಯಾಮರಾ ಕಣ್ಣು: ಪು.೧೨೩)

ಇಲ್ಲಿ ಕವಿ ಹರಿತವಾದ ವ್ಯಂಗ್ಯದ ಮಾತುಗಳಿಂದ ವ್ಯವಸ್ಥೆಯನ್ನು ಕುರಿತು ವಿಡಂಬಿಸುತ್ತಾರೆ. ದುಡಿಮೆಯಷ್ಟೆ ನಿನ್ನದು ನಿನ್ನ ಯೋಗಕ್ಷೇಮ ನಮಗೆ ಬಿಡು ಎನ್ನುವಲ್ಲಿ 'ಬಿಡು' ಎನ್ನುವ ಮಾತೆ ಇಲ್ಲಿ ವ್ಯಂಗ್ಯವನ್ನು ಸೂಚಿಸುತ್ತದೆ.

ಮತ್ತೊಂದು ಕವಿತೆ "ದೇವರಿಗೆ ನಮಸ್ಕಾರ" ಕವಿತೆಯಲ್ಲಿಯೂ ವಿಷಾದದ ಛಾಯೆಯನ್ನು ಕಾಣುತ್ತೇವೆ. "ಮುಖ್ಯವಾಗಿ ದೇವರಿಗೆ ನಮಸ್ಕಾರ ಬುದ್ಧಿ ಕೊಟ್ಟದ್ದಕ್ಕೆ, ಎಲ್ಲ ಬಲ್ಲವನಂತೆ ತರ್ಕ ಹೂಡಿ ದೇವರನ್ನೆ ಅಲ್ಲಗೆಳೆಯಲು, ಆಳದ ಏಕಾಂತದಲ್ಲಿ ದೇವರಿಗಾಗಿ ಹಂಬಲಿಸಿ ಒದ್ದಾಡಲು ಆತ್ಮಾಭಿಮಾನದ ಜೊತೆ ಗುದ್ದಾಡಲು" ಎನ್ನುವಲ್ಲಿ ದೇವರ ಅಸ್ಥಿತ್ವವನ್ನು ಪ್ರಶ್ನಿಸುವಲ್ಲಿ ತಮ್ಮ ಆತ್ಮಾಭಿಮಾನವ ಬಿಟ್ಟು ಕೊಡಲಾಗದ ಸಂದಿಗ್ಧವನ್ನು ವ್ಯಕ್ತಪಡಿಸುವ ಕವಿಯ ಭಾವದಲ್ಲಿ ವಿಷಾದ ವ್ಯಕ್ತವಾಗಿದೆ ಎಂದು ಗುರುತಿಸಬಹುದು.

"ಗುಂಡಪ್ಪ ವಿಶ್ವನಾಥ' ಕವಿತೆಯಲ್ಲಿಯೂ "ವೈಭವಗಳ ಹಂಪೆಯಲ್ಲಿ ಅಂಡಲೆಯುವ ಭೂತ ಸವೆದ ಸ್ಪರ್ಶಮಣಿ ಕಂಟ ಕುಂಚ ಉಳಿ ಅನಾಥ" ಎನ್ನುವಲ್ಲಿ ವಿಷಾದದ ಎಳೆಯನ್ನು ಕಂಡರು. ಇದು ಭ್ರಮನಿರಶನದ ಭಾವವೆಂದೇ ಹೇಳಬಹುದು.

'ಕ್ಷಿಕ್ಲೋಟನ ಕೊನೆಯ ದಿನಗಳು" ಕವಿತೆಯ ಕೊನೆಯ ನಾಲ್ಕು ಸಾಲುಗಳಲ್ಲಿ ವ್ಯಕ್ತವಾಗುವ ಭಾವ ಭ್ರಮನಿರಶನವೆನಿಸುತ್ತದೆ.

"ಕ್ಷಮಿಸು ಇತಿಹಾಸವೇ ದಿನವರಿತೆ ತಡವಾಗಿ

ಕ್ಷಮಿಸು ಉದ್ಧಟನನ್ನು ದಿಟಕೆ ಶರಣು

ನಿನ್ನ ತ್ರಿವಿಕ್ರಮದ ದೈತ್ಯ ಪಾದದ ಕೆಳಗೆ

ನಾನೊಂದು ಕ್ಷುದ್ರ ಹುಳು ..ಶರಣು-ಶರಣು"

(ಕ್ಯಾಮರಾಕಣ್ಣು: ಪುಟ.೨೦೭)

ಎನ್ನುವಲ್ಲಿ ತನ್ನ ಐಲುತನದ ಸಾಹಸಗಳಿಂದಾಗಿ ಹೋರಾಡಿದ ಕ್ವಿಕ್ಸೋಟನನ್ನು ಹತಾಶೆ ಕಾಡಿದಾಗ ಕಾಲಕ್ಕೆ, ಸತ್ಯಕ್ಕೆ ಶರಣಾಗುವ ಅವನ ಮಾತುಗಳಲ್ಲಿ ಭ್ರಮನಿರಶನದ ಭಾವದ ಜೊತೆಗೆ ವಿಷಾದ ವ್ಯಕ್ತವಾಗಿದೆ ಎಂಬುದು ಪ್ರಮುಖವಾದ ಅಂಶವೆನ್ನಬಹುದು.

ಪ್ರಸ್ತುತ ದಿನದಲ್ಲಿ ಭಾರತ ಮಾತೆಗೊದಗಿರುವ ದುಃಸ್ಥಿತಿಯ ಬಗ್ಗೆ, ವರ್ತಮಾನದ ಪರಿಸ್ಥಿತಿಯ ಬಗ್ಗೆ ಕವಿಯ ಧೋರಣೆ 'ವರ್ತಮಾನ' ಕವಿತೆಯಲ್ಲಿ ವ್ಯಂಗ್ಯದ ಸ್ವರೂಪದಲ್ಲಿ ಸಾಗಿದೆ.

"ತಿಂಗಳ ಕೊನೆಯ ತಂಗಳು ಭಾನುವಾರ ಮುಖಪುಟದಲ್ಲಿ ತನ್ನ ಲಕಲಕಿಸುತ್ತಿರುವ ಮೂವತ್ತೆರಡು ಹಲ್ಲ ಕಿಸಿದು ನಗುತ್ತಿರುವ ಧೀರ ಯಾರೆಂದೆಯಾ ನಮ್ಮೆಲ್ಲರ ಐಕ್ಯಕ ಮಾತೆ ಇಂಡಿಯಾ ಎಂದು ಹೇಳುತ್ತಾ ಬಜೆಟ್ ಮಂಡಿಸಲು ಬರುವ ಅರ್ಥಮಂತ್ರಿಯನ್ನು, ಪಾಪದ ಅರ್ಥಮಂತ್ರಿ ಎಂದು ಕಟಕಿಯಾಡುತ್ತಾರೆ. ಕವಿತೆಯ ಕೊನೆಯ ಸಾಲಿನಲ್ಲಿ ಕವಿ ತನ್ನ ಮನವ ಭಾವವಾದ ಕವಿತೆಗಳು ಈ ಎಲ್ಲಾ ವಿಚಾರ ಗೊಂದಲಗಳಿಗೆ ಅರ್ಥ ಯಾರಿಗಾದರೂ ಆದೀತೋ ನಾನೇ ಇನ್ನು ಕಂಡುಕೊಳ್ಳಬೇಕಾಗಿದೆ" (ಕ್ಯಾಮರಾ ಕಣ್ಣು; ಪು.೧೯೦-೧೯೧) ಎನ್ನುವ ಮೂಲಕ ಇಡೀ ವ್ಯವಸ್ಥೆಯ ಬಗ್ಗೆ ವಿಡಂಬನೆ ಮಾಡುತ್ತಾರೆ.

ಹಾಗೆಯೇ 'ಸಂಗಾತಿಯೊಂದಿಗೆ, 'ಜರ', 'ಕಂಜನಿ', 'ಗೀತೆ', 'ಕೆಂಪು', 'ದರ್ಶನ' ಕವಿತೆಗಲ್ಲಿಯೂ ಹದಗೆಟ್ಟಿರುವ ಇಂದಿನ ಬದುಕಿನ ಬಗ್ಗೆ ಲೇವಡಿ ಮಾಡುವುದನ್ನು ಕಾಣಬಹುದಾಗಿದೆ.

ಅಧಿಕಾರ ಯಾರಿಗೆ ಬಂದರೂ, ಯಾರೇ ರಾಜ್ಯವಾಳಿದರೂ ಸಾಮಾನ್ಯನ ಬದುಕು ಬದಲಾಗದೆಂದು ವ್ಯವಸ್ಥೆಯನ್ನು ಅಣಕಿಸುವುದು, ಪುರಾಣದ ವಸ್ತುವಿನ ಮೂಲಕ ಪ್ರಸ್ತುತ ಸಂದರ್ಭವನ್ನು ಸಮೀಕರಿಸುವುದು 'ಸ್ಯೈಮಂತಕ' ಕವಿತೆಯಲ್ಲಿ ಕಾಣುತ್ತದೆ. "ಸ್ಯೈಮಂತಕ ಮಣಿ ಕಥೆ ನಿಮಗೆಲ್ಲ ತಿಳಿದದ್ದೆ : ಈ ಕಥೆ ಕೊಂಚ ಭಿನ್ನ ಎಂದು ಪ್ರಾರಂಭಿಸಿದ ಕವಿ ಸ್ಯೈಮಂತಕ ಮಣಿಯ ಕಥೆ ಹೇಳುತ್ತಾ ಮೊದಲಿಗೆ ಸತ್ರಾಜಿತ ಈ ಮಣಿ ಪಡೆದದ್ದು ಸೂರ್ಯನನ್ನು ತಪಸ್ಸಿನಿಂದ ಮೆಚ್ಚಿಸಿ, ಅವರಿಂದ ರಾಜ್ಯಕ್ಕೆ ಸುಭಿಕ್ಷವಾಯಿತೆ ? ನಂತರ ಆತನ ತಮ್ಮ ಪ್ರಸೇನ ಮಣಿ ಕದ್ದ. ಅವನಿಂದ ಜಾಂಬವಂತ ಮಣಿ ಒಯ್ದ, ಶ್ರೀ ಕೃಷ್ಣ ಅದನ್ನ ಕೊನೆಗೆ ಪಡೆದ. ಹೀಗೆ ಪುರಾಣದಿಂದ ಇತಿಹಾಸಕ್ಕೆ ದಾಖಲಾದ ಸ್ಯೈಮಂತಕ ಮಣಿಯ ಕಥೆಯೊಂದಿಗೆ ಅಧಿಕಾರಕ್ಕಾಗಿ ನಿರಂತರ ಹೋರಾಟ ನಡೆಸುತ್ತಿರುವವರು ಅಂದಿನಿಂದ ಇಂದಿನವರೆಗೆ ಅಧಿಕಾರದಲ್ಲಿ ಯಾರೆಲ್ಲ ಬಂದು ಆಳ್ವಿಕೆ ನಡೆಸಿದರೂ ಜನ ಸಾಮಾನ್ಯನ ಗೋಳು ತೀರಿತೆ ? ಅವನ ಬದುಕು ಹಸನಾಯಿತೆ ರಾಮ ರಾಜ್ಯವಾಳಿದರೂ ರಾಗಿ ಬೀಸುವುದು ತಪ್ಪೀತೇ ? ಎಂಬ ಗಾದೆ ಮಾತಿನಂತೆ ಪ್ರಸ್ತುತ ಜನಸಾಮಾನ್ಯರ ಬಗ್ಗೆ ಕಳಕಳಿ. ವ್ಯಂಗ್ಯದ ಮೂಲಕ ವ್ಯವಸ್ಥೆಯನ್ನು ಕುರಿತು ಅಣಕವನ್ನೂ ಕಾಣಬಹುದು. 'ದೋಹದ' ಕವಿತೆ ಕಾಳಿದಾಸನ ಮಾಳವಿಕಾಗ್ನಿ ಮಿತ್ರದಲ್ಲಿ ಉಲ್ಲೇಖವಾಗಿರುವ ದೋಹದ ಎಂಬ ನಂಬಿಕೆಯ ಪ್ರಕಾರ ಗೊಡ್ಡು ಮರಕ್ಕೆ ಕನ್ಯೆಯಿಂದ ಒದೆತ ಬಿದ್ದರೆ, ಉಗಿತವಾದರೆ ಮರ ಫಲ ಬಿಡುವುದೆಂಬ ನಂಬಿಕೆಯ ಮೇಲೆ ಪಂಡಿತನು ಅನ್ಯ

ಸ್ತ್ರೀಯಾದ ತಿಮ್ಮಿಯ ಬಳಿ ಬೇಡುವುದು ಎಲ್ಲಾ ವಿಧಿಗಳು ನೆರವೇರುವುದು ತನ್ನ ಧರ್ಮಪತ್ನಿಯಿಂದ ಎಂಬುದನ್ನು ವ್ಯಂಗ್ಯದ ಜೊತೆಗೆ ಮೌಢ್ಯತೆಯಿಂದ ಕೂಡಿದ ನಂಜಿಕೆಗಳ ಬಗ್ಗೆ ತೆರೆದಿಡುತ್ತಾರೆ. ತಿಳಿಯಾದ ಹಾಸ್ಯದ ಧಾಟಿಯಲ್ಲಿ ಅಭಿವ್ಯಕ್ತವಾಗಿರುವ ಕವಿತೆ 'ಕದ್ದಾಲಿಕೆ' ಅವರಲ್ಲಿಗೆ "ಹಲೋ ಪ್ರಿಯ ನಾನು .ಯಾರೆಂದು ಕೇಳಬೇಡ ಕದ್ದು ಕೇಳುವವರು ಇದ್ದಾರು, ಹಲೋ ಪ್ರಿಯ ನಾನು ಅಲ್ಲಿಗೆ ಆ ಹೊತ್ತಿಗೆ ಬರ್ತೇನೆ ಎಂದು ಕಾಯಬೇಡ ಕದ್ದು ಕೇಳುವವರು ಇದ್ದಾರು. ಅಲ್ಲಿಗೆ ಅದೇ ಹೊತ್ತಿಗೆ ಬಂದು ನಿನ್ನನ್ನು ಚೆನ್ನಾಗಿ ಒದ್ದಾರು" ಎನ್ನುವಲ್ಲಿ ತಿಳಿಯಾದ ಹಾಸ್ಯದ ಮೂಲಕ ಓದುಗರಿಗೆ ಖುಷಿ ನೀಡುತ್ತದೆ.

ಹೆಂಗಸರ ಗಮನವೆಲ್ಲ ಇನ್ನೊಬ್ಬ ಹೆಂಗಸು ಧರಿಸುವ ಒಡವೆ ವಸ್ತ್ರಗಳ ಮೇಲೆ ಮಾತ್ರ ಎನ್ನುವ ಹಾಸ್ಯಭರಿತ ವ್ಯಂಗ್ಯದ ನೀತಿ 'ಗಮನ' ಹಾಗೆಯೇ 'ಹೆಂಡತಿಯ ಸಂಕಟ' ಕವಿತೆಯಲ್ಲಿ ಮಹಾಭಾರತವನ್ನು ದ್ರೌಪದಿ ವಸ್ತ್ರಾಪಹರಣವಾದಾಗ ಬಿಕ್ಕಿ ಬಿಕ್ಕಿ ಅತ್ತ ಹೆಂಡತಿಗೆ ಗಂಡ ಕೇಳಿದಾಗ ಹೆಂಡತಿ ಹೇಳುವುದು ಸಿಕ್ಕಿತು ಕೊನೆಗೆ ಅವಳೊಬ್ಬಳಿಗೇ ಥಾನು ಥಾನು ಎಂಥಾ ರೇಷ್ಮೆ ಸೀರೆ ! ಅಯ್ಯೋ ಎಂಥಾ ರೇಷ್ಮೆ ಸೀರೆ ! ಎನ್ನುವಲ್ಲಿನ ಹಾಸ್ಯ ಚಟಾಕಿ ಓದುಗರಿಗೆ ಖುಷಿ ಕೊಡುತ್ತದೆ.

'ಪ್ರತಿಫಲ' ಕವಿತೆಯಲ್ಲಿ ಕವಿಯ ಮನೆಯ ನಲ್ಲಿ ಕೆಟ್ಟು ಕೂತಾಗ ರಿಪೇರಿ ಮಾಡಿದ ಪ್ಲಂಬರ್ ರಿಪೇರಿ ಚಾರ್ಜು ಒಂದು ಸಾವಿರವೆಂದಾಗ ಕವಿ ಹೌಹಾರಿದನು. ಕವಿತೆಗೆ ಅಷ್ಟು ಗೌರವ ಧನ ಇಲ್ಲ ಎಂದಾಗ ಪ್ಲಂಬರ್ ಹೇಳುವ ಮಾತು 'ನಾನೂ ಕವಿಯಾಗಿದ್ದೆ ಸರ್ ಪ್ಲಂಬರ್ ಆಗುವ ಮೊದಲು" ಎನ್ನುವಲ್ಲಿ ಹಾಸ್ಯದ ಜೊತೆಗೆ ಕವಿಯ ಬದುಕಿನ ಬಗ್ಗೆ ವ್ಯಕ್ತವಾಗುವ ಭಾವದಲ್ಲಿನ ವಿಡಂಬನೆಯೂ ಓದುಗರನ್ನು ಸೆಳೆಯುತ್ತದೆ.

'ನನ್ನ ಗೀತೆ', 'ಇವಳು ನದಿಯಲ್ಲ' ಕವನ ಸಂಕಲನದಲ್ಲಿ ಕವಿತೆಗಳು ಭಾವಗೀತೆಗಳಾಗಿವೆ. ಇದರಲ್ಲಿನ ಹೆಚ್ಚಿನ ಗೀತೆಗಳು ಪ್ರೇಮಗೀತೆಗಳಾಗಿವೆ. ದಾಂಪತ್ಯ ಗೀತೆಗಳು. ಇತರ ವಸ್ತು ವಿಷಯಗಳನ್ನು ಒಳಗೊಂಡ ಗೀತೆಗಳು ಇವೆ. ಅಲ್ಲಿ ಕವಿ ಹಾಸ್ಯ, ವಿನೋದದ ಮೂಲಕ ಓದುಗರಿಗೆ, ಹಾಸ್ಯದ ರಸಾನಂದವನ್ನುಂಟುಮಾಡಿದ್ದಾರೆ. 'ಪತ್ನಿಯ ಪ್ರಾರ್ಥನೆ' ಕವಿತೆ ಬಸವಣ್ಣನವರು ಶಿವನಲ್ಲಿ ಬೇಡುವುದು. ಆತ್ಮ ವಿಮರ್ಶೆಯ ಮೂಲಕ ತನ್ನ ಮನಸ್ಸು ಅಂಗಾಂಗಳ ಹಿಡಿತ ಸಾಧಿಸಲಾರದೆ ಹೋದಾಗ ತನ್ನನ್ನು ಅಂಗವಿಕಲನಾಗಿ ಮಾಡಿಯಾದರೂ ನಿನ್ನಲ್ಲೇ ಉಳಿಯುವಂತೆ ಮಾಡೆಂದು ಮೊರೆಯಿಡುವ ಆ ನೆಲೆಯಲ್ಲಿ ಬರುವ ಕವಿತೆಯಲ್ಲಿ ಹೆಂಡತಿಯೊಬ್ಬಳು ತನ್ನ ಗಂಡ ತನ್ನಿಂದ ದೂರಾಗಿ ಹೋಗದಂತೆ ತನ್ನ ಅಣತಿಯಂತೆ ತನಗೆ ಎದುರಾಡದಿರಲು ತನ್ನ ಗಂಡನನ್ನು ಕಿವುಡ, ಮೂಕನ ಮಾಡೋ ಎಂದು ಬೇಡುವ ಭಾವದಲ್ಲಿ ಹಾಸ್ಯದ ಹರವು ಇದೆ. "ಕರುಣಿಸು ನನಗೀ ವರವ ಹೇ ದೇವ ದೀನ ದಯಾಮಯಿ ದೇವ ಸದಾ ನನ್ನ ಈ ಮುಷ್ಠಿಯಲ್ಲಿರಲಿ ನನ್ನ ಪತಿಯ ಜೀವ, ಸಂಜೆಯಾದೊಡನೆ ನನ್ನ ಪತಿರಾಯ ಹೋಗದಂತೆ ಕ್ಲಬ್ಬಿಗೆ ಇಸ್ಪೀಟಾಟದ ಗಬ್ಬಿಗೆ ಹೆಳವನ ಮಾಡೋ ತಂದೆ. ಬೇರೆ ಹೆಣ್ಣುಗಳ ಮೇಲೆ ಪತಿರಾಯ ಆಡಿಸಿದಂತೆ ಕಣ್ಣ, ಹೂಡದಂತೆ ಮನಸನ್ನ, ಕುರುಡನ ಮಾಡೋ ತಂದೇ !

ಎದುರಾಡದಂತೆ ನನ್ನ ಪತಿರಾಯ ನನ್ನ ಯಾವುದೇ ನುಡಿಗೆ, ಯಾವುದೇ ನನ್ನ ನಡೆಗೆ ಮೂಕನ ಮಾಡೋ ತಂದೆ" (ಕ್ಯಾಮರಾ ಕಣ್ಣು; ಪು.೩೭೭ -೩೭೮) ಎನ್ನುವಲ್ಲಿ ಹಾಸ್ಯದ ಭಾವದ ಜೊತೆಗೆ ಪ್ರಸ್ತುತ ದಾಂಪತ್ಯ ಬದುಕಿನ ದಾರಿಯು ವ್ಯಕ್ತವಾಗಿದೆ. 'ನಗರ ವಿಹಾರ' ಕವಿತೆಯಲ್ಲಿ ನಗರ ವಿಹಾರ ಹೊಂಟವರ ನಡುವಿನ ಸಂಭಾಷಣೆ ಹಾಸ್ಯಮಯವಾಗಿದೆ. ಮಧ್ಯಮವರ್ಗದ ದಾಂಪತ್ಯ ಬದುಕು, ಹೆಂಡತಿಯ ಮಿತಿ ಮೀರಿದ ಆಸೆ ತಮಾಷೆಯಾಗಿಯೂ, ಗಣ್ಣೀರು ಹಾಕುವ ಗಂಡನ ಚೇಷ್ಟೆಯ ಮಾತುಗಳಲ್ಲಿ ಗಂಭೀರತೆಯು ಇದೆ ಎನ್ನಬಹುದು.

"ಕೊಳ್ಳೋಣವೇ ಹಸಿರು ಬಟಾಣಿ !
ದುಬಾರಿಯಲ್ಲವೇ ರಾಣಿ !
ದುಬಾರಿಯಲ್ಲವೇ ರಾಣಿ !
ಒಗ್ಗರಣೆಗೂ ತುಪ್ಪವಿಲ್ಲ
ಪಾಮಾಯಿಲ್ ಇದೆಯಲ್ಲ
ಸಾದಾ ದೋಸೆ ತಿಂದು
ಬೈಟೂ ಕಾಫಿಯ ಕುಡಿದು
ಮುಗಿಯಿತು ಜಂಬೂ ಸವಾರಿ
ಇನ್ನು ಬಾಡಿಗೆ ಮನೆ ಕಡೆಗೆ ದಾರಿ

..ಕ್ಯಾಮರಾ ಕಣ್ಣು; ಪು.೪೪೫

ಹಾಸ್ಯದ ಧಾಟಿಯಲ್ಲಿ ಮಧ್ಯಮ ವರ್ಗದ ದಾಂಪತ್ಯ ಬದುಕಿನ ಚಿತ್ರವನ್ನು ಕಟ್ಟಿಕೊಡುವ ಈ ಶೈಲಿ ಓದುಗರಿಗೆ ಮೆಚ್ಚುಗೆಯಾಗುತ್ತದೆ.

'ಸಂಶಯಾತ್ಮನ ವಿಲಾಪ' ಇದೊಂದು ವಿಡಂಬನಾ ಗೀತೆ. ಕಾವ್ಯ ಹುಟ್ಟುವುದಕ್ಕೆ ಕವಿಯ ಪರದಾಟ. ಇಡೀ ವ್ಯವಸ್ಥೆಯೇ ಕೆಟ್ಟಿರುವಾಗ ಕವಿಗಾಗುವ ಗೊಂದಲ ಯಾವುದನ್ನು ಎಷ್ಟೆಂದು ಹೇಳುವುದು. ಈ ದೇಶದ ಸ್ಥಿತಿ-ಗತಿಯ ಬಗ್ಗೆ. ಸ್ವಾತಂತ್ರ್ಯ ಗಳಿಸಿದರೂ ಅತಂತ್ರವಾಗಿರುವ ಬದುಕು, ಎಲ್ಲವನ್ನು ನೋಡುವ ಕವಿಗೆ ಇದರ ವಿರುದ್ಧ ಬಂಡಾಯ ಸಾರಲು ಸಾಧ್ಯವಾಗದಿವೆ. ಈ ಎಲ್ಲಾ ವ್ಯವಸ್ಥೆಯನ್ನು ಕಂಡ ಮುಂದಿನ ಜನತೆ ದೇಶ ಬಿಟ್ಟು ಅಮೇರಿಕಾಕ್ಕೆ ಹಾರುವ ಮನಸ್ಸು ಮಾಡಿ ತಮ್ಮೊಂದಿಗೆ ತಮ್ಮ ಹಿರಿಯರನ್ನು ಕರೆದೊಯ್ಯಲು ಹವಣಿಸುತ್ತಾರೆ. ಅದರ ಬಗ್ಗೆ ಕವಿಯ ವಿಷಾದಪೂರ್ಣವಾದ ಧ್ವನಿ ಗೀತೆಯಲ್ಲಿ ಕೇಳಿಬರುತ್ತದೆ.

'ನನಗೆ ಮಗಳಿದ್ದಿದ್ದರೆ' ಕವಿತೆಯ ಕೂಡ ಹಾಸ್ಯದ ಮೂಲಕ ಸಾಗುತ್ತದೆ. ಇಲ್ಲದುದು ಇದ್ದಾಗ ಏನಾಗುತ್ತಿತ್ತು. ಏನು ಮಾಡುತ್ತಿದ್ದೆ ಎನ್ನುವಲ್ಲಿ ಮನುಷ್ಯ ಸಹಜ ಸ್ವಭಾವದ ಪರಿಚಯವಾಗುತ್ತದೆ. ಇರುವುದೆಲ್ಲವ ಬಿಟ್ಟು ಇಲ್ಲದುದರೆಡೆಗೆ ಜೀವ ಸದಾ ಹಾತೊರೆಯುವುದು ಸಹಜ. ಆದರೆ ಕವಿಗೆ

ಮಗಳಿದಿದ್ದರೆ ಅವಳನ್ನು ಹೇಗೆ ಬೆಳೆಯಲು ಬಿಡುತ್ತಿದ್ದೆ ಎನ್ನುವುದು ಅವರ ಮಾತುಗಳಲ್ಲಿ ಓಗೆ ವ್ಯಕ್ತವಾಗಿದೆ.

'ನೀನು ಮರವಾಗು
ಆಗಬೇಡ ಬಳ್ಳಿ
ಆಗಬೇಡ ದೀಪ
ಆಗು ಉರಿದ ಕೊಳ್ಳಿ
ಧಿಕ್ಕರಿಸು ಅರಿಶಿನ ಕುಂಕುಮ ತಾಳಿ
ಆಗಬೇಡ ಸೀತೆ
ಆಗು ಭದ್ರಕಾಳಿ
ನನಗೆ ಮಗಳಿದ್ದಿದ್ದರೆ
ಮಾಡುತ್ತಿದ್ದೆ ಅವಳ ನೊಂದು
ಜೀವಂತ ಬಂಡಾಯ ಪದ್ಯ
ಆದರೆ ನನಗೆ ಮಗಳಿಲ್ಲ
ಸದ್ಯ

ಕ್ಯಾಮರಾ ಕಣ್ಣು ; ಪು : ೫೮೭

ಎನ್ನುತ್ತಾರೆ, ಹೆಣ್ಣು ಸಮಾಜದ ಕ್ರೂರ ಕಬಂಧ ಬಾಹುವಿನಲ್ಲಿ ನಲುಗಿ ಹೋಗಿದೆ ಅದನ್ನು ಪ್ರತಿಭಟಿಸಿ ನಿಲ್ಲುವ ಎದೆಗಾರಿಕೆ ಬೆಳೆಸಿಕೊಳ್ಳಲು ಬೇಕಾದ ಆತ್ಮ ಬಲ ತುಂಬುವ ರೀತಿ ಹಾಸ್ಯದ ಧಾಟಿಯಲ್ಲೇ ಸಾಗುತ್ತಾ ವ್ಯವಸ್ಥೆಯನ್ನು ಕುರಿತ ವಿಡಂಬನೆಯು ವ್ಯಕ್ತವಾಗಿದೆ. ಹೆಣ್ಣಿನ ಬದುಕು, ಅವಳ ಆಲೋಚನೆಗಳು ಬದಲಾಗಬೇಕೆಂದು ಬಯಸುವುದು ಸರಿಯೇ. ಆದರೆ ಅದು ಅವರಿಗೆ ಮಗಳಿದ್ದರೆ ಮಾತ್ರ. ಆದರೆ ಅದಿಲ್ಲವಲ್ಲ. ಅದಕ್ಕೆ ಅವರು ಹೇಳುವ 'ಸದ್ಯ' ಎಂಬ ಮಾತು ದ್ವಂದಾರ್ಥ ಕೊಡುತ್ತದೆ.

ಲಕ್ಷ್ಮಣ್‌ರಾವ್ ಅವರು ತಮ್ಮ ಕವಿತೆಗಳಲ್ಲಿ ವ್ಯಂಗ್ಯ ವಿನೋದಗಳನ್ನು ಹದವಾಗಿ ಬೆರೆಸಿ ಹೇಳುವ ರೀತಿ ಇದೆ. ಹಾಸ್ಯದ ಮೂಲಕ ಸಾಗುತ್ತಾ ವ್ಯಂಗ್ಯವಾದ ನುಡಿಗಳಿಂದಲೇ ರಸಾನಂದವನ್ನು ನೀಡುವುದರ ಜೊತೆಗೆ ಗಂಭೀರವಾದ ಚಿಂತನೆಯ ಕಡೆಗೆ ಸೆಳೆಯುವುದು ಅವರ ಕವಿತೆಗಳಲ್ಲಿನ ಗಮನಾರ್ಹ ಅಂಶವೆಂದು ಹೇಳಬಹುದು. ವಿನೋದದ ಜೊತೆಯಲ್ಲೇ ವಿಷಾದವನ್ನು ಬೆರೆಸಿ ಹೇಳುವ ವಿಶಿಷ್ಟ ಕ್ರಮವೇ ಓದುಗರ ಮೆಚ್ಚುಗೆ ಗಳಿಸಲು ಕಾರಣವಾಗುತ್ತದೆ.

'ಸ್ವಾಗತ', ಒಬ್ಬ ನಿರ್ಭಾಗ್ಯ ಪ್ರೇಮಿಯ ಹಾಡು', ಪ್ರೇಮ (ಧೂ)ಮ' ಫಸ್ಸಿ, ಕ್ಯಾಬರೆ', ಇತ್ಯಾದಿ ಕವಿತೆಗಳೂ ಹಾಸ್ಯದಿಂದ ಕೂಡಿವೆ. ಬದುಕಿನ ಅತ್ಯಂತ ಸೂಕ್ಷ್ಮಗಳನ್ನು ವಿಡಂಬನೆಯ ಮೂಲಕ ಮತ್ತು ಅಷ್ಟೆ ಗಂಭೀರವಾಗಿ ಚಿತ್ರಿಸುವುದು ಬಿ.ಆರ್. ಲಕ್ಷ್ಮಣ್ ರಾವ್ ರವರ ಕವಿತೆಗಳ ವೈಶಿಷ್ಟ್ಯವಾಗಿವೆ.

'ಗೋಪಿ ಮತ್ತು ಗಾಂಡಲೀನ' ದ ಮೂಲಕ ಅವರ ಹಾಸ್ಯದ ಹೊಳಪು ಪ್ರಾರಂಭವಾಗಿ ನಂತರದ ಕವಿತೆಗಳ ಮೂಲಕ ಅದು ವಿಸ್ತಾರತೆ ಪಡೆದುಕೊಳ್ಳುತ್ತ ಹೋಗುತ್ತದೆ. ವ್ಯಂಗ್ಯ, ವಿನೋದದ ಮೂಲಕ ವಿಷಾದ ವ್ಯಕ್ತವಾದರೂ ಅದು ನಿರಾಳವಾದ, ಪ್ರೀತಿಯ ಮನಸ್ಸಿನಿಂದ ಮುಕ್ತವಾಗಿಲ್ಲ ಎಂಬುದನ್ನು ಅವರ ಕವಿತೆಗಳಲ್ಲಿ ಗುರುತಿಸಬಹುದು.

ಕವಿ ಮಧ್ಯಸ್ಥನ ನಿಲುವಿನಲ್ಲಿದ್ದರೂ ಬದಲಾಗುವ ಅನಿವಾರ್ಯತೆಯಲ್ಲಿ ಹೊಸ-ಹೊಸ ಆತಂಕಗಳು ಕವಿಯನ್ನು ಕಾಡುತ್ತವೆ. ಆಧುನಿಕತೆಯ ಒತ್ತಡದಲ್ಲಿ ಕಾವ್ಯ ಮರೆಯಾಗಬುದೆಂಬ ಆತಂಕವಿದೆ. ಅಂತಹ ಆತಂಕದ ಪ್ರತೀಕವಾಗಿ ಬರುವ 'Y2K' ಗೆ ಸ್ವಾಗತ ಕವಿತೆಯಲ್ಲಿ ಹೊಸ ಶತಮಾನದ ಕನಸುಗಳ ಕಲ್ಪನೆಯಲ್ಲಿ "ಬತ್ತಿಹೋದಂತೆ ಪೆಟ್ರೋಲಿನ ಸೆಲೆ ಖಾಲಿಯಾದಂತೆ ಕಲ್ಲಿದ್ದಲ ನೆಲೆ ಸೌರಶಕ್ತಿಯಲಿ ಮತ್ತೆ ಪರಿಸರ ನಿರ್ಮಲಗೊಂಡಂತೆ ಕನಸು". ನವ ಶತಮಾನದ ಕನಸು ಕವಿಯಲ್ಲಿ ಮೂಡುತ್ತದೆ. ನವ ಭಾರತದ ಬದುಕು ಹೇಗಿರಬಹುದೆಂಬ ಕಲ್ಪನೆಯಲ್ಲಿ ತೇಲಿ ಹೋಗುವ ಕವಿಗೆ ಕನಸು ಕಾಣುವುದೇ ಕವಿಯ ಧರ್ಮವಾಗಿದೆ. ಆದರೆ ಭವಿಷ್ಯ ಮಾತ್ರ ಕಾಲದ ಒಳಗೆ ನಿಗೂಢವೆಂಬುದನ್ನು ಹೇಳುತ್ತಾರೆ. ಇಲ್ಲಿ ಕವಿಯ ಹಪಹಪಿಸುವಿಕೆ ಏನೆಂದರೆ "ಅಮೇರಿಕಾ ಅಮರಾವತಿ ಭಯ ವಾಸಿ, ಭೋಗದ ಬದುಕಿಗೆ ಯುವಜನ ರೋಸಿ ನಮ್ಮ ಭಾರತವೇ ವಾಸಿ, ಎಂದರಿತು ವಾಪಸ್ಸಾದಂತೆ'.

(ಕ್ಯಾಮರಾಕಣ್ಣು ; ಪು : ೫೮೧-೫೮೩)

ಎನ್ನುವ ಮಾತುಗಳಲ್ಲಿ ಯುವಜನತೆ ಆಡಂಬರದ ಬದುಕಿಗೆ ಆಸೆಪಟ್ಟು ನಮ್ಮ ದೇಶದಿಂದಾಚೆ ಹೋಗುವ ಬಗ್ಗೆ ವಿಷಾದವನ್ನು ಅಭಿವ್ಯಕ್ತಿಸುತ್ತಾರೆ. ಅಲ್ಲಿಂದ ಹಿಂದಿರುಗಿ ಬರುವಂತೆ ಕನಸು ಕಾಣುವುದರಲ್ಲಿ ಕವಿಯನ್ನು ಕಾಡುವ ಆತಂಕಗಳು ಓದುಗರನ್ನು ಆಕರ್ಷಿಸುವುದರ ಜೊತೆಗೆ ಪ್ರಸಕ್ತ ಬದುಕನ್ನು ಕುರಿತ ಗಂಭೀರ ಚಿಂತನೆಯನ್ನು ಇಲ್ಲಿ ತರುತ್ತಾರೆ.

ದೇಹವನ್ನು ಕುರಿತ ಅವರ ಚಿಂತನೆಯಲ್ಲಿ ವ್ಯಂಗ್ಯವು ವಿಷಾದ ಪೂರ್ಣವಾಗಿ ವ್ಯಕ್ತವಾಗಿದೆ. "ದೇಹವನ್ನು ಹೀಗಳೆಯಬೇಡ ಗೆಳೆಯ ನೀನಾಗಿ ಕಲ್ಪಿಸಿದ ಮಾಪಕಗಳಿಂದ ಮೂಳೆ ಮಾಂಸದ ತಡಿಕೆ ಇದು ಪಂಜರ ಎಂದು ನೀನೆಂದರೂ ಇದು ಸುಂದರ, ಏಣಿಯನೆ ನೀನೀರುವೆ ಕಡೆಗಿದನೆ ತೊಡಕೆಂದು ನೀ ದೂರುವೆ ದೇಹವನು ತೊರೆದು ನೀ ಪಾರಾದ ಬಳಿಕ ಏನಿದ್ದರೇನು ? ಎಲ್ಲಿ ಸಂಪರ್ಕ ?

(ಕ್ಯಾಮರಾ ಕಣ್ಣು; ಪುಟ ; ೩೫೮)

ಎಂದು ಹೇಳುವಲ್ಲಿ ಕವಿ ದೇಹವನ್ನು ಕುರಿತಂತೆ ಅದು ನಶ್ವರ ಅವರಿಂದೇನು ಎಂಬ ತಾತ್ವಿಕರ ನಿಲುವಿಗೆ ವಿರುದ್ಧವಾಗಿ ದೇಹದ ಮಹತ್ವವನ್ನು ಹೇಳುತ್ತಾ, ಇಹದ ಬದುಕಿನ ಎಲ್ಲಾ ಸಂಪರ್ಕಗಳಿಗೆ ಸಾಧನವಾದ ಈ ದೇಹ ನಶಿಸಿದ ಬಳಿಕ ಯಾವ ಸಂಪರ್ಕವೂ ಇಲ್ಲ. ಅದರಿಂದಾಗಿ ದೇಹದ ಬಗ್ಗೆ ಹೀಗಳಿಕೆ ಬೇಡ ಎನ್ನುತ್ತಾರೆ. ಇಲ್ಲಿ ಇಹದ ಬದುಕು. ಅವರ ಅನುಭವ ಮುಖ್ಯವೇ ಹೊರತು,

ಅದರಾಚೆಗಿನ ಬದುಕಲ್ಲ. ಅದಕ್ಕೆ ಅವರ ಕವಿತೆಗಳಲ್ಲಿ ಇದು ವ್ಯಕ್ತವಾಗುವುದೇ ಇಲ್ಲ. ಇಹದ ಬಂಧನಕ್ಕೆ ಪ್ರಾಮುಖ್ಯತೆ ಇರುವುದು ವ್ಯಕ್ತವಾಗುತ್ತದೆ.

ಪ್ರಸ್ತುತ ದೇಶದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಅತಂತ್ರತೆಯನ್ನು ಒಡಿದಿರುವ ಸಶಕ್ತವಾದ ಕವಿತೆ 'ಉತ್ತರ' ಇದರಲ್ಲಿ ಕವಿಯ ವಿಷಾದಯುಕ್ತವಾದ ಭಾವ ವ್ಯಕ್ತವಾಗಿದೆ. "ಕಾಯುತ್ತಿದ್ದಾನೆ ಯುವಕ ಕರುಳ ಬಳ್ಳಿಯ ಕಡಿದುಕೊಂಡು ವಿಮಾನವೇರಿ ಹಾರಿ ಹೋಗಲು, ಕಾಯುತ್ತಿದೆ ದಿಕ್ಕೆಟ್ಟು ನಿಂತ ದೇಶ ಕಣ್ಣಲ್ಲಿ ಎಣ್ಣೆ ಬಿಟ್ಟುಕೊಂಡು ಸಾರಥಿಗೆ ತಕ್ಕ ಅಧಿಪತಿಗೆ "ಭೂಮಿ ತಾಯಿಯು ಕಾಯುತ್ತಿದ್ದಾಳೆ. ಕೊನೆಗೆ ಕವಿಯು ಕಾಯುತ್ತಾ ಕೂರುತ್ತಾನೆ".

(ಕ್ಯಾಮರಾ ಕಣ್ಣು ; ಪು ; ೫೦೯)

ಉತ್ತರ ಸಿಗದ ಪ್ರಶ್ನೆಯೆ ಇಲ್ಲಿವೆ. ಹಲವು ಆತಂಕಗಳು, ತಲ್ಲಣ ತವಕಗಳು ಹೆಚ್ಚಾಗುವಲ್ಲಿ ಕವಿಯ ಮಹದಾಸೆ ಎಂದರೆ ಮಲಿನವಾಗಿರುವ ಈ ಕೊಳೆಯನ್ನೆಲ್ಲಾ ತೊಳೆದು ಹೊರಬರುವ ತವಕ. ಅದು ಸಾಧ್ಯವಾದೀತೆ ? ಎಂಬ ಪ್ರಶ್ನೆಯಲ್ಲೆ ಅಂತ್ಯವಾಗುವ ವಿಷಾದದ ಭಾವದಲ್ಲೆ ಉತ್ತರವಿಲ್ಲದ ಪ್ರಶ್ನೆ ಹಾಗೆ ಉಳಿದು ಬಿಡುವುದು. ವರ್ತಮಾನದ ಬದುಕನ್ನು ಕುರಿತ ವ್ಯಂಗ್ಯವನ್ನು ಕಾಣಬಹದು. ಜೊತೆಗೆ ಇಂದು ಹಲವು ಚಿಂತಕರನ್ನು ಕಾಡುವ ಅಂಶಗಳೂ ಇವೇ ಎಂಬುದು ಪ್ರಮುಖವಾದ ವಿಚಾರವಾಗಿದೆ.

ಈ ಸಮಾಜ ಗಂಡನ್ನು ನೋಡುವ ರೀತಿ ಹೆಣ್ಣನ್ನು ನೋಡುವ ರೀತಿ ಇವುಗಳ ಮೂಲಕವೇ ಸಾಮಾಜಿಕ ಮೌಢ್ಯತೆಯ ಒಳಸೂಕ್ಷ್ಮವನ್ನು ಸರಳವಾದ ಮಾತುಗಳಲ್ಲೆ ತೆರೆದಿಡುವುದು. 'ನಿನಗೆ ನಾನ್ಯಾರು' ಕವಿತೆ ಇದರಲ್ಲಿ ಗಂಡು ಏನೇ ತಪ್ಪು ಮಾಡಿದರೂ ಒಪ್ಪಿ ನಿರಪರಾಧಿಯಾಗಿ ಸ್ವೀಕರಿಸುವ ಈ ಸಮಾಜ ಹೆಣ್ಣನ್ನು ಮಾತ್ರ ಅಪರಾಧಿಯಾಗಿ ನೋಡುತ್ತದೆ. ನಿಷ್ಪಾಪಿ ಎಂದು ಕೊಂಡು ಸಮಾಜದ ನ್ಯಾಯದ ತಕ್ಕಡಿಯನ್ನು ಪ್ರಶ್ನಿಸುವಲ್ಲಿ, "ಈ ಒಂಟಿ ಮರ ಸಾಕಷ್ಟು ಕುಡಿದಿದೆ ನನ್ನ ಕಣ್ಣೀರ ಬಾ, ಇಲ್ಲಿ ಕೂರು ಇನಿಯಾ ನಿನಗೆ ನಾನ್ಯಾರು ?

(ಕ್ಯಾಮರಾ ಕಣ್ಣು ; ಪು ; ೪೯೮)

ಎನ್ನುವಲ್ಲಿ ಹೆಣ್ಣಿನ ಕಷ್ಟ, ಶ್ರಮ, ಬೆವರು, ರಕ್ತ ಕಣ್ಣೀರನ್ನು ಕುಡಿದು ಬೆಳೆಯುವ ಸಮಾಜ ಅವಳನ್ನು ನಡೆಸಿಕೊಳ್ಳುವ ರೀತಿಯನ್ನು ಕುರಿತು ಕವಿಯ ವಿಷಾದದ ಧ್ವನಿ ಇವೆ.

'ಅದೇ ಹಾಡು' ಕವಿತೆಯು ಹಾಸ್ಯ ಧಾಟಿಯ ವ್ಯಂಗ್ಯದ ನುಡಿಗಳಿಂದ ಕೂಡಿದೆ, "ಹೇಗಿದ್ದೀಯಾ ಟ್ವಿಂಕಲ್" ಹೀಗಿದ್ದೇನೆ ಅಂಕಲ್, ಲೂನಾ ಬೆನ್ನನ್ನೇರಿ ಗಾಳೀಲೆ ಸವಾರಿ ಬರ್ತಿದ್ವಲ್ಲೆ ಪೋರಿ ಹೇಗಿದ್ವಲ್ಲೆ ಹೀಗೇಕಾದೆ ? ಮಾಡ್ ಆಗಿದ್ದೆ ಮಡಿ ಕೋಲಾದೆ. ಏನಿದು ಅಳುಕು ಒಳಗಿನ ಭಾದೆ ? ಹೇಳಬಾರದೇನೆ ಟ್ವಿಂಕಲ್ ಇದ್ದದ್ದೆ ಬಿಡಿ ಅಂಕಲ್" (ಕ್ಯಾಮರಾ ಕಣ್ಣು ; ಪು : ೪೮೮)

ಎಂದು ಸಾಮಾನ್ಯವಾದ ನಿತ್ಯ ಬೆಂಗಳೂರಿನ ಭಾಷೆಯ ಮೂಲಕ ಮದುವೆಗೆ ಮುನ್ನವಿದ್ದ ಒನಪು-ವೈಯ್ಯಾರ, ಬೆಡಗು, ಆಧುನಿಕತೆಗಳು –ಮದುವೆಯ ನಂತರ ಎಲ್ಲಾ ಕಳೆದುಕೊಂಡು

ನಿಸ್ತೇಜವಾಗಿ ಕಳಾಹೀನಳಾಗುವ ಹೆಣ್ಣು ಮಕ್ಕಳ ಬಗೆಗಿನ ಸಾಮಾನ್ಯ ವಿಷಯ ಹಾಸ್ಯದ ಮೂಲಕ ಓದುಗರಿಗೆ ಹತ್ತಿರವಾಗುತ್ತದೆ. ಹಾಗೆಯೇ ದಾಂಪತ್ಯ ಬದುಕಿಗೆ ಕಾಲಿಟ್ಟ ಮಧ್ಯಮವರ್ಗದ ಹೆಣ್ಣು ಮಕ್ಕಳ ಬದುಕಿನ ರೀತಿಯನ್ನು ಅಭಿವ್ಯಕ್ತಿಸುತ್ತದೆ.

ಶತಶತಮಾನಗಳಿಂದ ಶೋಷಿತ ಹೆಣ್ಣಿನ ನೋವು, ನಿರಾಶೆಗಳು, ಹೆಪ್ಪುಗಟ್ಟಿದ್ದೆ, ಅವು ಕರಗಲೇ ಇಲ್ಲ ಎನ್ನುವುದು 'ಅದೇ ಹಾಡು' ಕವಿತೆಯಲ್ಲಿ ವ್ಯಕ್ತವಾದ ಭಾವ ಎಂದರೆ ಅಮ್ಮನ ಸಂಪ್ರದಾಯದಿಂದ ಮಗಳ ಬಾಬ್ ಕಟ್ಟಿಂಗ್ ನವರೆಗೆ ವೇಷ ಬದಲಾಗಿದೆ. ಆದರೆ "ಅಂತರಂಗ ಬದಲಾಗಲಿಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತಾರೆ. ಮನುಷ್ಯನ ಸಣ್ಣ ತನಗಳನ್ನು ಹೊರಗೆಳೆಯುವ ಮೂಲಕ ಅವರ ಬಗ್ಗೆ ನಾಚುವ, ಹೇಸಿಗೆ ಪಡುವುದರೊಂದಿಗೆ ಪರಿಪೂರ್ಣವಾದ ಬದುಕಿನೆಡೆಗೆ ಸಾಗುವ ಅಂಶ 'ಪ್ರಿಸಮ್' ಕವಿತೆಯಲ್ಲಿ ವ್ಯಕ್ತವಾಗಿವೆ.

'ಅಲ್ಲೆ ವಾಸಿ' ಕವಿತೆಯು ಇಹದ ಬದುಕಿನ ಅನ್ಯಾಯದ ಅನೀತಿಯುತವಾದ ಸುಖಕ್ಕಿಂತ ಚಿತ್ರ ಹಿಂಸೆ ನೀಡಿದರೂ ನರಕವೇ ವಾಸಿ ಅಲ್ಲಿಗೆ ಹೋಗ್ತೀನಿ ಎನ್ನುವಲ್ಲಿ ಕವಿ ಹಾಸ್ಯದ ಮೂಲಕ ಹರಿತವಾದ ವ್ಯಂಗ್ಯವನ್ನು ಧ್ವನಿಸುತ್ತಾರೆ. "ತರಕಾರಿ ತರಹ ಕೊಯ್ದು ಉಪ್ಪು ಖಾರ ಹಚ್ಚಿ ಕಾದ ಬಾಂಡಲಿಯಲ್ಲಿ ಹಾಕಿ ಕರೆದರೂ, ಗರಗಸದಿಂದ ಕೊಯ್ದು ಮೂಗು, ಕಣ್ಣು, ಕಿವಿ ಬಾಯಿಗೆ ಕಾದ ಸೀಸ ಹೊಯ್ದರೂ ಅಲ್ಲಿಗೆ ಹೋಗ್ತೀನಿ ಹೇಗೋ ಗಾಂಧೀಜಿ ಅಲ್ಲೇ ಇರ್‍ತಾರೆ, ಮಾಡಿದ ತಪ್ಪಿನ ಪ್ರಾಯಶ್ಚಿತ್ತಕ್ಕೆ ಅಲ್ಲಿಗೆ ಹೋಗ್ತೀನಿ, ಎನ್ನುವಲ್ಲಿ ಸತ್ಯದ ದಾರಿಯಲ್ಲಿನ ಹೋರಾಟಕ್ಕೆ ಸಿಗುವ ಫಲ ಎಂಥದ್ದು. ಹಾಗೆಯೇ ತಾನು ಮಾಡಿದ ತಪ್ಪಿನ ಪ್ರಾಯಶ್ಚಿತ್ತದ ಬಗ್ಗೆ ಚಿಂತಿಸುವ ಮನಸ್ಸು ಇವುಗಳ ಚಿತ್ರಣದಲ್ಲಿ ವರ್ತಮಾನದ ಬಗೆಗಿನ ಚಿಂತನೆ ಇದೆ ಎನ್ನಬಹುದು.

ಹಾಸ್ಯದ ಮೂಲಕ ಸಾಗುವ ಭಾವಗೀತೆ 'ಸುಬ್ಬಾ ಭಟ್ಟರ ಮಗಳೇ' ಇದೆಲ್ಲಾ ನಂದೆ ತಕ್ಕೊಳ್ಳೆ ಎನ್ನುವಲ್ಲಿ ಕವಿಯ ಹಾಸ್ಯ ಪ್ರಜ್ಞೆ ಓದುಗರಿಗೆ ಖುಷಿ ಕೊಡುತ್ತದೆ. ಆ ಮೂಲಕ ಕಚಗುಳಿ ಇಡುತ್ತದೆ. ಸುಬ್ಬಾ ಭಟ್ಟರ ಮಗಳಿಗೆ ಕೊಡುವ ಕೊಡಬಹುದಾದ ವಸ್ತುಗಳು, ಕವಿಯ ಶ್ರೀಮಂತಿಕೆಗೆ ಪ್ರಕೃತಿ ಸಂಪತ್ತೆ ನಿಲ್ಲುವುದು, ಇದನ್ನು ಇಂಪಾಗಿ ಹಾಸ್ಯಭರಿತ ಧಾಟಿಯೂಲ್ಲಿ ಹಾಡುವ ಮೂಲಕ ಕೇಳುಗರನ್ನು ರಂಜಿಸುತ್ತದೆ. ನಗೆಯ ಪುಳಕ ತರುತ್ತದೆ.

ಕಾಲದ ಮಹಿಮೆಯನ್ನು ಕಾಲದ ಸ್ವರೂಪ, ಮಹತ್ವಗಳನ್ನು ಸಾರುವ 'ಕಾಲ' ಕವಿತೆಯ ಹಾಸ್ಯದ ಧಾಟಿಯಲ್ಲೆ ಸಾಗುವ ಜನಪ್ರಿಯವಾದ ಭಾವಗೀತೆಯಾಗಿದೆ. ಕಾಲವನ್ನು ಜಿಮುಣನಿಗೆ ಹೋಲಿಸುವಲ್ಲೆ ಕವಿಯ ಚೇಷ್ಟೆತನ ಕಾಣುತ್ತದೆ. ಏನೆಲ್ಲಾ ಕೊಟ್ಟರೂ, ಕಳೆದ ಕಾಲ ಮತ್ತೆ ಬರಲಾರದು. ಕಾಲದ ಪ್ರಭಾವ ಎಲ್ಲದರಲ್ಲೂ ಇರುತ್ತವೆ. ಅದನ್ನು ಮೀರುವುದು ಗೆಲ್ಲುವುದು ಮನುಷ್ಯನಿಗೆ ಅಸಾಧ್ಯ, ಅವರ ಸ್ವರೂಪ ಯಾರಿಗೂ ತಿಳಿಯದು. ಆಳ-ಅಗಲ ವಿಸ್ತಾರ ಕಾಣಲಾಗದು, ಎಂಬುದನ್ನು ಮಾರ್ಮಿಕವಾಗಿ ಲಘುವಾದ ಹಾಸ್ಯದ ಮೂಲಕ ಹೇಳುತ್ತಾರೆ "ಜಿಮುಣ ಅಂದ್ರ ಜಿಮುಣ ಈ ಕಾಲ ಏನೇ ಗಿರವಿ ಇಟ್ರೂ

ಎಷ್ಟು ಬಡ್ಡಿ ಕೊಟ್ರು ಸಿಕ್ಕೋದಿಲ್ಲ ಒಂದು ಗಳಿಗೆ ಸಾಲ" ಎನ್ನುತ್ತಲೇ ಅವನ್ನು ಮೀರುವುದೊಂದೆ ಅವನ್ನು ಗೆಲ್ಲಲು ದಾರಿ ಸಿಕ್ಕದೆ ರೂಢಿಯ ಶೈಲಿ ಕಲ್ತಿ ಹೊಸ ಹೊಸ ಶೈಲಿ ರಿಕ್ಕರಿಸೋಣಾ ಲೆಕ್ಕಾಚಾರದ ಸಾಳ" ಎನ್ನುವ ಪರಿಹಾರವನ್ನು ಮಾತ್ರ ಹೇಳುತ್ತಾರೆ. ಇದು ಕಾಲವನ್ನು ಕುರಿತ ಗಂಭೀರ ಚಿಂತನೆಯೂ ಆಗಿದೆ.

(ಕ್ಯಾಮರಾ ಕಣ್ಣು ; ಪು ; ೩೯೦–೩೯೧)

'ಸ್ವಾತಂತ್ರ್ಯ' ಕವಿತೆಯಲ್ಲಿಯೂ ಹಾಸ್ಯದ ಮಾತುಗಳ ಮೂಲಕ ವಿಡಂಬನೆಯಿದೆ. ಬದುಕಿನ ನಾಗರೀಕರ ಬೇಜವಾಬ್ದಾರಿತನವನ್ನು ಅವರ ವರ್ತನೆಗಳನ್ನು ಕುರಿತು ಸ್ವಾತಂತ್ರ್ಯದ ಕಲ್ಪನೆ ಹೇಗಿವೆ ಎನ್ನಲು ನೋಡಿ ಇಲ್ಲದೆ ಕೆಲವು ಉದಾಹರಣೆ "ಹಾದಿ ಬದಿಯಲ್ಲಿ ಹಾಡು ಹಗಲಲ್ಲೆ ನಿಂತು ನಿರ್ಲಜ್ಜೆಯಿಂದ ಅಹಾ ! ಭಾರತ ಮಾತೆಯ ಕಂದ ಮಾಡುತ್ತಿರುವನು ಒಂದಾ !" ಎಂಬ ಚೇಷ್ಟೆಯ ಮಾತುಗಳ ಮೂಲಕವೇ ಪ್ರಜಾಪ್ರಭುತ್ವ ವ್ಯವಸ್ಥೆಯ ಬಗ್ಗೆ ವ್ಯಂಗ್ಯವಿದೆ. ಹಾಗೆಯೇ ಸ್ವಾತಂತ್ರ್ಯವೆಂದರೆ ಕೇವಲ ಸ್ವಚ್ಛಂದವಲ್ಲ. ಕರ್ತವ್ಯದರಿವು ಮುಖ್ಯ ಎಂದು ಹೇಳುತ್ತಾರೆ.

ಅವರ ಕವಿತೆಗಳಲ್ಲಿ ನಗೆಯನ್ನಷ್ಟೇ ಅಲ್ಲ ನಗೆಯ ಬೆಳಕನ್ನು ತರುತ್ತಾರೆ. ಅವರ ಅನುಭವದ ಪ್ರಾಮಾಣೀಕತೆ ಅದನ್ನು ಅಭಿವ್ಯಕ್ತಿಸುವ ಸರಳವಾದ ಶೈಲಿ, ನಿತ್ಯ ಬದುಕಿನ ಭಾಷಾ ಬಳಕೆ. ಗಂಭೀರ ವಿಷಯಗಳನ್ನು ಹಾಸ್ಯದ ಮೂಲಕ ಓದುಗರಿಗೆ ಮನಮುಟ್ಟುವಂತೆ ತಲುಪಿಸುವ ಪ್ರಯತ್ನದ ಅವರ ಕವಿತೆಗಳು ಇದೇ ಕಾರಣದಿಂದಾಗಿಯೇ ಹೆಚ್ಚಿನ ಜನ ಮನ್ನಣೆ ಗಳಿಸಿವೆ ಎಂಬುದನ್ನು ಗುರುತಿಸಬಹುದು.

ಲಕ್ಷ್ಮೀಶ್‌ರಾವ್ ಅವರ ಹಾಸ್ಯ ಪ್ರಜ್ಞೆ ಪೋಲಿತನ, ಚೇಷ್ಟೆ, ರಸಿಕತೆಗಳು ಕವಿತೆಗಳಲ್ಲಿ ಹೇಗೋ ಹಾಗೆಯೇ ಅವರ ಹನಿಗವಿತೆಗಳಲ್ಲೂ ಹೆಚ್ಚಿನ ಪ್ರಮಾಣದಲ್ಲಿ ಅಭಿವ್ಯಕ್ತವಾಗಿರುವುದನ್ನು ಕಾಣಬಹುದು. "ಭಾರತ ಬಿಂದು ರಶ್ಮಿ ಸಂಕಲನದಲ್ಲಿ "ಪ್ರಕಟವಾಗುವ ಕವಿತೆಗಳಾದ 'ಬಚಾವು', 'ಶಿಕ್ಷೆ', 'ಪಾಕಂಪೊಪ್ಪು', 'ಗುಟ್ಟು', 'ಗ್ಯಾಟ್', ಬೆತ್ತಲೆ, ಏಕಲವ್ಯ, ತಬ್ಬಿಬ್ಬು, ಓಗೇಕೆ, ಗಂಗೋಲಿ ಹೇಳಿದ್ದೆ ಜಾಣರೆ ಅರುಚಿ, ಹೆಬ್ಬು, ಔಟ್, ಚೆನ್ನ, ಮತಾಂತರ, ಸ್ವರ್ಣಮಂದಿರ ಕರಾಟೆ, ಸಂಕೇತ, ಸಿಯತ್ತು, ಇದ್ದಾಳೆ, ರೂಪಾಂತರ, ಸಮಾನತೆ, ಅಗತ್ಯ, ನ್ಯಾಯ, ನಿಯಮ, ಹನಿಗವಿತೆ, ವಿದಾಯ ಇತ್ಯಾದಿ ಕವಿತೆಗಳಲ್ಲಿ ಹಾಸ್ಯದ ಮೂಲಕ ವಾಸ್ತವಿಕತೆಗೆ ಕನ್ನಡಿ ಹಿಡಿಯುತ್ತಾರೆ. ಹನಿಗವಿತೆಗಳಲ್ಲಿಯೇ ಹೆಚ್ಚಾಗಿ ಹಾಸ್ಯ, ವ್ಯಂಗ್ಯ ವಿಡಂಬನೆಗಳು ವ್ಯಕ್ತವಾಗಿರವುದನ್ನು ಗುರುತಿಸಬಹುದು.

ಹಾಸ್ಯದ ಮೂಲಕ ಕಚಗುಳಿಯಿಡುತ್ತಾ ಓದುಗರನ್ನು ನಗಿಸುವ ಅವರ ಹನಿಗವಿತೆಗಳು ಸಾಮಾನ್ಯ ವಸ್ತು ವಿಷಯಗಳಿಗೆ ಸೀಮಿತವಾಗಿಲ್ಲದೆ, ನಿತ್ಯ ಬದುಕಿನ, ಪುರಾಣ, ಐತಿಹಾಸಿಕ ಇನ್ನಿತರೇ ಯಾವುದೇ ವಿಷಯಗಳನ್ನು ಒಳಗೊಂಡಿದೆ. ಅವರ ಹನಿಗವಿತೆಗಳು ಹೆಸಲೇ ಹೇಳುವಂತೆ ಹನಿಕವಿತೆಗಳೇ ಆದರೂ ಪರಿಣಾಮದಲ್ಲಿ ಪ್ರಮುಖವೆನಿಸುತ್ತವೆ. ಆಕಾರದಲ್ಲಿ ವಾಮನನಂತಿದ್ದರೂ ಪರಿಣಾಮದಲ್ಲಿ ಗುಣಾತ್ಮಕ ಪರಿಮಾಣ ಪಡೆದಿವೆ ಎಂದು ಹೇಳಬಹುದು. ಪುಟ್ಟ ಪುಟ್ಟ ಮಾತುಗಳ ಒಂದೆರೆಡು ಸಾಲುಗಳೇ ದೊಡ್ಡ ಪರಿಣಾಮವನ್ನು ಸಾಧಿಸಿವೆ ಎಂದು ಗುರುತಿಸಬಹುದಾಗಿದೆ.

'ವಾರೆಂಟ್' ಹನಿಗವಿತೆಯಲ್ಲಿ ಹೆಣ್ಣನ್ನು ಮಾದಕ ವಸ್ತುವಿನ ಸಾಲಿಗೆ ಸೇರಿಸುವ ಭಾವದಲ್ಲಿ ರಸಿಕತೆಯ ಜೊತೆಗೆ ಗಂಡಸರಿಗಿರುವ ದೌರ್ಬಲ್ಯವನ್ನು ಪರೋಕ್ಷವಾಗಿ ಚುಚ್ಚುತ್ತಾರೆ. "ಚೆಲುವೆ ಮಾದಕ ವಸ್ತುಗಳ ನಿಷೇಧದ ಕಾಯಿದೆ ಪ್ರಕಾರ ಈ ಕೂಡಲೇ ನಿನ್ನನ್ನು ಬಂಧಿಸಬೇಕಾಗಿದೆ" ಎನ್ನುತ್ತಾರೆ.

'ತೀರ್ಪು' ಕವಿತೆಯಲ್ಲಿ ಹಾಸ್ಯದ ಮೂಲಕ ನ್ಯಾಯಾಂಗ ವ್ಯವಸ್ಥೆಯ ವಿಳಂಬ ಧೋರಣೆಯ ಬಗೆಗಿನ ವಿಡಂಬನೆಯಿದೆ. 'ಬಚಾವು' ಕವಿತೆ ಇಂದಿನ ಕಾಲಘಟ್ಟದಲ್ಲಿ ನಾಡಿನ ಸಂಪತ್ತನ್ನು ದೋಚಿದ ಭ್ರಷ್ಟರು, ಅಪ್ರಮಾಣಿಕರು ಹೇಗೆ ಕಾನೂನಿನ ಮುಷ್ಟಿಯಿಂದ ಹೊರ ಬರುತ್ತಾರೆ. ಎನ್ನುವುದನ್ನು ಹಾಸ್ಯದ ಮೂಲಕವೇ ಹರಿತವಾಗಿ ಕುಟುಕುತ್ತಾರೆ. ಇದರಲ್ಲಿ ಸದ್ಯದ ಸ್ಥಿತಿಯ ಬಗೆಗಿನ ವಿಡಂಬನೆಯಿದೆ. ಬಚಾವಾಗಲೂ ಸಾಧ್ಯವೇ ಗಾಳಕ್ಕೆ ಸಿಕ್ಕ ಮೀನು? ಯಾವ ಮಹಾ ಸಂಗತಿ ಸಿಕ್ಕರೆ ಜಾಮೀನು" ಎನ್ನುತ್ತಾರೆ.

'ಅರಕೆ' ಕವಿತೆಯಲ್ಲಿ ದೇಶದ ತುಂಬೆಲ್ಲ ಹರಡಿರುವ ಅನ್ಯಾಯ, ಅನೀತಿ, ಭ್ರಷ್ಟತೆ ತೊಳೆದು ಹಾಕಲು ಈಗ ಬೇಕಾದ ಅಗತ್ಯದ ಕೊರತೆ ಎಂದರೆ ಪೊರಕೆ ಎಂಬುದರಲ್ಲಿ ಸ್ಪಷ್ಟವಾಗಿದೆ.

ಅಪರಾಧಿಗಳು ಜೈಲಿನಲ್ಲಿ ಇರುವುದು ಕಾನೂನು, ತಪ್ಪಿತಸ್ಥರಲ್ಲದವರು ಜೈಲಿನಲ್ಲಿ ಇರುತ್ತಾರೆ ಎಂಬುದನ್ನು "ಜೈಲಿನಲ್ಲಿರುತ್ತಾರೆ ಅಪರಾಧ ಮಾಡಿದ ಮಂದಿ ಹಾಗೂ ಜೈಲಿನ ಸಿಬ್ಬಂದಿ' ಎನ್ನುವ ಮಾತುಗಳಲ್ಲಿ ವ್ಯಕ್ತಪಡಿಸುತ್ತಾರೆ. ಪಾಕಂಪೊಪ್ಪು ಗಳಂತಿರುವ ಹುಡುಗಿಯರ ಹಿಂದೆ ಹುಡುಗರು ದಂಡು ಇರುತ್ತೆ. ಅದನ್ನು ಎದರಿಸುವುದಕ್ಕೆ ನಿನಗೆ ಶಕ್ತಿ ಇದ್ದರೆ ಮಾತ್ರ ಎಂಬುದನ್ನು 'ದಂ ಇದ್ದರೆ ದಬಾಯ್ಸು' ಎನ್ನುವಲ್ಲಿನ ಪ್ರಾಸಬದ್ಧವಾದ ಹಾಸ್ಯ, ಓದುಗರಿಗೆ ಕಚಗುಳಿ ಕೊಡುತ್ತದೆ.

'ಗ್ಯಾಟ್' ಕವಿತೆಯಲ್ಲಿ ಗ್ಯಾಟ್ ಒಪ್ಪಂದವನ್ನು ಪ್ರಶ್ನಿಸುವ ತಾರ್ಕಿಕತೆ ಎಂದರೆ "ತೇಗಿರಿ ಯಾವ ಸೀಮೆ ಒಪ್ಪಂದ ; ನಮ್ಮ ಬೀಜಗಳೇನು ಅವರಪ್ಪಂದ" ಎನ್ನುವಲ್ಲಿನ ಎದೆಗಾರಿಕೆ, ಗಂಭೀರವಾಗಿವೆ. 'ಅರುಚಿ' ಕವಿತೆಯಲ್ಲಿ ಹೆಂಡತಿಯ ಅಡಿಗೆ ರುಚಿಯೊಂದಿಗೆ ಅವಳ ವಾಚಾಳಿತನವನ್ನು ಹಾಸ್ಯದ ಮೂಲಕ ಪರಿಚಯಿಸುತ್ತಾರೆ.

"ನನ್ನಾಕೆ ರುಚಿಯಾಗಿ ಅಡಿಗೆ ಮಾಡಿ ಬಡಿಸುತ್ತಾಳೆ. ಬಡಿಸುತ್ತಾ ಬಡಬಡಿಸುತ್ತಾಳೆ" ಎನ್ನುವಲ್ಲಿ ಊಟ ಬಡಿಸುತ್ತಲೆ ತಮ್ಮ ಬೇಡಿಕೆಗಳನ್ನು ಬಡಬಡಿಸುವ ಹೆಂಗಸರ ಗುಣದ ಪರಿಚಯವಿದೆ.

'ಹೆಣ್ಣು' ಕವಿತೆಯ ಮೂಲಕ ಕವಿ ಪ್ರಮುಖವಾದ ಚಿಂತನೆಯ ಬಗ್ಗೆ ದೃಷ್ಟಿ ಹರಿಸುತ್ತಾರೆ.

'ಹೆಣ್ಣು' ಕೆಲವು ನಂದನಗಳಲ್ಲಿ ನಂದಾದೀಪ, ಕೆಲವು ಕೊಂಪೆಗಳಲ್ಲಿ ಕೆಂಪು ದೀಪ, ಕೆಲವು ನರಕಗಳಲ್ಲಿ ಉರಿವ ಕೊಳ್ಳಿ" ಎಂಬ ಮಾತುಗಳಲ್ಲಿ ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣಿನ ದಾರುಣ ಬದುಕು, ವಿದ್ಯಾವಂತ, ಸುಶಿಕ್ಷಿತರಾಗಿ ಎಷ್ಟು ಎತ್ತರಕ್ಕೇರಿದರೂ ಆಕೆಯ ಬದುಕು ಪರಿಪೂರ್ಣವಾಗಿ ಸುಧಾರಿಸಿಲ್ಲ. ಒಂದೊಂದು ಕಡೆ ಅವಳ ಬದುಕು ಹೇಗಿದೆ ಎಂಬುದರ ಚಿತ್ರಣ ನೀಡುವ ಈ ಪುಟ್ಟ ಕವಿತೆಯ ಭಾವದ

ಅಭಿವ್ಯಕ್ತಿಯ ಪರಿಣಾಮ ದೊಡ್ಡದಾಗಿಯೂ ಇದೆ. ಎಂಬುದರಿಂದಾಗಿ ಈ ಕವಿತೆ ವಿಶಿಷ್ಟವಾಗಿವೆ. ಹಾಗೆಯೇ ಮಗುವಿನ ಮುಗ್ಧ ನಗು, ಅಳವನ್ನು ಕುರಿತ ಅವರ ಚಿಂತನೆ ಗಮನಾರ್ಹವಾಗಿದೆ.

'ಇದ್ದಾಳೆ' ಕವಿತೆಯಲ್ಲಿ ಹೆಂಡತಿಯ ಬಗೆಗಿನ ಅವರ ಕಲ್ಪನೆಯ ಚಿತ್ರಣದಲ್ಲಿ "ನನ್ನ ಮನೆಯಲ್ಲಿ ಕಾಮಧೇನುವಿಲ್ಲ. ಕಲ್ಪವೃಕ್ಷವಿಲ್ಲ. ರಂಭೆ, ಊರ್ವಶಿಯರಿಲ್ಲ. ಕಣಕಿ ಕಾಡುವ ಶತ್ರುವಿಲ್ಲ. ಅಂತರಂಗದ ಮಿತ್ರನಿಲ್ಲ. ದೆವ್ವವಿಲ್ಲ, ದೇವಿಯಿಲ್ಲ, ಕ್ರೀಡೆಯಿಲ್ಲ, ಪೀಡೆಯಿಲ್ಲ ಎಂದೆಲ್ಲ ನನಗನ್ನಿಸಿಯೇ ಇಲ್ಲ. ನನಗೆ ಹೆಂಡತಿ ಇದ್ದಾಳೆ "ಹೆಂಡತಿಯ ಸರ್ವ ಪಾತ್ರಗಳ ಸಂಗಮ ಅರ್ಥ ಅನರ್ಥಗಳಿಗೆಲ್ಲಾ ಆಕೆಯೇ ಸರ್ವತ್ರ ಸಾಧನ ಎನ್ನುವ ಹಾಸ್ಯಭರಿತ ಮಾತುಗಳು ಓದುಗರ ಮೆಚ್ಚುಗೆ ಗಳಿಸುತ್ತವೆ.

'ವಿರಹಿ' ಕವಿತೆ ಬಸವಣ್ಣನವರ ಆತ್ಮ-ದೇಹದ ಕಲ್ಪನೆಯನ್ನುಳ್ಳ ವಚನದ ಅರ್ಥದಲ್ಲಿ ಬರುವ ಕವಿತೆ. ಹೆಂಡತಿಯಿಲ್ಲದ ಗಂಡನ ಮಾನಸಿಕ ತಳಮಳ, ಗೃಹಿಣಿ ಇಲ್ಲದೆ ಮನೆಯ ಚಿತ್ರಣ ಎರಡನ್ನೂ ತರುವ "ಮನೆಯೊಳಗೆ ಮನೆಯೊಡತಿ ಇದ್ದಾಳೋ ಇಲ್ಲವೋ" ರಜದ ದಿನ ಹೊಸಿಲಲ್ಲಿ ಕಸ ಹರಡಿ ಮನೆ ತುಂಬ ರಜ ತುಂಬಿ ನಿಂತಲ್ಲ ನಿಲ್ಲ ಕೂತಲ್ಲಿ ಕೂಡಲಾರನೀಗ ಗಂಡ ಜಂಗಮದೇವ ! ಎನ್ನುವ ಮಾತಿನಲ್ಲಿ ವ್ಯಕ್ತವಾಗುವ ಹಾಸ್ಯ ಮನಸ್ಸಿಗೆ ಉಲ್ಲಾಸ ತರುತ್ತದೆ. ಜೊತೆಗೆ ಹೆಣ್ಣಿಲ್ಲದ ಮನೆಯ ವಾತಾವರಣದೊಂದಿಗೆ, ಮಹಿಳೆ ಮನೆಗೆ ಎಷ್ಟು ಮುಖ್ಯವೆಂದು ಸಾರುತ್ತಾರೆ.

'ಸಮಾನತೆ' ಕವಿತೆಯ ಸಾಲುಗಳಲ್ಲಿ ಕವಿ ಜೀವನದಲ್ಲಿ ಸಮಾನತೆ ಎನ್ನುವುದು ಕುರಿತು ಬಡವ –ಶ್ರೀಮಂತ ನಡುವಿನ ಸಮಾನತೆ ಯಾವಾಗ ಸಾಧ್ಯ ಎಂಬುದನ್ನು "ಬಡವರ ಮಕ್ಕಳು ಮೂಟೆ ಹೊರುತ್ತಾರೆ. ಕೂಲಿಗೆ ; ಶ್ರೀಮಂತರ ಮಕ್ಕಳೂ ಮೂಟೆ ಹೊರುತ್ತಾರೆ ಸ್ಕೂಲಿಗೆ" ಎನ್ನುವ ಸಾಲುಗಳಲ್ಲಿ ಹೇಳುತ್ತಾರೆ.

ಲಕ್ಷ್ಮಣ್ ರಾವ್ ಅವರು ತಮ್ಮ ಹನಿಗವಿತೆಗಳಲ್ಲಿ ಸಣ್ಣಪುಟ್ಟ ಪರಿಚಿತ ವಸ್ತು ವಿಷಯದ ಮೂಲ ಹಾಸ್ಯವನ್ನು ವ್ಯಂಗ್ಯ ವಿಡಂಬನೆಯನ್ನು ಅಭಿವ್ಯಕ್ತಿಸುತ್ತಾ ಸಾಮಾಜಿಕ ಕಳಕಳಿಯನ್ನು ಒಂದೆರೆಡು ಸಾಲುಗಳಲ್ಲಿ ವ್ಯಕ್ತಪಡಿಸಿದ್ದಾರೆ. ತುಂಟತನದಲ್ಲೆ ಹಾಸ್ಯದ ಲೇಪವನ್ನು ಹಾಕಿ, ಕೇವಲ ಖುಷಿ ಕೊಡುವುದಷ್ಟನ್ನು ಮಾತ್ರ ಅವರ ಹನಿಗವಿತೆಗಳು ಹೊಂದಿಲ್ಲ. ಅದರೊಂದಿಗೆ ಕಾವ್ಯಾಂಶವನ್ನು ಹೊಂದಿರುವುದು ಮುಖ್ಯವೆನಿಸುತ್ತದೆ. "ಗದ್ದೆಯ ಒದ್ದೆ ನೆಲದಲ್ಲಿ ಬಗ್ಗೆ ಕಳೆ ಹೆಕ್ಕುತ್ತಿರುವ ಬಣ್ಣ ಬಣ್ಣದ ಕೊಕ್ಕರೆಯ ಸಾಲು" ಎನ್ನುವಲ್ಲಿ ವ್ಯಕ್ತವಾಗಿರುವ ಕಾವ್ಯಾತ್ಮಕತೆಯು ವಿಶಿಷ್ಟವಾಗಿದ್ದು, ಹನಿಗವಿತೆಗಳು ಹೆಚ್ಚಿನ ಜನಪ್ರೀತಿಗಳಿಸಿವೆ ಎಂದು ಹೇಳಬಹುದು. ಚಿಕ್ಕ ಚಿಕ್ಕ ಸಾಲುಗಳಲ್ಲಿ, ಪ್ರಾಸಬದ್ಧವಾದ ಪದಗಳ ಮೂಲಕ ರಸಾನಂದವನ್ನು ತರುತ್ತದೆ. ಹಾಸ್ಯದ ಮೂಲಕವೇ ವರ್ತಮಾನದ ಬದುಕಿಗೆ ಹತ್ತಿರವಾದ ಅವರ ಚಿಂತನೆ, ಜನಪರ, ಜೀವಪರವಾದ ಕಾಳಜಿಗಳು ಅಸ್ಥೆಗಳಲ್ಲಿ ಪುಟ್ಟ ಪುಟ್ಟ ಸಾಲುಗಳಲ್ಲಿ ಸಾಧಿಸಿದ್ದಾರೆ. ಎಂದು ಹೇಳಬಹುದು. 'ನೀತಿ' ಕವಿತೆಯಲ್ಲಿ "ಏನಪ್ಪ ಮಹಾಭಾರತದ ನೀತಿ" ರಾಜ ಕುರುಡನಾದರೆ ಎಲ್ಲಾ ಫಜೀತಿ" ಎಂದು ಹೇಳುತ್ತಾ ದೃತರಾಷ್ಟ್ರನ ಕುರುಡುತನದಿಂದಾಗಿ ಮಹಾಭಾರತ, ಅದರಿಂದಾದ

ಅನಾಹುತವನ್ನು ಹೇಳುವ ಮೂಲಕ ವರ್ತಮಾನದ ಸ್ಥಿತಿಯಲ್ಲಿ ರಾಜಕಾರಣಿಗಳ ಕುರುಡುತನದಿಂದಾಗಿ ಪ್ರಜೆಗಳ ಸ್ಥಿತಿ ಶೋಚನೀಯವಾಗಿದೆ. ಎನ್ನುವ ವಿಡಂಬನೆಯಿದೆ. 'ಕರಾಟೆ', ಔಟ್, 'ವಾರೆಂಟ್' ಕವಿತೆಗಳಲ್ಲಿನ ಭಾವವೆಂದರೆ ಹೆಣ್ಣಿನ ಮಾದಕತೆ ಗಂಡಸರ ದೌರ್ಬಲ್ಯದ ಬಗ್ಗೆ ಹೇಳುತ್ತವೆ. 'ಔಟ್' ಕವಿತೆಯಲ್ಲಿ ಯಾವ ಚೆಂಡಿಗೂ ಜಗ್ಗದೆ ಎಂಥ ಬೌನ್ಸರಿಗೂ ಕುಗ್ಗದೆ ಪ್ರಚಂಡ ಸೆಂಚುರಿ ಬಾರಿಸುವ ಔಟಾಗದೆ ಉಳಿದ, ಯಾರೋ ಪೋರಿ ಓಡೋಡಿ ಬಂದು ಧೀರನ ಬಿಗಿದಪ್ಪಿ ಲೊಚ ಲೊಚ ಲೊಚ ಮುತ್ತಿಟ್ಟಳು ತಟ್ಟನೆ ಔಟಾದ ' ಎನ್ನುವಲ್ಲಿ "ಚೆಲುವೆಯ ಚಂಚಲ ಕಣ್ಣ ಕರಾಟೇ ಎಂಥೆಂಥ ಬ್ಲಾಕ್ ಬೆಲ್ಟ್ ಧೀರರೂ ಹೊಡೆದರೂ ಅವಳ ಮುಂದೆ ಲಗಾಟೆ !" ಇಲ್ಲಿ ವ್ಯಕ್ತವಾಗುವ ಭಾವ ಯಾವ ಮೋಹದಿಂದ ಹೊರಬರಬಹುದಾದರೂ ಹೆಣ್ಣಿನ ಮಾಯೆಯಿಂದ ಬಿಡಿಸಿಕೊಳ್ಳಲಾಗದ ಗಂಡಸರ ದೌರ್ಬಲ್ಯದ ಚಿತ್ರಣ ತರುತ್ತಾರೆ.

"ಯಾವಾಗ" ಕವಿತೆಯಲ್ಲಿ "ಸ್ವಾರ್ಥ ಸಾಧನೆಯೇ ಪರಮ ಗುರಿಯೆಂದು ಸಂಚಿರುವ ಪರಸ್ತ್ರೀ ಪರಧನ, ಆಸ್ತಿಯ ವ್ಯಾಮೋಹದಲ್ಲಿ ಸಿಲುಕಿರುವ ಮನುಷ್ಯರಿಗೆ ಇನ್ನು ಸಾಕು ಅನ್ನಿಸುವುದು ಯಾವಾಗ ? ಬಹುಶಃ 'ನಾನು' ಇನ್ನಿಲ್ಲವಾದಾಗ' ಎಂದು ಹೇಳುವ ಮಾತಿನಲ್ಲಿ ನಾನು ಎಂಬ ಮಮಕಾರದಿಂದ ಹೊರಬಂದಾನಲೇ ಮನುಷ್ಯನಿಗೆ ಸಾಕು ಎನ್ನಿಸಬಹುದೇ ಹೊರತು ಉಳಿದಂತೆ ಸಾಕೆನ್ನಿಸುವುದೇ ಇಲ್ಲ ಎನ್ನುವ ಸರಳ ಮಾತುಗಳೇ ಓದುಗರನ್ನು ಹತ್ತಿರಕ್ಕೆ ಸೆಳೆಯುತ್ತದೆ.

'ಕೊಡಲಿ' ಎಂಬ ಪದ ಬಳಕೆಯು ಮೂಲ ಪ್ರಕೃತಿಯ ಮೇಲಿನ ಮಾನವನ ಧಾಳಿಯನ್ನು ಕುರಿತು ಹೇಳುತ್ತಾರೆ. ಪರಿಸರ ರಕ್ಷಣೆಗಾಗಿ ಮೊರೆಯಿಡುವ ಅವರ ಮಾತುಗಳಲ್ಲಿ ಹಾಸ್ಯದೊಡನೆ ಗಂಭೀರ ಚಿಂತನೆಯ ಅಂಶ ವ್ಯಕ್ತವಾಗುತ್ತದೆ. ಪ್ರಕೃತಿ ನಾಶವಾದರೆ ಮನುಷ್ಯನ ನಾಶವು ಖಚಿತ ಎಂಬುದನ್ನು ಕವಿ ಹೇಳುತ್ತಾ ಪರಿಸರ ರಕ್ಷಣೆಗಾಗಿ ದೇವರು ಮನುಷ್ಯನಿಗೆ ಬುದ್ಧಿ ಕೊಡಲಿ ಎನ್ನುವ ಮಾತುಗಳು ವ್ಯಕ್ತವಾಗುವುದು. "ಸ್ವಾರ್ಥಿ ಕಟುಕ ಮನುಜನಿಗೆ ದೇವರು ಬುದ್ಧಿಯು ಕೊಡಲಿ" ಎಂದು ಹಸಿರು ಕೈಗಳನ್ನೆತ್ತಿ ಪ್ರಾರ್ಥಿಸುತ್ತಿರುವ ಮರದ ಬುಡಕ್ಕೆ ಕೊಡಲಿ" ಎನ್ನುವಲ್ಲಿನ 'ಕೊಡಲಿ' ಪದದ ದ್ವಂದ್ವಾರ್ಥ ಓದುಗರಿಗೆ ಖುಷಿಕೊಡುವ ಜೊತೆಗೆ ಚಿಂತನೆಯ ಕಡೆಗೂ ಎಳೆಯುವುದನ್ನು ಕಾಣಬಹದು.

'ದೇವರು' ಕವಿತೆಯಲ್ಲಿ ಇಂದು ಯಾವ ಮಟ್ಟಕ್ಕೆ ಜನರು ದೇವರ ಪೂಜೆ ಮತ್ತು ದೇವರ ನೆಲೆಯನ್ನು ಕುರಿತು ಅವರ ಯೋಚನೆ ಜೊತೆಗೆ, ದೇವರಿಗೆ ನೀಡುತ್ತಿರುವ ನೈವೇದ್ಯವು ಇಂದು ಯಾವ ರೀತಿಯಾಗಿವೆ ಎಂಬುದನ್ನು ಕುರಿತ ವಿಡಂಬನೆಯನ್ನು ಕಾಣಬಹುದು. ದೇವರ ಹೆಸರಿನಲ್ಲಿ ನಡೆಯುತ್ತಿರುವ ಕೋಮುಗಲಬೆ ಇಂದು ಯಾವ ಮಟ್ಟಕ್ಕೆ ಹೋಗಿದೆ ಎಂದರೆ ದೇವರನ್ನು ಕೊಡಿಡುವ ಮಟ್ಟ ತಲುಪಿದೆ ಎನ್ನುವುದರ ವ್ಯಂಗ್ಯವನ್ನು ಕಾಣಬಹದು. "ಏನೀ ಚೋದ್ಯ ? ಇಂದು ದೇವರಿಗೆ ಗನ್ನು ಗ್ರೇನೇಡಿನ ನೈವೇದ್ಯ ಎಂಬ ಮಾತುಗಳಲ್ಲಿ ವ್ಯಕ್ತ ಪಡಿಸಿದ್ದಾರೆ.

ಮಗಳ ಕನ್ಯಾಸೆರ ಬಿಡಿಸಿಕೊಳ್ಳಲು ತಂದೆ ದೇವರಿಗೆ ಮೊರೆಯಿಡುವ ಕವನದಲ್ಲಿ ವ್ಯಕ್ತವಾಗಿರುವ ಇಂದಿನ ಸಾಮಾಜಿಕ ಅನಿಷ್ಟ ಪದ್ಧತಿಯಾದ ವರದಕ್ಷಿಣೆ ಬಗ್ಗೆ ಹಾಗೆಯೇ ವಿದ್ಯಾವಂತರ ಸಂಖ್ಯೆ ಹೆಚ್ಚಾದರೂ ಕಾನೂನಿನ ಒಡಿತವಿದ್ದರೂ ಹೆಣ್ಣು ಮಕ್ಕಳ ಮದುವೆ ಎಷ್ಟು ಕಷ್ಟವಾಗಿದೆ ಎಂಬುದನ್ನು ಹೇಳುವ "ಕೂಡಿ ಕೊಡಗ ಹೆತ್ತ ಹೆಗ್ಗಣ್ಣ ಮಾಡಬೇಕಿದೆ ಲಗ್ಗಣ, ಬೇಡುತಿರುವೆನೋ ನೀಡೋ ಗಂಡನ್ನೊಂದ ಗೋವಿಂದಾ ನೋಡ ಬಂದವರೋಡಿ ಹೋದರು ನೀಡುವೆನು ಸಾವಿರಗಳೆಂದರೂ ಕಾಡುತಿರುವಳು ಪಾರುಗಾಣಿಸೋ ನನ್ನ ಸ್ನಿವಳಿಂದ" ಎನ್ನುವಲ್ಲಿ ಹಣವಿದ್ದರೆ ಸಾಲದು ಸೌಂದರ್ಯವು ಬೇಕು, ಅದಕ್ಕೆ ಇಂದು ಹೆಚ್ಚಿಗೆ ಬೆಲೆ ಕೊಡೋ ಗಂಡುಗಳ ಬಗ್ಗೆ ಕಟಕಿಯಾಡುವುದನ್ನು ಇಲ್ಲಿ ಕಾಣಬಹುದಾಗಿದೆ.

ಇಂದು ಮನುಷ್ಯ ಮಾಡುವ ತನ್ನ ಜೀವನದ ಎಲ್ಲ ಘಟನೆಗಳಿಗೆ ವಿಧಿ ಹಣೆ ಬರಹ ಅದೃಷ್ಟವೆಂದಲ್ಲ ಹಣೆ ಪಟ್ಟಿ ಹಚ್ಚಿ ತನ್ನ ತಪ್ಪನ್ನೆಲ್ಲಾ ಮರೆ ಮಾಡಿ ತಾನು ಸುಲಭವಾಗಿ ಜಾರಿಕೊಳ್ಳಲು ದೇವರನ್ನು ಹೇಗೆ ಬಳಸಿಕೊಂಡಿದ್ದೇನೆ ಎನ್ನುವುದನ್ನು "ಮನುಷ್ಯ ಕದ್ದ ಮೊಸರನ್ನ ತಿನ್ನುವ ಕೋತಿ" ಎನ್ನುವ ಮಾತಿನಲ್ಲಿ ಮನುಷ್ಯನೆಲ್ಲಾ ತಪ್ಪು ಕ್ರೂರತನಗಳಿಂದ ತಪ್ಪಿಸಿಕೊಳ್ಳಲು ದೇವರ ಬಳಕೆ ಹೇಗಾಗಿದೆ ಎಂಬುದರ ಇಂದಿನ ಸಂದರ್ಭವನ್ನು ಕುರಿತ ವ್ಯಂಗ್ಯವನ್ನು ಇಲ್ಲಿ ಕಾಣಬಹುದಾಗಿದೆ.

ಬಿ.ಆರ್. ಲಕ್ಷ್ಮಣ್‌ರಾವ್ ಅವರು 'ಚಿಟ್ಟೆ' ಎಂಬ ಹನಿ ಕವಿತೆಯಲ್ಲಿ ಬರುವ "ಪ್ರಿಯೆ", ಅಮೃತಕ್ಕೆ ಹಾರುವ ಗರುಡ ಬೇಂದ್ರೆ, ಅಡಿಗ, ಪಾಬ್ಲೋ ನೆರುಡ, ನಾನೋ ನಿನ್ನಂಥ ಸುಂದರ ಪುಷ್ಪಕ್ಕೆ ಹಾರುವ ಚಿಟ್ಟೆ, ಕ್ಷಣಿಕ ಲೊಳಲೊಟ್ಟೆ ಆದರೂ ಸದ್ಯಕ್ಕೆ ವ್ಯಕ್ತಮದ್ಯಕ್ಕೆ ಸಾಕು ಒಂದು ಬಿಂದು ಮಕರಂದ ಆ ಆನಂದ' ಎಂದಿದ್ದಾರೆ. ಇದು ಅವರ ಒಟ್ಟು ಕವಿತೆಯನ್ನು ಕುರಿತು ಹೇಳುವ ಮಾತುಗಳಾಗಿವೆ ಅವರ ವ್ಯಕ್ತಿತ್ವ ಮತ್ತು ಕಾವ್ಯ ವ್ಯಕ್ತಿತ್ವವನ್ನು ಕುರಿತ ಮಾತುಗಳು. ತಮ್ಮ ಕವಿತೆಗಳಿಗಿರುವ ಪರಿಧಿಯನ್ನು ತಿಳಿಸುತ್ತವೆ. ಅಮೃತಕ್ಕೆ ಹಾರುವ ಗರುಡನಲ್ಲ ಸುಂದರ ಪುಷ್ಪಕ್ಕೆ ಹಾರುವ ಚಿಟ್ಟೆಯಾಗಿಯೇ ಮನೆ ಮನೆಯ ಮನಸ್ಸುಗಳಿಗೆ ಇದು ಪ್ರಿಯವಾಗುವುದು ಅವರ ಸರಳತೆಯಿಂದಲೇ ಎಂಬುದು ಸ್ಪಷ್ಟವಾಗುತ್ತದೆ. ಕವಿ ಕಾವ್ಯ ಮನೆಯ ಬೀಗ ತೆಗೆಯುವ ಕೀಲಿ ಕೈ ಯಾಗುವುದು ಒಂದು ಸಾಲು. ಒಂದು ಪದ, ಒಂದು ಮಂತ್ರ ಎಂಬಂತೆ ಅವರ ಹನಿಗವಿತೆಗಳು ಸರಳವಾದ ಚಿಕ್ಕ ಚಿಕ್ಕ ಸಾಲುಗಳಲ್ಲೇ ವ್ಯಕ್ತವಾಗುವ ಚಿಂತನೆಗಳು ವಿಸ್ತಾರತೆ ಪಡೆಯುತ್ತವೆ. ಇವರ ಹನಿ ಕವಿತೆಗಳಿಗೆ ವಸ್ತು ವಿಷಯಗಳು ಸಾಮಾನ್ಯ ವಾದವುಗಳಾಗಿರುವಂತೆಯೇ ವಿಶಿಷ್ಟವಾದವುಗಳಾಗಿ ಆ ಮೂಲಕ ವ್ಯಕ್ತಿಗತ ಚಿಂತನೆಯ ಜೊತೆಗೆ ಸಾಮಾಜಿಕತೆಯ ಕಡೆಗೆ ಹೊರಳಿರುವುದನ್ನು ಕಾಣಬಹದು. ವ್ಯವಸ್ಥೆಯ ಬಗ್ಗೆ, ಬದುಕಿನ ಬಗ್ಗೆ, ಹೇಳುತ್ತಾ ಅದರಲ್ಲಿನ ಸಾಮಾಜಿಕವಾದ, ವ್ಯಕ್ತವಾಗುವ ಹಾಸ್ಯಭರಿತ ಸಾಲುಗಳಲ್ಲಿ ಅವರು ಹೇಳುವ ವಿಷಯಗಳು ಆ ಚಿಕ್ಕದಾದ ಸಾಲುಗಳೆಲ್ಲೆ ತೆರೆದಿಡುವ ಬದುಕು ಅದರ ಮೂಲಕ ಸಾಗುವ ಚಿಂತನಗಳೇ ಆನಂದದ ಜೊತೆಗೆ ಓದುಗರನ್ನು ಚಿಂತನೆಗೆ ಕೆಡವುತ್ತವೆ. ಉದಾಹರಣೆಗೆ ಹೇಳುವುದಾದರೆ "ನಾನು

ಅವಳಿಗೆ ನನ್ನಿ ಹೃದಯ ಕೊಟ್ಟೆ ಅವಳು ಕೈ ಕೊಟ್ಟಳು" ಎನ್ನುವಲ್ಲಿ ವಿನಿಮಯವಾಗುವ ವಿಷಯದ ಬಗ್ಗೆ ಪ್ರಸ್ತುತ ಸಮಾಜದ ಬಗ್ಗೆ ವ್ಯಕ್ತವಾಗುವ ನೋಟ ಎರಡನ್ನು ಕಾಣಬಹುದು.

"ಕಪಿಲ್ ದೇವನ ಜುಟ್ಟು ಗೊತ್ತೆ ! ಅವರ ಗುಟ್ಟು ? ಜುಟ್ಟಿನ ಕೂದಲು ಒಟ್ಟು ಅವನು ಗಳಿಸಿದ ವಿಕೆಟ್ಟು"

ಕೆಲವರು ಚಿತ್ತಲಾದರೆ ಕಣ್ಣು ಧನ್ಯ, ಕೆಲವರು ಚಿತ್ತಲಾಗದಿರುವುದು ನಿಮ್ಮ ಪುಣ್ಯ" ಎನ್ನುವ ಮಾತುಗಳಲ್ಲಿನ ವ್ಯಂಗ್ಯದಲ್ಲಿ ಸಾಧಕರ ಜೀವನ ಕುರಿತು ಹೇಳುವ ಮಾತು. ಅಪ್ರಮಾಣಿಕರ ಬದುಕಿನ ಕಥೆ ಹೊರಬರದಿದ್ದರೆ ಸಾಕೆಂಬ ರೀತಿಯಲ್ಲಿ ವ್ಯಕ್ತವಾಗುತ್ತದೆ, ಆಸ್ಪತ್ರೆಗಳಲ್ಲಿ ಅರಿವಳಿಕೆ ; ಕಾಲೇಜುಗಳಲ್ಲಿ ತಿಳುವಳಿಕೆ, "ಹಾವನ್ನು ಕೈಯಲ್ಲಿ ಹಿಡಿದ ತಬ್ಬಿಬ್ಬು ಮಂಗ, ಕಾಂಗ್ರೆಸ್ ಬೆಂಬಲ ಪಡೆದ ಸಂಯುಕ್ತ ರಂಗ" ಪಟೇಲರಿಗೆ ಬಲು ಪ್ರಿಯವಂತೆ ಮಾಸಿನಿ ಮದಿಲೆ ; ನನಗೂ ಅಷ್ಟೇ ಎನ್ನಲೇ ? ಲಟ್ಟಣಿಗೆ ಯಿದೆ ಎದುರೇ ? "ಸಾಕಾಗಿ ಹೆಂಡತಿಯ ಗಂಡಸ್ತಿಕೆ, ಗಂಡ ಶುರು ಮಾಡಿದ ಹೆಂಡಸ್ತಿಕೆ" "ಮಾತು ತನ್ನ ನಂಬಿಕೆ ಕಳೆದುಕೊಂಡಿರುವ ಇಂದು ಪ್ರತಿ ದಿನವು ಏಪ್ರಿಲ್ ಒಂದು" "ನನ್ನ ಗಡಿಯಾರಕ್ಕೆ ಹನ್ನೆರಡು ಕಣ್ಣು ಕತ್ತಲಲ್ಲೂ ಮಿರಿ ಮಿರಿ ಮಿರುಗುವ ಅನಿಮೇಷ ಕಣ್ಣು ಎರಡು ಕಂಬಂದ ಬಾಹುಗಳು ಸಿಕ್ಕಿದ್ದನ್ನೆಲ್ಲಾ ಬಾಚಿ ಬಾಚಿ ಮುಕ್ಕುತ್ತಲೇ ಇದೆ. ಎಲ್ಲ ಜೀರ್ಣೋಭವ ! "ಬಟ್ಟಂ ಬಯಲಲ್ಲಿ ನನ್ನ ಬತ್ತಲೆಗೊಳಿಸುತ್ತಿದ್ದಾನೆ ಈ ಹೀನ ಹೇಮಂತ ! ನನ್ನ ಮಾನ ಕಾಪಾಡೋ, ಹೇ ವಸಂತ ಮೊರೆಯಿಟ್ಟಳು ಪ್ರಕೃತಿ ನೀರರೆ ಅನೂ ಒದಗಿ ಬಂತವಳಿಗೆ ಧಾರೆ ಧಾರೆ ಹೊಸ ಹಸಿರು ಸೀರೆ".

"ಬೆಲೆಗಳೆರುತ್ತಿದೆ ನೋಡಿದಿಯಾ ? ಬಡವರ ಬಾಗಿದ ಬೆನ್ನನು ಮೆಟ್ಟು ನಡುವರ್ಗದ ಸುಡು ನೆತ್ತಿಯ ಮೆಟ್ಟಿ ಸಿರಿವಂತರ ಬೀಗಿದ ಎದೆ ತಟ್ಟಿ ಬೆಲೆಗಳೆರುತಿದೆ ನೋಡಿದೆಯಾ ? "ಅಂಗಿ ಉಂಗಿ ಕೇರಳದಲ್ಲಿ ಉಭಯ ಲಿಂಗಿ" ಖಾಂಡವ ದಹನ ಏನು ಮಹಾ ? ನಿನಗೆ ಅಸಾಧ್ಯವಲ್ಲ ದಂಡ ಕಾರಣ್ಯ ಸಹ ! ಆದರೆ ಪ್ರಚಂಡ ಅಗ್ನಿಯೇ ! ನಿನಗೆ ದಂ ಇದ್ದರೆ ಕಬಳಿಸು ನೋಡೋಣಾ ಈ ಪಾರ್ಥನಿಯಂ". "ಪ್ರೇಮ ಅನ್ನೋ ಪದ ಇರುತ್ತೆ ಸದಾ ಕಾಲಕ್ಕೆ ; ಅರ್ಥ ಬದಲಾಗ್ತ ಇರುತ್ತೆ ಕಾಲಕಾಲಕ್ಕೆ ಹೀಗೆ ವ್ಯಕ್ತವಾಗುವ ಅವರ ಕವಿತೆಗಳ ಸಾಲುಗಳಲ್ಲಿನ ವ್ಯಂಗ್ಯ, ವಿಷಾದ, ವಿಡಂಬನೆಗಳು, ಹಾಸ್ಯದ ಮೂಲಕವೇ ವ್ಯವಸ್ಥೆಯ ಬಗ್ಗೆ ವ್ಯಕ್ತಿಗಳ ಬಗ್ಗೆ ಬದುಕಿನ ರೀತಿಯ ಬಗ್ಗೆ ಗಂಭೀರ ಚಿಂತನೆಯನ್ನುಂಟು ಮಾಡುತ್ತದೆ. ಬದುಕಿನ ಎಲ್ಲಾ ಪದರಗಳ ಕಡೆ ಗಮನ ಹರಿಸುತ್ತಾ ಸಾಮಾಜಿಕ ವ್ಯವಸ್ಥೆಯ ಎಲ್ಲಾ ಮಜಲುಗಳನ್ನು ಬಿಚ್ಚಿ ತೋರಿಸುವ, ವಿಡಂಬಿಸುವ ವಿಷಾದ ವ್ಯಂಗ್ಯವನ್ನು ಒಳಗೊಂಡಿರುವ ಅವರ ಈ ಹನಿಗವಿತೆಗಳು ಪರಿಣಾಮದಲ್ಲಿ ಮಹತ್ತಾದುದನ್ನು ತರುತ್ತವೆ ಎಂದು ಗುರುತಿಸಬಹುದು. ಪದ ಬಳಕೆ, ಪ್ರಾಸ, ದ್ವಂದಾರ್ಥಗಳನ್ನು ಸರಳವಾದ ಭಾಷೆಯಲ್ಲಿ ಚೇಷ್ಟೆಯ ಮಾತುಗಳಲ್ಲೇ ವಿಷಯ ಮಂಡಿಸುವ ಅವರ ಶೈಲಿಯಿಂದಾಗಿಯೇ ಓದುಗರಿಗೆ ಕಚಗುಳಿಯ ನಗುವನ್ನು ಉಂಟುಮಾಡುತ್ತಾ ಕೇವಲ ನಗುವಿನಲ್ಲೇ ಮೈ

ಮರೆಯುವಂತೆ ಮಾಡದೆ ಗಂಭೀರತೆಯೆಡೆಗೂ ಕರೆದೊಯ್ಯುವ ಪ್ರಯತ್ನವನ್ನು ಈ ಹಣಿಗವಿತೆಗಳು ಮಾಡಿವೆ ಎಂಬುದನ್ನು ಗುರುತಿಸಬಹುದು.

ಬಿ.ಆರ್. ಲಕ್ಷ್ಮಣ್‌ರಾವ್ ಅವರು ತಮ್ಮ ಕವಿತೆಗಳಲ್ಲಿ ವ್ಯಂಗ್ಯ ವಿನೋದ, ವಿಷಾದದ ಮೂಲಕವೂ ಕಾವ್ಯ ಪ್ರಿಯರನ್ನು ಗಳಿಸಿಕೊಂಡಿದ್ದಾರೆ. ಅಲ್ಲಿ ವ್ಯಕ್ತವಾಗುವ ವ್ಯಂಗ್ಯ, ವಿಡಂಬನೆ ವಿಷಾದ ಭ್ರಮ ನಿರಶನಗಳಲ್ಲಿ ವ್ಯವಸ್ಥೆಯನ್ನು ಕುರಿತ ವಿಷಾಧವನ್ನಷ್ಟೆ ಕಾಣಬಹುದು. ಇಲ್ಲಿ ಕವಿ ಬದುಕಿನ ಎಲ್ಲ ಮಗ್ಗಲುಗಳನ್ನು ತಟ್ಟುವ ಮುಟ್ಟುವ ಅನುಭವಿಸುವ ಕಾತರ, ಎಲ್ಲವೂ ಇದೆ. ಬದುಕಿನ ಬಗೆಗಿನ ಕಾಳಜಿ ಜೀವಪರ ಚಿಂತನೆಯಿಂದಾಗಿ ವಿಷಾದದಲ್ಲೇ ಬದುಕನ್ನು ಸರಳಿಸುವುದಿಲ್ಲ. ವ್ಯವಸ್ಥೆಯ ಬಗೆಗಿನ ವಿಡಂಬನೆಯಿದೆ. ಆಕ್ರೋಷ ಆವೇಶ ಸಿಟ್ಟು ಸೆಡವುಗಳಾಗಲಿ ಅದರಲ್ಲಿ ಬರುವುದಿಲ್ಲ. ಸೌಮ್ಯಯುತವಾದ ಸಂಯಮ ಪೂರ್ಣವಾದ ಭಾವದಲ್ಲೇ ಬದುಕನ್ನು ಕುರಿತು, ವ್ಯವಸ್ಥೆಯ ಬಗ್ಗೆ, ವ್ಯಂಗ್ಯ ವಿಷಾದವನ್ನಷ್ಟೆ ತರುತ್ತಾರೆ. ಇದು ಅವರ ಧೋರಣೆ ಎನ್ನುವುದು ಸ್ಪಷ್ಟವಾಗುತ್ತದೆ. ಬಿ.ಆರ್. ಲಕ್ಷ್ಮಣ್‌ರಾವ್ ಅವರು ವ್ಯಯುಕ್ತಿಕತೆಯಿಂದ ಸಾಮಾಜಿಕತೆಯ ಕಡೆಗೆ ಹೊರಳುವಾಗ ತಮ್ಮ ಕವಿತೆಗಳಲ್ಲಿ ವಿಷಾದ, ವ್ಯಂಗ್ಯ, ವಿಡಂಬನೆ ವಕ್ರೋಕ್ತಿಗಳನ್ನು ತಂದಿದ್ದಾರೆಂದು ಗುರುತಿಸಬಹುದು. ಆ ಮೂಲಕ ಅವರ ಕವಿತೆಗಳು ಓದುಗರ ಮೆಚ್ಚುಗೆ ಗಳಿಸಿಕೊಂಡಿವೆ. ಕವಿ ತಮ್ಮ ಅನುಭವದ ಪರಿಧಿಯೊಳಗೆ ತಾವು ಕಾಣುವ ಅನುಭವದ ಮೂಲಕ ಶೋಧಿಸುತ್ತಾ ಬರೆಯುವ ಅವರ ಕಾವ್ಯ ಮಾರ್ಗದಲ್ಲಿ ವ್ಯಕ್ತವಾಗುವ ಅಂಶಗಳು ಓದುಗರ ಅನುಮಭವಕ್ಕೆ ಸುಲಭವಾಗಿ ಅರ್ಥವಾಗುವ ಮೂಲಕ ಜನಪ್ರಿಯತೆ ಗಳಿಸಲು ಸಾಧ್ಯವಾಗಿದೆ ಎಂದು ಹೇಳಬಹುದು.

ಕೇವಲ ಹಾಸ್ಯದ ಮೂಲಕ ನಗು ತರುವುದು ಮಾತ್ರವಲ್ಲ. ಅವರ ಕವಿತೆಗಳಲ್ಲಿನ ಸಾಹಿತ್ಯದ ಆಯಾಮಗಳು ಓದುಗರನ್ನು ಆಕರ್ಷಿಸುತ್ತದೆ ಎಂಬುದು ಗಮನಾರ್ಹವಾದ ವಿಷಯವಾಗಿದೆ. ತುಂಟತನದ ಮೂಲಕ ಗಂಭೀರತೆಯನ್ನು ಸಾಧಿಸಿದ್ದಾರೆ ಎಂದು ಹೇಳಬಹುದು. ಒಟ್ಟಿನಲ್ಲಿ ಬಿ.ಆರ್. ಲಕ್ಷ್ಮಣ್‌ರಾವ್ ಅವರ ಕಾವ್ಯ ತನ್ನ ಶಬ್ದ ಲಾಲಿತ್ಯದಿಂದ ಸಾಮಾನ್ಯ ಓದುಗರನ್ನು ಹೇಗೆ ಆಕರ್ಷಿಸುತ್ತವೆಯೋ ಹಾಗೆಯೇ ಆ ಕವಿತೆಗಳಲ್ಲಿ ಹೊರ ಹೊಮ್ಮುವ ಭಾವದ ಮೂಲಕ ಗಂಭೀರ ಓದುಗರನ್ನು ತನ್ನ ಕಡೆಗೆ ಸೆಳೆಯುತ್ತದೆ ಎಂದು ಹೇಳಬಹುದು.

**೪.೨ ಜನಪ್ರಿಯತೆಯ ಅಂಶಗಳಾಗಿ ಪ್ರೀತಿ ಪ್ರೇಮ ಪ್ರಣಯ ಇತ್ಯಾದಿ :**

ಸಾಹಿತ್ಯ ಜನಪ್ರಿಯವಾಗುವುದು ಸಹಜ, ಸಾಹಿತ್ಯ ಮತ್ತು ಜನಪ್ರಿಯತೆಯ ನಡುವೆ ಅಂತಹ ಸಂಬಂಧವಿದೆ. ಅಂದಿನಿಂದ ಇಂದಿನವರೆಗಿನ ಸಾಹಿತ್ಯದ ಎಲ್ಲಾ ಪಂಥ ಪ್ರಕಾರಗಳಿಗೂ ಈ ಮಾತು ಅನ್ವಯವಾಗುತ್ತವೆ. ಕಾವ್ಯ ಜನಪ್ರಿಯವಾಗಲು ಹಲವು ಅಂಶಗಳು ಕಾರಣವಾಗುತ್ತವೆ. ಜನಪ್ರಿಯತೆಗೆ ನಿರ್ದಿಷ್ಟವಾದ ಕಾರಣಗಳೇನು ಎಂದು ಖಚಿತವಾಗಿ ಹೇಳಲು ಬರುವುದಿಲ್ಲ. ಆದರೂ ಸಾಮಾನ್ಯವಾಗಿ ಕಾವ್ಯ ಜನಪ್ರಿಯವಾಗಲು ಕೆಲವು ಅಂಶಗಳು ಕಾರಣವೆಂದು ಗುರುತಿಸಿಕೊಳ್ಳಲಾಗಿದೆ. ಹಾಗೇ

ಗುರುತಿಸಿಕೊಂಡಿರುವ ಅಂಶಗಳಲ್ಲಿ ಪ್ರೀತಿ, ಪ್ರೇಮ, ಪ್ರಣಯ ಇವೇ ಮುಂತಾದ ಅಂಶಗಳು ಪ್ರಮುಖವೆಂದು ಪರಿಭಾವಿಸಲಾಗಿದೆ. ಮನುಷ್ಯ ಬದುಕು ಈ ನೆಲೆಯಲ್ಲೆ ನಿರೂಪಿತವಾಗಿರುತ್ತದೆ. ಪ್ರೇಮ-ಪ್ರೀತಿಯ ಆಧಾರವಿಲ್ಲದೆ ಬದುಕು ಪರಿಪೂರ್ಣವಾಗಲಾರದು. ಬದುಕಿನಲ್ಲಿ ಇವೆಲ್ಲಾ ಮುಖ್ಯವೆನಿಸುತ್ತವೆ. ಕಾವ್ಯದಲ್ಲಿಯೂ ಈ ಅಂಶಗಳು ನಿರೂಪಿತಗೊಂಡಾಗ ಅದು ಜನಪ್ರೀತಿ ಗಳಿಸುತ್ತದೆ, ಎಂದು ಹೇಳಬಹುದು.

ಬಿ.ಆರ್. ಲಕ್ಷ್ಮಣರಾವ್ ಅವರ ಕವಿತೆಗಳಲ್ಲಿ ವ್ಯಕ್ತವಾಗುವ ಪ್ರೀತಿ, ಪ್ರೇಮ, ಪ್ರಣಯದ ಅಂಶಗಳು ಯಾವ ನೆಲೆಯಲ್ಲಿ ಅಭಿವ್ಯಕ್ತವಾಗಿವೆ ? ಅವು ಹೇಗೆ ಜನಪ್ರಿಯತೆಗೆ ಪೂರಕವಾಗಿ ಬರುತ್ತವೆ. ಪ್ರೀತಿ-ಪ್ರೇಮದ ಬಗೆಗಿನ ಕವಿಯ ನಿಲುವುಗಳು, ಧ್ಯೇಯ ಧೋರಣೆಗಳು ಅವರ ಕವಿತೆಗಳಲ್ಲಿ ಹೇಗೆ ನಿರೂಪಿಸಲ್ಪಟ್ಟಿವೆ ? ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ. ಬಿ.ಆರ್. ಲಕ್ಷ್ಮಣರಾವ್ ಅವರನ್ನು ತಮ್ಮ ಕವಿತೆಗಳಲ್ಲಿ ಹೆಚ್ಚಾಗಿ ಕಾಡುವ ಈ ಅಂಶಗಳು ಹೇಗೆ ಅವರನ್ನು ಜನಪ್ರಿಯ ಕವಿಯೆಂದು ಗುರುತಿಸುವಂತೆ ಮಾಡಿವೆ ? ಅವರ ಪ್ರೇಮ ಕವಿತೆಗಳು, ಅದರಲ್ಲಿ ಬರುವ ಗಂಡು-ಹೆಣ್ಣಿನ ನಡುವಿನ ಅಗಾಧವಾದ ಪ್ರೀತಿಯ ಸೆಳೆತಗಳು ಹೇಗೆ ನಿರೂಪಿತವಾಗಿವೆ ? ಎಂಬುದನ್ನು ವಿಶ್ಲೇಷಿಸಲಾಗಿದೆ. ಲಕ್ಷ್ಮಣರಾವ್ ರವರು ಮುಕ್ತ ಪ್ರೇಮವನ್ನು, ಕಾಮವನ್ನು ಆರಾಧಿಸಿದವರು, ಓದುಗರ ಮನಸ್ಸನ್ನು ಸೆಳೆಯಲು ಅವರ ಕವಿತೆಗಳಲ್ಲಿ ಹೊಮ್ಮುವ ಭಾವವೆಲ್ಲ ಕವಿಯ ಸ್ವಾನುಭವದ ಪಡಿಯುಚ್ಚುಗಳಾಗಿವೆ. ಅದರಲ್ಲಿ ಕಲ್ಪನೆಯಿಲ್ಲ, ಹೊಸ ವೇಷವಿಲ್ಲ, ಅನುಭವದ ಪ್ರಾಮಾಣಿಕ ಅಭಿವ್ಯಕ್ತಿಯನ್ನು ಕಾಣಬಹುದು, "ಪ್ರೇಮ-ಗೀಮ" ಕವಿತೆಯಲ್ಲಿ.

ನಾನು  
ಕಳ್ಳ ಟಂಕ ಶಾಲೆಯಿಂದ  
ಪೊಳ್ಳು ಹಾವಗಳನ್ನು, ಭಾವಗಳನ್ನು, ನೋವುಗಳನ್ನು  
ಯಾವುಗಳನ್ನೂ  
ಚಕ ಚಕ್ಕನೆ ಅಚ್ಚು ಹಾಕಿ  
ಚಲಾವಣೆಗೆ ತರಲಾರೆ  
ಇಗೊ ಒಪ್ಪಿಕೊಂಡೆ; ನನ್ನದಲ್ಲ ಶುದ್ಧ ಪ್ರೇಮದ ಹಾದಿ.

ಕ್ಯಾಮರಾ ಕಣ್ಣು : ಪು : ೭

ಎಂದು ಹೇಳುವ ಮೂಲಕ ತನ್ನ ಪ್ರೇಮವೇನೆಂಬುದನ್ನು ಸ್ಪಷ್ಟಪಡಿಸುತ್ತಾರೆ. ಸಾಮಾನ್ಯವಾಗಿ ಪ್ರೇಮಿಸುವ ಯುವಕರು ತಮ್ಮ ಸಂಗಾತಿಯರಿಗೆ ನೇರವಾಗಿ ತಮ್ಮ ಮನಸ್ಸು ಬಿಚ್ಚಿಡುವುದಿಲ್ಲ. ಅವರನ್ನು ನಂಬಿಸಲು ನಟಿಸುವುದೇ ಹೆಚ್ಚು ಅಂತರಂಗ ತೆರೆದಿಟ್ಟು ನಾನಿರುವುದೇ ಹೀಗೆ, ಪ್ರೀತಿಸುವೆಯಾ ಎನ್ನುವ ಎದೆಗಾರಿಕೆ ಇರುವುದಿಲ್ಲ. ಆದರೆ, ಲಕ್ಷ್ಮಣರಾವ್ ರವರ ಪ್ರೇಮಿಗೆ ತನ್ನದು ಶುದ್ಧವಲ್ಲದ ಪ್ರೇಮ ಎಂದು

ದಿಟ್ಟವಾಗಿ ಹೇಳುವ ಮೂಲಕ ತಮ್ಮನ್ನು ತಾವು ತೆರೆದುಕೊಳ್ಳುವ ಈ ಶೈಲಿಯೇ ಜನಪ್ರಿಯತೆಗೆ ಕಾರಣವಾಗುತ್ತದೆ ಎನ್ನಬಹುದು.

ಸಾಮಾನ್ಯವಾಗಿ ಹೆಣ್ಣು ಮಕ್ಕಳಿಗೆ ಪ್ರೀತಿಯ ಸೆಳೆತವಿದ್ದರೂ ಸಮಾಜ, ಸಂಪ್ರದಾಯ, ತಂದೆ – ತಾಯಿಯರಿಗೆ ಹೆದರಿ ಅದನ್ನು ಹೊರ ಹಾಕಲಾರದೆ ಒಳಗೆ ಅನುಭವಿಸುತ್ತಾರೆ. ಆದರೆ, ಹುಡುಗರು ಮಾತ್ರ ಬಾಯಿ ಬಿಟ್ಟು ಹೇಳಿಬಿಡುತ್ತಾರೆ. 'ಉರಿ' ಕವಿತೆಯಲ್ಲಿ ಹೇಳುವ ಮಾತು, "ಪ್ರಿಯೆ ಕಿತ್ತೊಗೆಯೆ ಮುಖವಾಡ". ಈ ಪೆದ್ದು ಗತ್ತೆಲ್ಲ ನನ್ನ ಬಳಿ ಬೇಡ, ಎನ್ನುತ್ತಾರೆ. ಹಾಗೆಯೇ ಪ್ರೇಮದ ಸುಖ ಹೇಗಿರುತ್ತದೆ ? ಅದನ್ನು ಅನುಭವಿಸಿದಾಗ ಅದರ ಅಪ್ಯಾಯತೆ ಮನಸ್ಸಿಗೆ ಖುಷಿ ಕೊಡುತ್ತದೆ. ಪ್ರೇಮದ ನೋವು ಸಹ ಮನಸ್ಸಿಗೆ ಹಿತವೇ ಆಗುತ್ತದೆ ಎಂಬುದನ್ನು ಹೀಗೆ ಹೇಳುತ್ತಾರೆ.

ಆದ್ದರಿಂದ ಈಗಲಾದರೂ ಬಾಯಿ ಬಿಟ್ಟು ಹೇಳು ;
ನನ್ನ ವಿಷದ ಕೊಂಡಿಯ ಕಂಡು ಹೆದರುವೆಯ ಹೇಗೆ ?
ಒಮ್ಮೆ ಚುಚ್ಚಿಸಿಕೊಳ್ಳೆ ; ಆ ಸುಖದ ಬೇಗೆ
ಈ ಸಪ್ಪೆ ಜಗತ್ತಿಗೇ ಕಿಚ್ಚು ಹಚ್ಚದಿದ್ದರೇ ಕೇಳು ;

ಕ್ಯಾಮರಾ ಕಣ್ಣು ; ಪು ; ೧೫

ಎನ್ನುವಲ್ಲಿ ಪ್ರೀತಿಯನ್ನು ಚೇಳಿಗೆ ಹೋಲಿಸುತ್ತಾ, ಅದರ ಕಡಿತದ ಉರಿಯಲ್ಲೆ ಆನಂದಿಸುವ ಭಾವ ಪ್ರೇಮದ ಹುಚ್ಚುತನವನ್ನು ಕುರಿತ ಮಾತಾಗಿದೆ.

ಪ್ರೇಮಿಗಳಿಗೆ ತಂದೆ – ತಾಯಿಯರ ವಿರೋಧ ಸಾಮಾನ್ಯವೇ. ಸಂಪ್ರದಾಯದ ಸೆಳೆತ, ಹಣದಾಸೆ ಇವುಗಳಲ್ಲಿ ಬಂಧಿಯಾದ ತಂದೆಗೆ ಸೌಂದರ್ಯವು ಕುರೂಪವಾದರೆ, ಪ್ರೇಮಿಗೆ ಕುರೂಪವು ಸೌಂದರ್ಯವಾಗಿಯೇ ತೋರುತ್ತವೆ. ಆದರೂ ಎಲ್ಲವನ್ನು ನಿರಾಕರಿಸಿ ಒಪ್ಪಿಕೊಳ್ಳಲಾರದ ಅಸಹಾಯಕತೆ, ತಾನು ಬಯಸಿದ ಹೆಣ್ಣು ತನಗೆ ಸಿಕ್ಕರೆ ಅಪ್ಪನ ಎಲ್ಲಾ ನಿಯಮಗಳಿಗೂ ಬದ್ಧನಾಗಿ ನಿಲ್ಲಲು ಸಿದ್ಧನಾದರೂ ಒಮ್ಮೊಮ್ಮೆ ಸಂಬಂಧಗಳ ಬಂಧನದಿಂದ ಹೊರ ಬರಲಾರದ ಸ್ಥಿತಿಗೆ ತಲುಪುವ ಪ್ರೇಮಿಯ ಅಸಹಾಯಕತೆಯ ಚಿತ್ರಣ ತರುವ 'ಸಖೀ ಗೀತ' ಕವಿತೆಯ ಸಾಲುಗಳಲ್ಲಿ.

ಅಪ್ಪನ
ಹೊನ್ನ ಚೌಕಟ್ಟಿನ
ಕನ್ನಡಕದ
ಕುರೂಪಿಯಾಗಿ ಕಂಡ
ನನ್ನ ಬಡ ಹೆಣ್ಣೆ
ಶಕೂ ನನಗೆ ನೀನೆ ಬೇಕು.

ಕ್ಯಾಮರಾ ಕಣ್ಣು ; ಪು ; ೨೨

ಎಂದು ಗಟ್ಟಿ ಮನಸ್ಸು ಮಾಡಿದರೂ ಅಂತಿಮವಾಗಿ ತಾಯಿಯ ಕಣ್ಣೀರಿನ ಮುಂದೆ ಕರಗಿ ಹೋಗುತ್ತಾನೆ.

ಅಪ್ಪ ಅಮ್ಮ ತಮ್ಮ ತಂಗಿ
ಇವರೆಲ್ಲರ ಪ್ರೀತಿಯ ಖೋತಾ
ನಿನ್ನೊಬ್ಬಳಿಂದ ತುಂಬಲು ಆದೀತಾ ?

ಕ್ಯಾಮರಾ ಕಣ್ಣು ; ಪು ; ೨೩

ಎನ್ನುವಲ್ಲಿ ಮಮತೆಯ ಸೆಳೆತದಿಂದ ಬಿಡಿಸಿಕೊಳ್ಳಲಾರದೆ ಪ್ರೀತಿಗಾಗಿ ಕಾಯುತ್ತಾ ಕಾಲಕ್ಕೆ ಬಿಟ್ಟುಬಿಡುವ ತೀರ್ಮಾನಕ್ಕೆ ಬರುತ್ತಾರೆ.

ಪ್ರೀತಿಗೆ ಸಹಜವಾಗಿ ಬರುವ ಅಂಶಗಳೆಂದರೆ, ಪ್ರೀತಿಯು ಇದೆ, ವಿರಹವು ಇರುತ್ತದೆ. ಪ್ರೇಮಿಗಳು ದೂರಾಗುವುದು ಸಹಜ, ಆದರೆ ಪ್ರೇಮದ ಅರ್ಥ, ಪ್ರೇಮಿಯ ಬೆಲೆ ಸ್ಪಷ್ಟವಾಗುವುದು. ಅವರ ಅಗಲಿಕೆಯ ವೇಳೆಯಲ್ಲಿ, ಆಗ ಬರುವ ನೆನಪುಗಳೇ ಅವರಿಗೆ ಜೀವಸೆಲೆಯಾಗಿ ಮನಸ್ಸಿಗೆ ಹಿತಕೊಡುತ್ತವೆ. ಅಂತಹ ಮಧುರವಾದ ನೆನಪು ಮತ್ತು ಅನುರಾಗದ ಅಲೆಗಳನ್ನು ಹೇಳುವ 'ನೆನಪು' ಕವಿತೆಯ ಸಾಲುಗಳು.

ಶಕೂ ಎಂಥ ಆತ್ಮ ವಂಚಕರು ನಾವು !
ನನ್ನನ್ನು ಮನಸಾರೆ ಪ್ರೀತಿಸಿ ಕೈ ಕೊಟ್ಟ ನೀನು
ನಿನ್ನನ್ನು ಮರೆಯಲಾರೆನೆಂದು ಘೋಷಿಸಿ ಮರೆತುಬಿಟ್ಟೆ ನಾನು
ಮರೆಯುವುದು, ತೊರೆಯುವುದು ಇಷ್ಟು ಸುಲಭವೇನೆ ?
ಅಥವಾ ಇಂಥ ಭ್ರಮೆಗಳಲ್ಲಿ ಮತ್ತೆ ಆತ್ಮ ವಂಚನೆನೆಗೋ ?

ಕ್ಯಾಮರಾ ಕಣ್ಣು ; ಪು ; ೩೫

ಎನ್ನುವಲ್ಲಿನ ಭಾವ ಪರಸ್ಪರ ಪ್ರೀತಿ ದೂರವಾದಾಗ ಅವರ ನಡುವಿನ ಮಾತುಗಳಲ್ಲಿ ವ್ಯಕ್ತವಾಗುವ ಪ್ರಾಮಾಣಿಕತೆಯೊಂದಿಗೆ ಪ್ರೀತಿಯ ಮಧುರವಾದ ನೆನಪನ್ನು ತಿಳಿಸುತ್ತವೆ. ಪ್ರೀತಿಯ ಹಂಬಲದ ಉತ್ಕಟತೆ, ಅದನ್ನು ನೆನಪಿಸಲು ಅವರು ಕೊಡುವ ಹೋಲಿಕೆ ನಿತ್ಯ ಬದುಕಿಗೆ ಹತ್ತಿರವಾದ ಸಾಮಾನ್ಯ ವಸ್ತು ವಿಷಯಗಳೇ ಆದರೂ ಅವುಗಳ ಅಭಿವ್ಯಕ್ತಿ ವಿಶಿಷ್ಟತೆಯಿಂದಲೇ ಓದುಗರ ಪ್ರೀತಿ ಗಳಿಸುತ್ತವೆ. ಹೇಗೆಂದರೆ,

ನಿನಗಾಗಿ ನಿನ್ನ ಜೊತೆಗಾಗಿ ಎಷ್ಟು ಹಂಬಲಿಸುತ್ತೇನೆ ಗೊತ್ತ ?
ಮತ್ತೂ ಒಮ್ಮೊಮ್ಮೆ ಬಚ್ಚಲ ತಳ ಸವೆದ ಹಳೆ ಹಂಡೆ ಸೋರಿ
ಒಲೆ ಆರಿ,
ಧುತ್ತನೆ ಸುತ್ತಲೂ ಕವಿಯುವ ಹೊಗೆಯಂತೆ

ಪ್ರೇಮದ ಬಂಧನದಲ್ಲಿದ್ದ ಪ್ರೇಮಿಗಳಿಗೆ ಎಲ್ಲವೂ ಸೊಗಸಾಗಿಯೇ ಕಾಣುತ್ತವೆ. ಎಲ್ಲದರಿಂದಲೂ ಆನಂದವನ್ನೇ ಅನುಭವಿಸುತ್ತಾರೆ. ಪ್ರೀತಿಯ ಸೆಳೆತದಲ್ಲಿ ಸುಂದರ ಸ್ವಪ್ನವಾಗಿದ್ದ ಪ್ರೇಮಿ, ದೂರಾಗಿ ವಿರಹದ ಸೋಂಕು ತಗುಲಿದಾಗ ಆಗುವ ಅನುಭವವೇ ಬೇರೆ ತೆರನಾದುದು, ಎಂಬುದನ್ನು ಹೇಳುವ ಕವಿತೆ 'ಪ್ರಸ್ತುತ' ದಲ್ಲಿ ಕವಿ

ಪ್ರಿಯೆ ನಾ ನಿನಗೆ ಹೋಲಿಸಿದ್ದೆ ಗುಲಾಬಿ
ಇಂದೂ ಅದೇ ರೀತಿ ಅರಳುತ್ತಿದೆ
ನನ್ನ ಮನದ ವನದಲ್ಲಿ ;
ನೀನೇಕೆ ಹೀಗೆ ಮುಳ್ಳಾದೆ ?
ನಿನ್ನ ಕುರಿತು ನಾ ಬರೆದ ಪ್ರೇಮಗೀತೆಗಳೆಲ್ಲ
ಭಾವ ಪುಷ್ಟಿಯಿಂದ ಗಟ್ಟಿ ಕಾಳಾಗಿವೆ
ಹೃದಯದ ಸಂಕಲನದಲ್ಲಿ ;
ನೀನೇಕೆ ಹೀಗೆ ಜೊಳ್ಳಾದೆ ?
ನಿನಗಾಗಿ ಜಗದ ಹಗೆ ಹೊತ್ತು ಕೊಂಡೆ ನಾನು
ಇಂದು ನೀನೇ ಶತ್ರು ಪ್ರಮುಖಳಾದೆ.

ಕ್ಯಾಮರಾ ಕಣ್ಣು ; ಪು ; ೮೮

ಪ್ರೀತಿ ಈಗ ಬದಲಾಗಿದೆ, ಪ್ರೇಮಿಸುವಾಗಿನ ಸೊಬಗು ಮಾಸಿದೆ. ಅಂದುಕೊಂಡಿದ್ದೇ ಒಂದು, ಈಗೆಲ್ಲಾ ಅದಕ್ಕೆ ವಿರುದ್ಧವಾಗಿದೆ. ಪ್ರೀತಿ ಹಿತವಾಗಿ ಕಾಡಬೇಕಾದ್ದು ಈಗ ಎಲ್ಲ ಕಹಿ ಅನುಭವ ಕೊಡುತ್ತಿದೆ. ಬದುಕಿನ ಅರ್ಥಕ್ಕೆ ಸಾರವಿಲ್ಲದಾಗಿದೆ. ಸೃಷ್ಟಿಯ ಸೊಬಗಿನಲ್ಲೂ ಈಗ ನೀರಸವೇ ತುಂಬಿದೆ. ಆಗ ಪ್ರೇಮಿ ತನ್ನ ಕಣ್ಣಿಗೆ ಮೊದಲಿದ್ದಂತೆ ಕಾಣುವುದಿಲ್ಲ. ಅದಕ್ಕೆ ತದ್ವಿರುದ್ಧವಾಗಿ ನಿಲ್ಲುತ್ತಾಳೆ. ತನ್ನ ಸಂಗಾತಿಗಾಗಿ ತನ್ನವರನ್ನೆಲ್ಲ ತೊರೆದು ಬಂದು ನಿಲ್ಲುವ ಪ್ರೇಮಿಗೆ ಆಗುವ ನೋವು, ಪ್ರಸ್ತುತ ಸಮಾಜದಲ್ಲಿ ಸುಳ್ಳು, ಮೋಸ, ವಂಚನೆ ಇರುವುದು ಸಹಜ. ಆದರೆ, ಪ್ರೇಮ ಮಾತ್ರ ಪರಿಶುದ್ಧವೆಂದು ನಂಬಿದ್ದ ಪ್ರೇಮಿಗೆ ಈಗ ಪ್ರೇಮಕ್ಕೂ ಈ ಸೋಂಕು ತಟ್ಟಿತೇ ? ಎಂಬ ಅನುಮಾನ ಕಾಡುತ್ತದೆ. ಆದರೂ ಪ್ರೇಮಿಯ ಮನ ಕರಗದೆ ಕಬ್ಬಿಣವಾದಾಗ ಮನಸ್ಸು ನೊಂದು ಪ್ರೇಮದ ಹೊಡೆತಕ್ಕೆ ಸಿಕ್ಕವರು ಕೊನೆಗೆ ದಾರ್ಶನಿಕರಾಗುವಂತೆ ನಾನೂ ಆಗಬೇಕೆ ? ಎಂದು ಹೇಳುವ ಮಾತುಗಳಲ್ಲಿ ಪ್ರೇಮದ ಅರ್ಥ. ಪ್ರೇಮದಿಂದ ವಂಚಿತನಾದ ಪ್ರೇಮಿಯ ಮನಸ್ಥಿತಿಯನ್ನು ಕುರಿತ ಚಿತ್ರಣ ಸರಳವಾಗಿ ಮನಕ್ಕೆ ಹತ್ತಿರವಾಗುತ್ತದೆ.

ಬಿ.ಆರ್. ಲಕ್ಷ್ಮಣರಾವ್ ಅವರ ಪ್ರಾರಂಭದ ಗೀತೆಗಳಲ್ಲಿ ಪ್ರೇಮ, ಪ್ರೀತಿಯ ನೆಲೆಯು ವೈಯುಕ್ತಿಕತೆಯ ನೆಲೆಯಿಂದ ಕಾಣಿಸಿಕೊಂಡರೆ ನಂತರದ ಕವಿತೆಗಳಲ್ಲಿ ಅದು ಸಾಮಾಜಿಕತೆಯ ಕಡೆಗೆ

ಹೊರಳುತ್ತದೆ. ಹಾಗೆ ಹೊರಳುವಾಗ ಅದರಲ್ಲಿನ ಪ್ರೇಮದ ನೆಲೆಯು ಪ್ರಬುದ್ಧ ಮನಸ್ಸಿನ ಪರಿಪಕ್ವತೆಯ ಮಾಗುವಿಕೆಯ ಭಾವದಲ್ಲಿ ವ್ಯಕ್ತವಾಗುತ್ತದೆ. ಪ್ರೀತಿಯ ನೋವಿನ, ನೆನಪಿನ ಆಳದಲ್ಲಿ ಅಚ್ಚೊತ್ತಿರುವ ತಕೂ, ಲೋಲೀಟಾ, ಶಲಿ, ಇವರ ಬಗ್ಗೆ ಬರೆಯುವ ಕವಿಯ ಮಾತುಗಳಲ್ಲಿ ಬದಲಾವಣೆ ಆಗಿದೆ. ಅವರೆಲ್ಲ ಅವರ ಮನಸ್ಸಿಗೆ ರೋಮಾಂಚನದ ಮೂಲಕ ಕಚಗುಳಿಯಿಟ್ಟು ಖುಷಿ ಕೊಡುತ್ತಿದ್ದವರು. ಆದರೆ ಕಾಲ ಮಾಗಿದಂತೆ ಮನಸ್ಸು ಪರಿಪಕ್ವಗೊಂಡು ಅವರ ಜೊತೆಗೆ ಅವರ ದಾಂಪತ್ಯದ ಸಂಗಾತಿಯು ಅವರ ಕವಿತೆಗಳಲ್ಲಿ ಸ್ಥಾನ ಪಡೆಯುತ್ತಾ ಹೋಗುತ್ತಾಳೆ. ಈಗ ಅವರಲ್ಲಿರುವ ಭಾವವೇನೆಂದರೆ, 'ದಯವಿಟ್ಟು' ಕವಿತೆಯ ಸಾಲುಗಳಲ್ಲಿ ವ್ಯಕ್ತವಾಗುವಂತೆ,

ಹಕ್ಕಿಗಳೆಲ್ಲ ಮರದಿಂದ ಹಾರಿ ಹೋದವು.

ನಾನು ಪ್ರೇಮಿಸಿದ ಹುಡುಗಿಯರಿಗೆಲ್ಲಾ ಮದುವೆಯಾಯಿತು.

ಈಗ ನನಗೂ ಮದುವೆಯಾಗಿದೆ.

ಆದ್ದರಿಂದ ಅವರೆಲ್ಲ ಸುಖವಾಗಿರಲಿ,

ಕ್ಯಾಮರಾ ಕಣ್ಣು ; ಪು ; ೧೧೫

ಎನ್ನುವಲ್ಲಿ ಪ್ರಾಯದ ಕಾವು ಆರಿ ಈಗ ತಣ್ಣನೆಯ ಭಾವ ಆವರಿಸಿದೆ. ಅದಕ್ಕಾಗಿ ಹಿಂದಿನ ಅವರ ಹುಡುಗಾಟ, ಪ್ರೇಮದ ತೀವ್ರತೆ ಈಗ ಕಾಣುವುದಿಲ್ಲ. ಬದಲಾಗಿ ಅವರ ಪ್ರೇಮಿಗಳು ನೆನಪಾಗಿ ಉಳಿದಿರುತ್ತಾರೆ. ಆ ನೆನಪು ಬಹಿರಂಗವಾಗಿ ಬೇಡವೆನ್ನುತ್ತಾರೆ. ಕವಿ ಈ ಮಾತುಗಳಲ್ಲಿ,

ಬರಲಿ ಬೇಕಾದರೆ
ಸಂಜೆಗೆ

ನನ್ನ ಹೃದಯದ ತಮ್ಮ ತಮ್ಮ ಗೂಡುಗಳಿಗೆ

ಅಂತರಂಗದ ಖಾಸಗಿ ಕತ್ತಲೆಗೆ

ನಿರ್ಭಿಡೆಯ ನಿರಾತಂಕ ಬೆತ್ತಲೆಗೆ

ಕ್ಯಾಮರಾ ಕಣ್ಣು ; ಪು ; ೧೧೫

ಎಂದು ಪ್ರೇಮದ ನೆನಪನ್ನು ತಮ್ಮ ಖಾಸಗಿ ಕತ್ತಲೆ ಕೋಣೆಗೆ ಬರುವಂತೆ ಆಹ್ವಾನಿಸುವ ಕವಿಗೆ ಬೆಳಕಲ್ಲಿ ಬಂದು ಕಾಡಿದರೆ ಆಗುವ ಅನಾಹುತದ ಬಗ್ಗೆ ಅರಿವಿದೆ. ಏಕೆಂದರೆ ಈಗ ಮದುವೆಯಾಗಿ ಹೆಂಡತಿಯೊಂದಿಗಿರುವಾಗ ಬಂದರೆ ಅನಾಹುತವಾಗುತ್ತವೆ, ಎಂದು ಹೇಳುವಲ್ಲಿ ಪ್ರೇಮದ ನೆನಪನ್ನು ನಿರಾಕರಿಸದೆ, ಹೆಂಡತಿಯ ಮನಸ್ಸಿಗೂ ನೋವು ತರಲಾರದ ಸಾತ್ವಿಕ ಮನಸ್ಸು ನಾಯಕನದು. ಅದಕ್ಕಾಗಿಯೇ ಹೀಗೆ ಹೇಳುತ್ತಾರೆ.

ಏಕೆಂದರೆ,

ಎಷ್ಟಾದರೂ ನನ್ನ ಹೆಂಡತಿಯೂ

ಒಂದು ಹೆಣ್ಣು
ಅವಳಿಗೆ ನನ್ನಂತರಂಗದ ಒಂದೊಂದೂ ಚೀರಿನ ಮೇಲೆ
ಅವುಗಳಿಗೆ ಎರಗಿ ಬರುವ
ಗುಪ್ತ ಗಾಮಿನಿಯರ
ಚೈತನ್ಯದ ನೀರಿನ ಮೇಲೇ
ಸದಾ ಕಣ್ಣು –

ಕ್ಯಾಮರಾ ಕಣ್ಣು ; ಪು ; ೧೧೫

ಎಂದು ಹೇಳುವ ಮಾತುಗಳಲ್ಲಿ ಪ್ರೀತಿಯ ಆರಾಧನೆ ಇದೆ. ಅದಕ್ಕಾಗಿ ಜೀವನ ಅತಂತ್ರ ಮಾಡಿಕೊಳ್ಳುವ ಮನಸ್ಥಿತಿ ಅವರದಲ್ಲ. ಪ್ರೀತಿಯ ನೆನಪಷ್ಟೇ ಸಾಕು. ಅದರಿಂದಾಗಿ ಬದುಕು ಗೋಜಲಾಗುವುದು ಬೇಡವೆಂಬ ಮಧ್ಯಸ್ಥ ನಿಲುವು ಅವರದಾಗಿದೆ. ಅವರ ಪ್ರೇಮ ಹೇಗೆ ಪರಿಪಕ್ವತೆ ಗಳಿಸಿದೆ ಎಂದರೆ ಬಸ್ಸಿನಲ್ಲಿ ಕೂತು ಪ್ರಯಾಣಿಸುವಾಗ ಪಕ್ಕದಲ್ಲಿ ಕುಳಿತ ಸೌಂದರ್ಯವತಿ ಹೆಣ್ಣನ್ನು ಕಣ್ಣೆತ್ತಿ ನೋಡದ ಮಡಿವಂತಿಕೆಯಿಲ್ಲ ಎಂಬುದನ್ನು 'ಕವಿತೆ' ಪದ್ಯದ ಸಾಲುಗಳಲ್ಲಿ ಹೀಗೆ ಹೇಳಿದ್ದಾರೆ.

ಎಲ್ಲ ಮಡಿವಂತಿಕೆಗಳನ್ನು, ಭಯಗಳನ್ನು ಮೀರಿ
ಅಥವಾ ಮರೆತು
ಅವಳ ಕಡೆಯೇ ನೋಡುತ್ತಾ ಕುಳಿತು ಬಿಟ್ಟ ನನಗೆ
ಅಂಥ ಚೆಲುವು ತಾನಾಗಿ ಕಣ್ಣ ಮುಂದೆ ಒದಗಿ ಬಂದಾಗ
ನೋಡದೆ
ಬಿಗುಮಾನದಿಂದ ಮುಖ ಹೊರಳಿಸಿ ಕೂಡುವುದು
ಹೀನ ಅಪರಾಧ ಅನಿಸಿತು.

ಕ್ಯಾಮರಾ ಕಣ್ಣು ; ಪು ; ೧೨೯

ಎನ್ನುವ ಮಾತುಗಳಲ್ಲಿನ ಪ್ರಾಮಾಣಿಕತೆ ಮೆಚ್ಚುವಂಥದು, ಸೌಂದರ್ಯವನ್ನು ಸವಿಯುವ ರಸಿಕನಾದರೂ ಅಂಕೆ ಮೀರದ ಅವನ ವ್ಯಕ್ತಿತ್ವ ಮತ್ತು ದಾಂಪತ್ಯ ಬದುಕಿನ ಬಗ್ಗೆ ಸೆಳೆತ, ನೀತಿಯ ಗಡಿ ದಾಟದಂತೆ ಮಾಡುತ್ತದೆ. ಹಾಗಾಗಿ ಮನಸ್ಸು ತಿಳಿಯಾಗಿ ಖುಷಿ ಅನುಭವಿಸಿತು. ನಂತರ ಪ್ರೀತಿಯಿಂದ ತನ್ನ ಮಗನಿಗೆ ಮುತ್ತು ಕೊಟ್ಟು ಹೆಂಡತಿಯ ಜೊತೆ ನಗುನಗುತ್ತಾ ಮಾತನಾಡುವ ಮಟ್ಟಕ್ಕೆ ಹೋದಾಗ ಅವರ ಬಗ್ಗೆ ಯಾವುದೇ ಬಗೆಯ ಗುಮಾನಿಗೆ ಆಸ್ಪದ ನೀಡದೆ ತೆರೆ ಎಳೆಯುತ್ತದೆ. ಕವಿಯ ಈ ಭಾವವೇ ಕವಿತೆಯನ್ನು ಪ್ರೀತಿಯಿಂದ ಓದುವಂತೆ ಮಾಡುತ್ತದೆ.

'ಲಿಲ್ಲಿಪುಟ್ಟಿಯ ಹಂಬಲ' ಕವಿತೆಯಲ್ಲಿಯು ಪ್ರೀತಿಯ ತುಡಿತ, ಉತ್ಕಟತೆಗಳ ಚಿತ್ರಣವಿದೆ. ಪ್ರೀತಿಗಾಗಿ ಹಾತೊರೆಯುವ ಲಿಲ್ಲಿ ಪುಟ್ಟಿ. ಗಲಿವರನ ಸಾಮಿಪ್ಯದ ಸುಖದ ಕನಸು ಕಾಣುವುದು.

ಒಂದು ಬಗೆಯಲ್ಲಿ ಮುಕ್ತ ಕಾಮದ ಪ್ರತೀಕವಾಗಿ ಬರುವ ಪ್ರೇಮದ ತೀವ್ರತೆಯ ಹುಚ್ಚುತನ ಅಸಹ್ಯವನ್ನುಂಟು ಮಾಡುತ್ತದೆ ಎನಿಸುವುದು ಆಕೆ ಕಾಣುವ ಕನಸಿನ ಸ್ವರೂಪದಲ್ಲಿ.

ನಿನ್ನೆ ರಾತ್ರಿ ಅದೆಂಥ ಸುಂದರ ಕನಸು
ನಾನು ಮೈಯಿಡೀ ಯೋನಿಯಾಗಿ
ನಿನ್ನ ಒಳಗೊಂಡ ಹಾಗೆ,
ತಳ ಕಂಡ ಹಾಗೆ,
ಹೇಗೆ ಬುಗ್ಗೆ ಕಗ್ಗೊಡೆದು ನೆರೆ ನುಗ್ಗಿತು ಹೊಳೆ
ತಣಿದಿತ್ತು ಕಾದು ಗಾರಾಗಿದ್ದ ನನ್ನ ಮೈ
ಓಡಿದಂತೆ ಒನಕೆಯ ಮಳೆ

ಕ್ಯಾಮರಾ ಕಣ್ಣು ; ಪು ; ೧೪೮

ಎನ್ನುವ ಮಾತುಗಳಲ್ಲಿ ವ್ಯಕ್ತವಾಗುವ ಭಾವದಲ್ಲಿ ಅಸಹ್ಯ ಹುಟ್ಟಿಸುವ ಕಾಮದ ನಂತರದ ಸ್ಥಿತಿ ಪ್ರೇಮ ಸುಖದ ಕಲ್ಪನೆಯ ಹಿತವನ್ನು ತರುತ್ತದೆ.

ಪ್ರೇಮಿಯ ಅಗಲಿಕೆಗಾಗಿ ಈಗ ಕಂಬನಿ ಮಿಡಿಯದೆ ಅದನ್ನು ಪ್ರೀತಿಯ ಮುತ್ತಾಗಿ ಮಾಡಿ ನೆನಪಿನಲ್ಲಿ ಉಳಿದಿರುವ ಹೃದಯಕ್ಕೆ ನತ್ತಾಗಿ ಮಾಡಿಕೊಡುವ ಮನಸ್ಥಿತಿಗೆ ಬಂದು ತಲುಪಿರುವುದನ್ನು 'ನತ್ತು' ಕವಿತೆಯಲ್ಲಿ ಕಾಣಬಹುದು. ಪ್ರೇಮದಿಂದ ದೂರಾದ ಬಳಿಕ ವಿರಹಿಯಾಗಿ ಭಗ್ನ ಪ್ರೇಮಿಯಾಗಿ, ಕೊನೆಗೆ ದಾರ್ಶನಿಕನಾಗದೆ ಪ್ರೀತಿಯ ನೆನಪಿನ ಮಧುರವಾದ ಅನುಭವದಲ್ಲಿ ಉಳಿಯುವುದು ಮೇಲು ಎಂಬ ನಿಲುವಿಗೆ ಬಂದಿರುವುದನ್ನು ಇಲ್ಲಿ ಕಾಣುತ್ತೇವೆ.

ಪ್ರೀತಿಯ ತುಡಿತಗಳು, ಮಿಡಿತಗಳು, ಅದರ ಸೆಳೆತಗಳು ಕಾಡುವುದು ತಾರುಣ್ಯದಲ್ಲಿ ಮಾತ್ರ ಪ್ರೇಮ, ಪ್ರೇಮಕ್ಕೆ ಒಳಗಾಗುವ ಆತುರ, ಎಲ್ಲದರಲ್ಲೂ ಪ್ರೀತಿಯ ಸಿಂಚನವೇ ಇರುತ್ತದೆ. ಆದರೆ ವಯಸ್ಸು ಜಾರಿದಂತೆ ಪ್ರೀತಿಯ ಸೆಳೆತವು ಕಡಿಮೆಯಾಗುತ್ತದೆ. ಮನಸ್ಸು ಪ್ರಬುದ್ಧವಾಗಿ ಪ್ರಜ್ಞಾಪೂರ್ವಕವಾದ ನೆಲೆಗೆ ತಲುಪುತ್ತದೆ. ಹಾಗಾಗಿ 'ನಡುವಯಸ್ಸಿನಲ್ಲಿ' ಕವಿತೆಯಲ್ಲಿ ಕವಿ ಹೇಳುವುದೇನೆಂದರೆ,

ಕೋಗಿಲೆ ಹಾಡುವುದಿಲ್ಲ
ನವಿಲು ಕುಣಿಯುವುದಿಲ್ಲ
ಮದ್ದಲೆ ಗುಡುಗುವುದಿಲ್ಲ
ವಯಸ್ಸಿನ ಎಣಿಕೆ ಶುರುವಾಗುವ
ಈ ನಡು ವಯಸ್ಸಿನಲ್ಲಿ
ನೀನು ಪ್ರೇಮದಲ್ಲಿ ಬಿದ್ದಾಗ

ಕ್ಯಾಮರಾ ಕಣ್ಣು ; ಪು ; ೧೬೧

ಪ್ರೇಮದ ಬಗ್ಗೆ ಇರುವ ಭ್ರಮೆಗಳೆಲ್ಲಾ ಮಾಯವಾಗಿ, ರೊಚ್ಚು, ಆವೇಶ, ಆತುರ, ಕಾತುರಗಳೆಲ್ಲ ಈಗ ಮರೆಯಾಗಿರುತ್ತವೆ. ಕಾರಣ ದೇಹ ದಣಿದಿರುತ್ತದೆ. ಮನಸ್ಸು ಪರಿಪಕ್ವವಾಗಿರುತ್ತದೆ. ಈಗ ಮನಸ್ಸು ಬಯಸುವುದು ಪ್ರೇಮದ ಕಾವನ್ನಲ್ಲ, ಗಾಯ ಮಾಯಿಸಬಲ್ಲ, ನೋವ ಮರೆಸಬಲ್ಲ ಅನುಕಂಪವನ್ನೇ. ಅದಕ್ಕಾಗಿ ಅವಳನ್ನು ಬರಮಾಡಿಕೊಳ್ಳಬೇಕೆಂಬುದು ಇಲ್ಲಿ ಸ್ಪಷ್ಟವಾಗುತ್ತದೆ.

ಪ್ರೀತಿಯ ಸೆಳೆತ ಹೇಗೆ ಉಂಟಾಗುತ್ತೋ ಯಾರಿಗೂ ತಿಳಿಯದು. ಒಮ್ಮೆ ಅದರಲ್ಲಿ ಬಿದ್ದ ಮೇಲೆ ಮತ್ತೆ ಹೊರಬರಲಾರದ ಸ್ಥಿತಿ. ಹಾಗಾಗಿ ಪ್ರೀತಿಯ ಆಳವನ್ನರಿಯಲು ಯಾರಿಂದಲೂ ಸಾಧ್ಯವಿಲ್ಲ. ಹಾಗೆಯೇ ಯಾರಿಗೂ ಪ್ರೀತಿಯ ಆಳ ಅರಿಯಲಾಗದು. ಹೆಣ್ಣಿನ ಕಣ್ಣುಗಳ ಭಾವದ ಆಳವನ್ನರಿಯುವುದು ಅಸಾಧ್ಯ. ಒಮ್ಮೆ ಅದರಲ್ಲಿ ಬಿದ್ದ ಮೇಲೆ ಅದರೊಳಗೆ ಮುಳುಗಿ ಹೋಗುತ್ತೇವೆ. ಅದರಿಂದ ಹೊರ ಬರಲಾಗದೆ, ಒದ್ದಾಡುವುದನ್ನು ಕವಿ 'ಆ ಕಣ್ಣುಗಳು' ಕವಿತೆಯ ಸಾಲಿನಲ್ಲಿ ಹೀಗೆ ಹೇಳುತ್ತಾರೆ.

ಅಳವಳೆಯಲು ಧೀರ
ಕಣ್ಣೊಳಗೆ ಧುಮುಕಿದೆ
ಮುಳುಗಿದೆ
ಮುಳುಗಿದೆ
ಮುಳುಗಿದಷ್ಟು
ಆಳ
ಎಂಥ ಒಲವಿನ ಜಾಲ
ತೇಲಿ ಮೇಲೇರಿ
ಹಿಂತಿರುಗಲೇ ಇಲ್ಲ

ಕ್ಯಾಮರಾ ಕಣ್ಣು ; ಪು ; ೧೮೮-೧೮೯

ಎನ್ನುವ ಮಾತುಗಳಲ್ಲಿ ಪ್ರೇಮಿಯೊಬ್ಬ ಪ್ರೇಮವೆಂಬ ಸಮುದ್ರದಲ್ಲಿ ಇಳಿದ ಮೇಲೆ, ಮತ್ತೆ ಮೇಲೇಳಲು ಸಾಧ್ಯವಾಗದು. ಪ್ರೇಮದ ಆಳವೇ ಅಂಥದ್ದು. ಹಿತವಾದ ಅನುಭವಗಳಿಂದ ಹೆಣ್ಣಿನ ಕಣ್ಣೊಳಗಿನ ಆಳ ಅಳೆಯಲು ಧುಮುಕಿ ಹೊರ ಬರಲಾಗದ ಸ್ಥಿತಿ, ಕೊನೆಗೆ ಅದರಲ್ಲೇ ಮುಳುಗಿ ಬಿಡುತ್ತಾರೆ. ಇದು ಪ್ರೇಮದ ವಿಸ್ತಾರತೆ ಎಂದು ಹೇಳುತ್ತಾರೆ. ಹೆಣ್ಣಿನ ಮನಸ್ಸಿನ ಭಾವನೆಗಳನ್ನು ಈವರೆಗೆ ಯಾರಿಂದಲೂ ತಿಳಿಯಲಾಗಿಲ್ಲ ಎಂಬ ಸತ್ಯದ ಸ್ಪಷ್ಟನೆಯನ್ನು ಇದರಲ್ಲಿ ಕಾಣಬಹುದು. ಪ್ರೇಮದ ಅನುಭವ ಕೊಡುವ ಸುಖಕ್ಕಿಂತ ದುಃಖವೇ ಹೆಚ್ಚು ಎಂಬ ಅನುಭವ ಪಡೆದರೂ ಪ್ರೇಮದಿಂದ ಮುಕ್ತವಾಗಲು ಮನಸ್ಸು ಬಯಸುವುದಿಲ್ಲ. ಹೇಗಾದರೂ ಸರಿಯೇ, ಏನೇ ಆದರೂ ಕೂಡ ಪ್ರೀತಿಯ

ಸೆಳೆತಕ್ಕೆ ಸಿಕ್ಕಿಕೊಳ್ಳುತ್ತೇವೆ. ಅದು ಯಾರನ್ನು ಬಿಡುವುದಿಲ್ಲ. ಅದಕ್ಕೆ ಮನ್ಮಥನೇ ಕಾರಣವೆಂದು ಹೇಳುತ್ತಾ ಪ್ರೀತಿಯ ಅನನ್ಯತೆಯನ್ನು ಸಾರುವ ಕವಿತೆ "ಇರುಳು ಕಂಡ ಬಾವಿ" ಇಲ್ಲಿ ಕವಿ ಹೇಳುವುದು ಏನೆಂದರೆ,

ಪ್ರೀತಿ ಪ್ರೇಮವೆಂದರೆ ಇರುಳು ಕಂಡ ಬಾವಿ

ಹೀಗೆ ಹೇಳತೀವಿ ಪ್ರೇಮಿಗಳಿಗೆ ನಾವು ಬುದ್ಧಿ ಹೇಳತೀವಿ

ಅದೇಕೊ ಗೊತ್ತಿಲ್ಲ

ಆ ಮನ್ಮಥನೇ ಬಲ್ಲ

ಹಗಲು ಅದೇ ಬಾವಿಗೆ ನಾವೂನು ಬೀಳತೀವಿ

ಕ್ಯಾಮರಾ ಕಣ್ಣು ; ಪು ; ೩೭೫

ಎಂಬುದರಲ್ಲಿ ಪ್ರೀತಿಯಿಂದಾಗುವ ಅನುಭವ ಏನಾದರೂ ಸರಿಯೇ ಬೇರೆಯವರಿಗೆ ಹಾಗೆ ಆಗದಂತೆ ಬುದ್ಧಿ ಹೇಳಿದರೂ ಪ್ರೇಮದ ಯಾತನೆ ಎಷ್ಟೆಂದು ತಿಳಿದೂ ನಾವು ಅದರೊಳಗೆ ಬೀಳುತ್ತೇವೆ. ಕಾರಣ ಪ್ರೀತಿಯ ಸೆಳೆತವೇ ಅಂಥದ್ದು. ಬೇಡವೆಂದರೂ ಬಿಡದೆ ತನ್ನೊಳಗೆ ಎಳೆದುಕೊಂಡು ಬಿಡುತ್ತದೆ, ಎಂಬುದನ್ನು ಕವಿ ನಿರೂಪಿಸುವುದು ಆಕರ್ಷಕವಾಗಿ ಓದುಗರನ್ನು ತನ್ನತ್ತ ಸೆಳೆಯುತ್ತದೆ.

ಹಾಗೆಂದು ಪ್ರೀತಿಸಿದವರೆಲ್ಲಾ ಮದುವೆಯಾಗಿ ಪ್ರೇಮವನ್ನು ಉಳಿಸಿಕೊಳ್ಳುತ್ತಾರೆ ಎಂದು ಹೇಳಲಾಗದು. ಕೆಲವು ಪ್ರೇಮಿಗಳ ಪಾಲಿಗೆ ಮದುವೆಯ ಅದೃಷ್ಟ ಒದಗಿ ಬರುವುದೇ ಇಲ್ಲ. ವಿರಹ ಗೀತೆಯಲ್ಲೆ ಉಳಿದು ಬಿಡುವಂತಾಗುತ್ತದೆ. ಮದುವೆಯಾಗುವ ಮೂಲಕ ಪ್ರೇಮಿಗಳ ಪ್ರೇಮ ಅಂತ್ಯವಾಗುವುದು ಇದೆ. ಆದರೆ ಕೆಲವರ ಪಾಲಿಗೆ ಮಾತ್ರ ಪ್ರೇಮ ಮದುವೆ ಎರಡೂ ಉಳಿದು ನಿರಾಳವಾಗುವುದು ಸಾಧ್ಯವಾಗುವುದು. ಪ್ರೇಮದ ಕಾವಾರಿದ ಬಳಿಕವು ಒಲವಿನ ಒರತೆ ಬತ್ತಿಹೋಗದಂತೆ ಕಾಯ್ದುಕೊಳ್ಳುತ್ತಾರೆ. 'ಮದುವೆ' ಕವಿತೆಯಲ್ಲಿ,

ಎಲ್ಲೊ ಕೆಲವರಿಗೆ ಮಾತ್ರ

ಪ್ರೇಮ ಮದುವೆ ಸುಸೂತ್ರ

ಕಾವಾರಿದ ನಂತರವು

ಕಾಪಾಡಿಕೊಳ್ಳುವರು ಒಲವು

ಕ್ಯಾಮರಾ ಕಣ್ಣು ; ಪು ; ೩೭೬

ಎನ್ನುವ ಮಾತುಗಳಲ್ಲಿ ಪ್ರೇಮದ ಸಾಫಲ್ಯ ಎಲ್ಲರಿಗೂ ಇಲ್ಲ. ಅದು ಕೆಲವರಿಗೆ ಮಾತ್ರ ಎಂಬುದನ್ನು ಸ್ಪಷ್ಟ ಪಡಿಸುತ್ತಾರೆ. ಪ್ರೇಮ ಎಲ್ಲರಲ್ಲೂ ಇರುವಂಥದು. ಎಲ್ಲರಿಗೂ ಅದು ಬೇಕಾಗಿರುವಂಥದು. ಆದರೆ ಎಲ್ಲಾ ಪ್ರೇಮಿಗಳು ಒಂದಾಗುವುದಿಲ್ಲ. ಹಾಗೆಯೇ ದೂರಾಗುವುದೂ ಇಲ್ಲ. ಪ್ರೇಮ ಪ್ರಕೃತಿ ಸಹಜವಾದ ಭಾವ. ಹಾಗಾಗಿಯೇ ಸಹಸ್ರಾರು ಪ್ರೇಮಕಥೆಗಳು ಹುಟ್ಟಿಕೊಂಡಿವೆ. ಪ್ರೇಮವೆಂಬುದಕ್ಕೆ ರಾಧ-ಮಾಧವರಿರುವ ತನಕ ಪ್ರೇಮಿಗಳು ಇರುತ್ತಾರೆ. ಪ್ರೇಮಕ್ಕೆ ವಿಭಿನ್ನ ಮುಖಗಳಿರುತ್ತವೆ, ಎನ್ನುವುದನ್ನು 'ನಿರಂತರ' ಕವಿತೆಯಲ್ಲಿ ಹೀಗೆ ಹೇಳುತ್ತಾರೆ.

ಕೆಲವರ ಪ್ರೇಮ ಹುಚ್ಚು ಹೊಳೆ
ಕೆಲವರಿಗೂ ಅದು ಮುಳ್ಳ ಮೆಳೆ
ಎಲ್ಲೊ ಕೆಲವರ ಪಾಲಿಗೆ ಪ್ರೇಮ
ಬತ್ತದ ಒಳಸೆಲೆ

ಕ್ಯಾಮರಾ ಕಣ್ಣು ; ಪು ; ೩೭೪

ಎಂದು ಹೇಳುವ ಕವಿಯ ಮಾತುಗಳಲ್ಲಿ ಪ್ರೇಮಿಸುವುದು, ಪ್ರೇಮಿಸಲ್ಪಡುವುದು ಮಧುರವಾದ ಅನುಭವವೇ ಸರಿ. ಆದರೆ ಅದು ಎಲ್ಲರಿಗೂ ಅಲ್ಲ. ಏಕೆಂದರೆ ಪ್ರೇಮಿಗಳಿಗೆ ಅಡ್ಡಿ ಆತಂಕಗಳೇ ಹೆಚ್ಚು. ಸಂಪ್ರದಾಯ, ತಂದೆ-ತಾಯಿಯರ ವಿರೋಧ, ಈ ಎಲ್ಲದರಿಂದ ದೂರಾಗಿ ಉಳಿಯುವವರು ಕೆಲವರು ಮಾತ್ರ. ಅದನ್ನೆ ಕವಿ ಹೇಳುವುದು. ಏನೇ ಅಡ್ಡಿ ಆತಂಕಗಳಿರಲಿ, ಪ್ರೇಮ ನಿರಂತರವಾದುದು. ಬತ್ತದ ಅಂತರಜಲ ಎಂದು ಹೇಳುತ್ತಾರೆ. ಪ್ರೇಮಿಗಳು ಬೇರೆ-ಬೇರೆಯಾದರೆ, ಪ್ರೇಮದ ಅರ್ಥ ಒಂದೇ, ಅದು ಸುಖವೇ ಆಗಲಿ, ದುಃಖವೇ ಆಗಲಿ, ನಿರಂತರವಾಗಿ ಸಾಗುತ್ತಲೆ ಇರುತ್ತದೆ ಎಂಬುದನ್ನು,

ಪ್ರೇಮಿಗಳು ಹಲವು ಥರ
ಪ್ರೇಮಕ್ಕುಂಟು ಹಲವು ಸ್ತರ
ದುರಂತವಿರಲಿ, ಸುಖಾಂತವಿರಲಿ
ಪ್ರೇಮ ನಿರಂತರ.

ಕ್ಯಾಮರಾ ಕಣ್ಣು ; ಪು ; ೩೭೪

ಎಂದು ವ್ಯಕ್ತ ಪಡಿಸುವ ಮಾತುಗಳಲ್ಲಿ ನಿರಂತರ ಬತ್ತದ ಚಿಲುಮೆಯಾದ ಪ್ರೇಮದ ಅಖ್ಯಾನ ಓದುಗರನ್ನು ತನ್ನತ್ತ ಸೆಳೆಯುತ್ತದೆ. ಜೊತೆಗೆ ಪ್ರೇಮದ ಅಸ್ತಿತ್ವದ ಸ್ವರೂಪವನ್ನು ಕವಿತೆಯಿಂದ ತಿಳಿಯಬಹುದು.

ಅಂತೆಯೇ ಪ್ರೀತಿಯ ಆಳ, ತೀವ್ರತೆ, ಅದರ ಸೆಳತಗಳು ಬದುಕಿನ ಅದಮ್ಯ ಚೈತನ್ಯ ಶಕ್ತಿ, ಪ್ರೀತಿಯ ಆದ್ರತೆ, ಮನಸ್ಸಿಗೆ ಮುದ ನೀಡುತ್ತದೆ. ಪ್ರೀತಿಯಲ್ಲಿ ನೋವು-ನಲಿವು, ಸಂಭ್ರಮ, ಹಿತ-ಅಹಿತ ಎಲ್ಲವು ಇದೆ. ಸೃಷ್ಟಿಯ ಚೈತನ್ಯಕ್ಕೆ ಪ್ರೀತಿಯೇ ಜೀವಜಲವಾಗಿದೆ. ಅವಿಲ್ಲದೆ ಬದುಕಿನಲ್ಲಿ ಯಾವುದು ಇಲ್ಲ ಎಂಬುದನ್ನು 'ಪ್ರೀತಿ' ಕವಿತೆಯ ಸಾಲುಗಳಲ್ಲಿ ಕವಿ ಪ್ರತಿಪಾದಿಸಿರುವುದು ಹೇಗೆಂದರೆ,

ಎಂಥ ಸೆಳೆತ ಈ ಪ್ರೀತಿ !
ಈ ಭೂಮಿಯ ರೀತಿ !
ಬಾಳಿಗರ್ಥ ಈ ನಂಟು
ಇದಿಲ್ಲದೆ ಏನುಂಟು

ಕ್ಯಾಮರಾ ಕಣ್ಣು ; ಪು ; ೩೮೮

ಎಂದು ಪ್ರೀತಿಯ ಮಹತ್ವವನ್ನು, ಅಗತ್ಯವನ್ನು ಹೇಳುವ ಕವಿ ಪ್ರೀತಿಯೇ ಎಲ್ಲವು. ಬದುಕಿಗೆ ಜೀವ ಸೆಲೆ ಅದಕ್ಕಾಗಿಯೇ ಪ್ರೀತಿಯ ಶಾಶ್ವತತೆಯನ್ನು ಓೀಗೆ ಹೇಳುತ್ತಾರೆ. ಪ್ರೀತಿ ಪರಿಧಿಯಲಿ ನಮ್ಮ ಪರಿಭ್ರಮಣ

ಪ್ರೀತಿಯ ಪಥ ನಮಗೆ
ನೋವು ನಲಿವಿನಲಿ ಸದಾ ಉಳಿದಿರಲಿ
ಈ ಪ್ರೀತಿಯ ಬೆಸುಗೆ

ಅದೇ ಪು ; ೩೮೮

. ಎಂಬುದರ ಮೂಲಕ ಪ್ರೀತಿಯೇ ಬದುಕಿನ ದಾರಿಯಾಗಲಿ. ಆ ದಾರಿಯ ಸುತ್ತಲೇ ನಮ್ಮ ಪಯಣ ಸಾಗಲಿ, ಪ್ರೀತಿಯ ಬೆಸುಗೆಯಿಂದ ಬದುಕು ಹಸನಾಗಲಿ, ಸಾರ್ಥಕತೆ ಪಡೆಯಲಿ ಎಂಬ ಸದಾಶಯವನ್ನು ಹೇಳುವ ಕವಿತೆಯ ಶೈಲಿ ಓದುಗರನ್ನು ಮೆಚ್ಚಿಸುತ್ತದೆ ಎಂದು ಹೇಳಬಹುದು.

ಪ್ರೀತಿಯೇ ಹಾಗೆ ಹದಿಹರೆಯದಲ್ಲಿ ಬರುವ ಈ ಪ್ರೀತಿಗೆ ಎಲ್ಲವು ಸುಂದರ, ಸೊಬಗು, ಬದುಕಿಗೆ ಭರವಸೆಯನ್ನೇ ನೀಡುವ ಪ್ರೀತಿಯ ನಗೆಯೊಂದಿದ್ದರೆ ಸಾಕು ಆತ್ಮಬಲ ಹೆಚ್ಚುತ್ತದೆ. ಹರೆಯದ ಕಣ್ಣಿಗೆ ಸೃಷ್ಟಿಯಲ್ಲಿನ ಕುರೂಪವು ಸೌಂದರ್ಯವನ್ನು ಪಡೆಯಬಲ್ಲದು. ಪ್ರೀತಿಸುವ ಮನಸ್ಸೆ ಹಾಗೆ, ಎಲ್ಲದರಲ್ಲು ಒಳಿತನ್ನೆ ಕಾಣುವ ಸೊಗಸನ್ನೆ ಕಣ್ತುಂಬಿಕೊಳ್ಳುವುದೇ ಆಗಿರುತ್ತದೆ. ನಲ್ಲೆಯ ಕಾಣುವಿಕೆಯಲ್ಲೆ ಎಲ್ಲಾ ಸುಖವನ್ನು ಕಾಣುವ ಮನಸ್ಸು ಅದಾಗಿರುತ್ತದೆ. ಅದನ್ನೆ ಕವಿ "ಹದಿಹರೆಯದ ಹಾಡು" ಕವಿತೆಯಲ್ಲಿ,

ಪ್ರೀತಿಯ ಒಂದು ನಗೆ
ಸಿಕ್ಕರೆ ಅದೇ ಸಾಕು ನನಗೆ
ಬದುಕಿ ಉಳಿಯುವೆನು ಭರವಸೆಯಲ್ಲಿ
ನಾನು ನಾಳೆವರೆಗೆ

ಕ್ಯಾಮರಾ ಕಣ್ಣು ; ಪು ; ೩೯೭

ಎಂಬುದರ ಮೂಲಕ ಪ್ರೀತಿಯ ಅನನ್ಯತೆಯನ್ನು ಹೇಳುವ ಅದರ ಸಾಮಾನ್ಯ ನಿರೂಪಣೆಯೇ ಓದುಗರನ್ನು ತನ್ನತ್ತ ಸೆಳೆಯುತ್ತದೆ.

ಬಿ.ಆರ್. ಲಕ್ಷ್ಮಣರಾವ್ ಅವರ ಕವಿತೆಗಳಲ್ಲಿ ವ್ಯಕ್ತವಾಗುವ ಪ್ರೀತಿ ಸಂಪ್ರದಾಯದ ಒಳಿತೋಟಿಯನ್ನು ಮೀರಿ ಹೊರಬರಲಾರದೆ ಹೋದರು. ಪ್ರೀತಿಯ ನೆನಪನ್ನು ಅನುಭವಿಸುತ್ತಲೆ, ಪ್ರೀತಿಯ ಉತ್ಕಟತೆಯನ್ನು ಸಾರುತ್ತವೆ. 'ಕುಂಟೋಬಿಲ್ಲೆ' ಕವಿತೆಯ ನಾಯಕಿ ಪ್ರೀತಿಗಾಗಿ ಪರಿತಪಿಸುತ್ತಾ ತಾನು ತೆಗೆದುಕೊಳ್ಳಬೇಕಾದ ನಿರ್ಧಾರದ ಚಿಂತೆಯಲ್ಲಿ ಮುಳುಗಿದ ಅವಳಿಗೆ ಪ್ರೀತಿಯ ಬಗ್ಗೆ ಉಂಟಾಗುವ ಅನುರಾಗ ಇನಿಯನ ರೂಪದ ಕಾಂತಿ ಮನಸ್ಸಿನಲ್ಲಿ ಮಿರುಗುತ್ತಿದ್ದರೂ, ಅಪ್ಪನ ಕೋಪ

ಅವಳನ್ನು ಕಂಗೆಡಿಸುತ್ತದೆ. ಒಂದು ಕಡೆ ಪ್ರೀತಿಯ ಸೆಳೆತ, ಮತ್ತೊಂದು ಕಡೆ ತಂದೆಯ ವಿರೋಧ. ಇವುಗಳ ಮಧ್ಯೆ ಸಿಲುಕಿ ಒದ್ದಾಡುತ್ತಾಳೆ. ಆದರೆ ಪ್ರೀತಿಯ ಸೆಳೆತಕ್ಕೆ ಮನಸೋತು ಸಂಪ್ರದಾಯ ಮೀರುವಳೇ ಎಂಬುದು ಮಾತ್ರ ಉತ್ತರವಿಲ್ಲದ ಪ್ರಶ್ನೆಯಾಗಿ ಬಿಡುತ್ತದೆ. ಎಂಬುದರಲ್ಲಿ ಕವಿಯ ನಿಲುವು ಏನೆಂಬುದರ ಬಗೆಗಿನ ನಿಲುವು ಕಾಣುತ್ತದೆ.

ಒಂದು, ಒಂದೊಂದೆ ಮನೆಯನು ದಾಟಿ
ಮೆಟ್ಟಿ ಜಿಗಿದಳೇ ತನ್ನೊಳತೋಟಿ
ಒಲವಿನ ಕರೆಗೆ
ತನ್ನ ಒಲವಿನ ಕರೆಗೆ ?
ಎನ್ನುವುದು ಮಾತ್ರ ಹಾಗೆ ಉಳಿದು ಬಿಡುತ್ತದೆ.

ಕ್ಯಾಮರಾಕಣ್ಣು ; ಪು ; ೩೯೮

ಪ್ರೀತಿ ಉಂಟಾದಾಗ ಎಲ್ಲವು ಸುಂದರ ಸೊಬಗೆ, ಪ್ರಕೃತಿಯಲ್ಲು ಸಡಗರ ಸಂಭ್ರಮವೇ. ಮನಸ್ಸಿಗೆ ಎಲ್ಲವು ಸುಖಾನಂದವೇ ಆಗುತ್ತದೆ. ಸಂಗಾತಿ ಜೊತೆಗಿದ್ದಾಗ ಒಲುಮೆಯ ಜೀವ ನದಿಯೇ ಹೊಮ್ಮುತ್ತದೆ, ಎಂಬುದನ್ನು ಸರಳವಾದ ಮಾತುಗಳಲ್ಲಿ ತಿಳಿಸುವ ಕವನದ ರೀತಿಯೇ ಮೆಚ್ಚುಗೆ ಪಡೆಯಲು ಕಾರಣವಾಗುತ್ತದೆ. ಪ್ರೀತಿಯ ಅರ್ಥವೇ ವಿಭಿನ್ನವಾದುದು. ಪ್ರೀತಿಗೆ ತನ್ನದೇ ಭಾಷೆ ಇದೆ, ಅರ್ಥವಿದೆ. ಸೋಲಿನಲ್ಲು ಗೆಲುವನ್ನು ಕಾಣುವ, ಪಡೆವುದೆಂದರೆ ಎಲ್ಲವನ್ನು ಸಮರ್ಪಿಸಿಕೊಳ್ಳುವ, ಎಷ್ಟು ಪಡೆದರೂ ಸಾಕೆನಿಸದ ಪ್ರೀತಿಯ ಮಾತು ಅಪ್ಪುಗೆ ಅದರಲ್ಲಿ ಎರಡು ಜೀವಗಳು ಒಂದಾಗುವ ಅರ್ಥವೇ ಪ್ರೀತಿ ಎಂಬುದನ್ನು 'ಅರ್ಥ' ಕವಿತೆಯಲ್ಲಿ ಪ್ರತಿಪಾದಿಸುವ ಸಂಯಮ ಪೂರ್ಣವಾದ ಭಾಷೆಯೇ ಓದುಗರ ಮೆಚ್ಚುಗೆ ಗಳಿಸುತ್ತದೆ ಎನ್ನಬಹುದು.

ಪ್ರೀತಿಗೆ ತನ್ನದೇ ಭಾಷೆ
ತನ್ನದೇ ವ್ಯಾಕರಣ
ನಾನೆಂದರೆ ಅಲ್ಲಿ ನೀನು
ನೀನೆಂದರೆ ನಾನು
ಗೆಲುವೆಂದರೆ ಅಲ್ಲಿ ಸೋಲು
ಸೋಲಿನಲ್ಲೂ ಗೆಲುವು
ನೋವಿನಲ್ಲೂ ನಲಿವು

ಕ್ಯಾಮರಾ ಕಣ್ಣು ; ಪು ; ೪೦೮

ಎಂಬುದರಲ್ಲಿ ಪ್ರೀತಿಯ ಅರ್ಥ ಪ್ರೇಮಿಗಳಿಗೆ ಬೇರೆಯದೇ ಆಗಿರುತ್ತದೆ. ಅದು ವಾಸ್ತವದಿಂದ ದೂರಾದ, ಬೇರೆಯದೇ ಆದ ಲೋಕದ ಬದುಕಾಗಿರುತ್ತದೆ. ಅಲ್ಲಿ ಎಲ್ಲವೂ ಸುಖವೇ

ಅಪ್ಯಾಯಮಾನವಾಗಿರುತ್ತದೆ. ಎಂಬುದನ್ನು ಸರಳವಾಗಿ ಹೇಳುವ ಧಾಟಿಯೇ ಮೆಚ್ಚುಗೆಗೆ ಪಾತ್ರವಾಗುತ್ತದೆ.

ಪ್ರೇಮವೇ ಹಾಗೆ ಎದೆಯ ಭಾವ ಹೊರಹೊಮ್ಮಿದ ಸೆಲೆಯಾಗಿ ಮನದ ಬಯಕೆ ಕೈಗೂಡಿದ ಸೆಲೆಯಲ್ಲಿ ಬರುತ್ತದೆ. ಎಲ್ಲವನ್ನು ಪುಳಕಗೊಳಿಸುವ ಶಕ್ತಿ ಇದೆ ಪ್ರೇಮಕ್ಕೆ ಎಂಬುದನ್ನು ಅವರ ಬಹುತೇಕ ಕವಿತೆಗಳಲ್ಲಿ ಕಾಣುತ್ತೇವೆ. ಇನಿಯನ ಬರುವಿಕೆಯೇ ಹೂವಿಗೆ ಪರಿಮಳವನ್ನು ತರುತ್ತದೆ. ಜೀವವೇ ಬಂದಂತಾಗುತ್ತದೆ. ಸವಿಯಾದ ಅನುಭವವನ್ನು ತರುತ್ತದೆ. 'ನಿನ್ನಿಂದ', ಪ್ರೇಮಗೀತೆ', 'ಸಾಲದೇ', 'ನೆರೆ', 'ಪ್ರೀತಿ', 'ಆಟ', 'ಕಣ್ಣು', ಇತ್ಯಾದಿ ಕವಿತೆಯಗಳಲ್ಲಿ ವ್ಯಕ್ತವಾಗುವ ಪ್ರೀತಿಯ ಸೆಳೆತವನ್ನು ಅದರಿಂದಾಗುವ ಭಾವಗಳನ್ನು ಪ್ರೇಮಿಗಳ ಮನದ ತವಕ-ತಲ್ಲಣಗಳನ್ನು ತುಡಿತ ಮಿಡಿತಗಳನ್ನು ಸರಳವಾದ ಭಾಷೆಯ ಮೂಲಕ ನಿರೂಪಿಸುವುದು ಜನಪ್ರಿಯತೆಗೆ ಕಾರಣವಾದ ಅಂಶವೆಂದು ಹೇಳಬಹುದು.

ಬಿ.ಆರ್. ಲಕ್ಷ್ಮಣರಾವ್ ಅವರು ಹದಿಹರೆಯದ ಪ್ರೀತಿ, ಪ್ರೇಮ, ಪ್ರಣಯದ ಬಗ್ಗೆ ಸ್ವಾನುಭವದ ನೆಲೆಯಲ್ಲಿಯೇ ಪ್ರೀತಿಯ ಅನನ್ಯತೆಯನ್ನು ಚಿರಪರಿಚಿತವಾದ ವಸ್ತು ವಿಷಯಗಳ ಮೂಲಕ ನಿರೂಪಿಸುವ ಸರಳ ಶೈಲಿಯೇ ಆಕರ್ಷಕವಾಗಿ ಓದುಗರನ್ನು ಸೆಳೆಯುವಲ್ಲಿ ಯಶಸ್ಸು ಕಾಣುತ್ತವೆ ಎಂದು ಗುರುತಿಸಬಹುದು. ಪ್ರೀತಿಯ ಆರ್ದ್ರತೆ, ಪ್ರೇಮದ ಸೆಳೆತ, ಬದುಕಿನ ಚಿರಂತನ ಜೀವ ಸೆಲೆಯಾಗುವ ಪ್ರೀತಿಯ ತೀವ್ರತೆ, ಪ್ರೇಮಿಗಳನ್ನು ಕಾಡುವ ಬಗೆಯನ್ನು, ಯಾವುದೇ ಉಪಮೆ, ರೂಪಕಗಳ ಮೂಲಕ ಕಟ್ಟಿಕೊಡದೆ, ಹೊಸ ವೇಷ ತೊಡಿಸದೆ ಕಣ್ಣಿಗೆ ಕಟ್ಟುವ ಹಾಗೆ ಪ್ರತಿಪಾದಿಸುವ ರೀತಿಯೇ ಆಕರ್ಷಕವಾಗುತ್ತದೆ ಎಂದು ಹೇಳಬಹುದು. ಇವರ ಪ್ರೇಮಗೀತೆಗಳು ಓದುಗರನ್ನು ಹೆಚ್ಚು ಆಕರ್ಷಿಸಲು ಇದೇ ಮುಖ್ಯ ಕಾರಣವೆಂದು ಹೇಳಬಹುದು.

ಪ್ರೀತಿಯ ಉತ್ಕಟತೆಯೊಂದಿಗೆ ಪ್ರೇಮಿಗಳಿಗೆ ಎದುರಾಗುವ ಸಾಮಾನ್ಯ ಅಡ್ಡಿ ಆತಂಕಗಳು, ಸಂಪ್ರದಾಯ ನಿಷ್ಠತೆ, ಕೌಟುಂಬಿಕ ಬಂಧನದಂಥ ಸಾಮಾನ್ಯ ಅಂಶಗಳೇ ಆದರೂ ಅದು ಕವಿತೆಗಳಲ್ಲಿ ವ್ಯಕ್ತವಾಗುವ ರೀತಿ ವಿಶಿಷ್ಟವೆನಿಸುತ್ತದೆ. ಇವರ ಕವಿತೆಗಳಲ್ಲಿ ಬರುವ ಪ್ರೇಮಿಗಳೆಲ್ಲ ಮಧ್ಯಮ ವರ್ಗಕ್ಕೆ ಸೇರಿದವರಾಗಿರುತ್ತಾರೆ. ಅದಕ್ಕಾಗಿಯೇ ಅವರ ಪ್ರೇಮಕ್ಕೆ ಒದಗುವ ಅಡೆ ತಡೆಗಳು ಮಧ್ಯಮ ವರ್ಗವನ್ನು ಅತಿಯಾಗಿ ಕಾಡುವ ಜಾತಿ, ಮತ, ಸಂಪ್ರದಾಯಗಳೇ ಆಗಿರುತ್ತವೆ. ಇಲ್ಲಿ ಬರುವ ಪ್ರೇಮಿಗಳು ಪ್ರೇಮದಲ್ಲಿ ಸಫಲರಾಗಿಲ್ಲ. ಅವರಲ್ಲಿ ನೆನಪಾಗಿ ಉಳಿದು ಕಾಡುವವರು ಹಲವರಿದ್ದಾರೆ. ಅದಕ್ಕಾಗಿಯೇ ಅವರು 'ಕಾಡಬೇಡ' ಕವಿತೆಯಲ್ಲಿ ಹೀಗೆ ಮೊರೆಯಿಡುತ್ತಾರೆ.

ಕೊಲ್ಲುವುದಾದರೆ ಕೊಂದು ಬಿಡು
ಹೀಗೆ ಕಾಡಬೇಡ

ಗಾಯಗೊಂಡಿರುವ ಹೃದಯವಿದು
ಚೆಲ್ಲಾಟವಾಡ ಬೇಡ

ಕ್ಯಾಮರಾ ಕಣ್ಣು ; ಪು ; ೪೦೨

ಎನ್ನುವಲ್ಲಿ ಕವಿಗೆ ಪ್ರೀತಿಯ ಸೆಳೆತ ಕಡಿಮೆಯಾಗಿ ಗೆಳತಿಯ ನೆನಪು ಈಗ ಬೇಡವಾಗುತ್ತದೆ. ಪ್ರೀತಿಯ ಸೆಳೆತವೇ ಹಾಗೆ. ಹದಿಹರೆಯಕ್ಕೆ ಮಾತ್ರ ಸೊಗಸು. ನಡುವಯಸ್ಸಿನಲ್ಲಿ ಬಂದರೆ ಮುಂಚಿನ ತೀವ್ರತೆಯಾಗಲಿ, ಸೊಬಗಾಗಲಿ ಉಳಿದಿರುವುದಿಲ್ಲ. ವಿರಹದ ತಾಪವೇ ನೋವಾಗಿರುತ್ತದೆ. ಅದಕ್ಕಾಗಿಯೇ ಕಾಳಾಗದೇ ಜೊಳ್ಳಾದ ಪ್ರೀತಿಯ ನೆನಪು ಬೇಡವೆಂದು ಹೇಳುವ ಪ್ರೇಮಿಯ ನಡೆ ಸಹಜವೆನಿಸುತ್ತದೆ. ಪ್ರೇಮ ದುರಂತವಾದಾಗ ಒಂದು ಪ್ರೀತಿಯನ್ನು ಮರೆತು ಮತ್ತೊಂದರ ಕಡೆಗೆ ಮನಸ್ಸು ವಾಲಿದರೂ ಅಲ್ಲಿಯು ಅವರಿಗೆ ಶೂನ್ಯವೇ ಉತ್ತರವಾದಾಗ ಪ್ರೇಮದ ಬಗೆಗಿನ ಅವರ ನಂಜಿಕೆಯೇ ಹುಸಿಯೆನಿಸುವುದು ಸರಿಯೆನಿಸುತ್ತದೆ.

ಸಂಗಾತಿಯನ್ನು ತೊರೆದ ಮನಸ್ಸು ನೋವಿನ ಕಣಜವಾಗಿದೆ. ಸಂಗಾತಿಯಿಲ್ಲದ ಬದುಕಿನಲ್ಲಿ ಪ್ರೇಮಿಗೆ ಯಾವುದರಲ್ಲೂ ಸುಖವಿಲ್ಲ, ನೆಮ್ಮದಿಯೂ ಇರುವುದಿಲ್ಲ. ಬದುಕು ಶೂನ್ಯದ ಕಡೆಗೆ ಸಾಗುತ್ತದೆ. ಅದಕ್ಕಾಗಿ ಪ್ರೇಮಿ ಅನುಭವಿಸುವ ಯಾತನೆಯೇ ಅವನನ್ನು ಸಾವಿನ ಕಡೆಗೆ ಸಾಗುವಂತೆ ಮಾಡುತ್ತದೆ. ಪ್ರೀತಿಯನ್ನು ಕಳೆದುಕೊಂಡು ಪ್ರೇಮಿಯಿಂದ ದೂರಾದವನ ಅವಸ್ಥೆಯನ್ನು ಹೀಗೆ ಹೇಳುತ್ತಾರೆ ಕವಿ ಲಕ್ಷ್ಮಣರಾಯರು 'ನೀನಿರದೆ' ಕವಿತೆಯಲ್ಲಿ,

ಏನಿದ್ದೇನು ? ಎಲ್ಲಾ ಬರಿದು ನೀನಿರದೆ
ಹೋಗಿದೆ ನೆಮ್ಮದಿ ನನ್ನನು ತೊರೆದು, ನೀನಿರದೆ
ಎಲ್ಲಿದ್ದವೊ ಈ ಯಾತನೆ ಭೀತಿ ಹತಾಶೆಗಳು
ಹೊಕ್ಕಿವೆ ನನ್ನೆದೆ ಕದವನು ತೆರೆದು ನೀನಿರದೆ

ಕ್ಯಾಮರಾ ಕಣ್ಣು ; ಪು ; ೪೦೪

ಎನ್ನುತ್ತಾ ಹತಾಶೆಯ ಕಡೆಗೆ ಮನಸ್ಸು ಸಾಗುತ್ತಿದೆ ಎಂಬ ವಿಷಾದದ ನೋವು ವ್ಯಕ್ತವಾಗಿದೆ. ಪ್ರೇಮದ ನಂಟು ಕಳಚಿದ ಮೇಲೆ ಬಾಳು ಶೂನ್ಯವೇ ತಾನೆ, ಅದಕ್ಕಾಗಿ ಬದುಕೆ ಬೇಡವೆನ್ನುವ ತೀರ್ಮಾನಕ್ಕೆ ಬರುತ್ತದೆ ಮನಸ್ಸು.

ತೀರಿದೆ ಈ ಜಗದೊಡನೆ ನನ್ನೆಲ್ಲ ಸಂಬಂಧ
ಕಾದಿರುವೆನು ನಾ ಸಾವನು ಕರೆದು, ನೀನಿರದೆ

ಕ್ಯಾಮರಾ ಕಣ್ಣು ; ಪು ; ೪೦೪

ಹತಾಶೆಯೇ ಹಾಗೇ ಅದು ಶೂನ್ಯ ಬದುಕನ್ನು ಬರಿದು ಮಾಡಿ ಬಿಡುವುದು. ವಿರಹವೆಂಬುದೇ ಹಾಗೆ ಮಾಡಿಬಿಡುತ್ತದೆ. ಬದುಕಿನ ಅರ್ಥವಾಗಿ ಚೈತನ್ಯವಾಗಿದ್ದ ಸಂಗಾತಿಯೇ ಇಲ್ಲವಾದ ಮೇಲೆ

ಬದುಕೇಕೆ ಎನ್ನುವ ಭಾವನೆಗಳು ಎಲ್ಲ ಪ್ರೇಮಿಗಳನ್ನು ಕಾಡುವ ನೋವಿನಾಳವನ್ನು ಆ ಮೂಲಕ ಅವರ ಅಂತರಂಗವನ್ನು ಈ ಕವಿತೆ ತೆರೆದಿಡುತ್ತದೆ.

ಆದಕ್ಕೆ ಪ್ರೇಮಿ ಮನಸ್ಸಿಗೆ ತಿಳಿ ಹೇಳುತ್ತಾನೆ. ಕಹಿ ನೆನಪಾಗಿ ದೂರಾದ ಅವಳ ನೆನಪೇ ಮನಸ್ಸಿಗೆ ಸಿಹಿಯಾಗಿದೆ. ಬೇಡ-ಬೇಡವೆಂದರು ಮನಸ್ಸು ಆ ನೆನಪಿಗಾಗಿ ಅವಳ ಇರುವಿಕೆಯನ್ನು ಪದೇ-ಪದೇ ಕಣ್ಮುಂದೆ ತರುವುದರಿಂದಾಗಿ ಪ್ರೇಮಿಗೆ ಯಾತನೆಯಾಗುತ್ತದೆ. ಗೋರಿಯಾದ ಪ್ರೀತಿಯನ್ನು ಮತ್ತೆ ಮನಸ್ಸು ಬಗೆದು ತೆಗೆಯುವುದು ಬೇಡವೆಂದು ಮನಸ್ಸಿಗೆ ಹೇಳುತ್ತಾನೆ. ಪ್ರೇಮದಿಂದ ವಂಚಿತವಾದ ಎಲ್ಲ ಪ್ರೇಮಿಗಳು ಹೇಳುವ ಮಾತೆಂಬುದನ್ನು ಚಿತ್ರಿಸಲಾಗಿರುವ ಕವಿತೆ 'ಮನಸೇ' ಎಂಬುದರಲ್ಲಿ,

ಮಣ್ಣಾಗಿದೆ ನನ್ನ ಪ್ರೀತಿ
ಹೃದಯದ ಗೋರಿಯಲ್ಲಿ
ಗೋರಿಯನ್ನೇಕೆ ಬಗೆಯುವೆ
ಮೋಹದ ಹಾರೆಯಲ್ಲಿ ?

ಕ್ಯಾಮರಾ ಕಣ್ಣು : ಪು : ೪೦೫

ಎನ್ನುವಲ್ಲಿ ಪ್ರೀತಿ ದೂರಾದರೂ ಮನಸ್ಸು ಮಾತ್ರ ಮೋಹದಿಂದ ಹೊರ ಬರಲಾರದು. ಅದರಲ್ಲೇ ಮುಳುಗಿರುತ್ತದೆ. ಪ್ರೇಮಿ ದೂರಾಗಬೇಕೆಂದರೂ ನೆನಪಾಗಿ ಮುಂದೆ ತಂದು ನಿಲ್ಲಿಸುವ ಮನಸ್ಸಿಗೆ ಕೋರಿಕೆ ಸಲ್ಲಿಸುತ್ತಿರುವ ಪ್ರೇಮಿಯ ಆರ್ತ ಮೊರೆಯನ್ನು ಕವಿ ಅಭಿವ್ಯಕ್ತಿಸುವ ರೀತಿಯೇ ಓದುಗರಿಗೆ ಮೆಚ್ಚುಗೆಯಾಗುತ್ತದೆ. ಅದೇ ಧಾಟಿಯಲ್ಲಿ ಕವಿ ಅಭಿವ್ಯಕ್ತಿಸುವ ಭಾವ 'ನೆನಪು' ಕವಿತೆಯಲ್ಲಿ ಬಂದಿದೆ. ಪ್ರೀತಿ ಎಂದೆಂದಿಗೂ ಮರೆಯಲಾಗದ್ದು, ಮರೆಯುವುದು ಅಸಾಧ್ಯವೇ. ಮನಸ್ಸು ಇರುವ ತನಕ ಕಲ್ಪನೆ ಮಾಡುವ, ಕನಸು ಕಟ್ಟುವ ಶಕ್ತಿಯಿರುವ ತನಕ, ಪ್ರೀತಿಯ ನೆನಪು ಅಳಿಯುವುದೇ ಇಲ್ಲ. ಮರೆತು ಬಿಡುತ್ತೇವೆ ಎನ್ನುವುದು ಆತ್ಮ ವಂಚನೆಯೇ ಹೊರತು ಅದು ಪ್ರಾಮಾಣಿಕವಾದ ಮಾತುಗಳಲ್ಲ. ಅದನ್ನೇ ಕವಿ ಹೇಳುವ ರೀತಿಯೆಂದರೆ,

ಆತ್ಮ ವಂಚಕರು ನಾವು, ಪ್ರಿಯ
ಆತ್ಮ ವಂಚಕರು ನಾವು
ಮರೆತೆ ಎಂದೆ ನೀ ನನ್ನ
ಮರೆತೆನೆಂದೆ ನಾ ನಿನ್ನ
ಮರೆಯ ಬಲ್ಲೆವೆ ನಾವು ಪ್ರಿಯ
ಪಡೆದ ನಲಿವು ನೋವು ?
ಮನಸು ನಮಗಿರುವ ತನಕ

ಕನಸು ನಮಗಿರುವ ತನಕ
ಅಳಿಯಬಲ್ಲದೇ ನೆನಪು, ಪ್ರಿಯ ?
ನೆನಪಿಗೆ ಅಲ್ಲಿದೆ ತಾವು

– ಕ್ಯಾಮರಾ ಕಣ್ಣು ; ಪು ; ೪೯೯

ಎನ್ನುವ ಮಾತಿನಲ್ಲಿ ವ್ಯಕ್ತವಾಗುವ ಅಂಶವೆಂದರೆ ಪ್ರೀತಿ ಒಮ್ಮೆ ಹುಟ್ಟಿದ ಮೇಲೆ ಎಂದಿಗೂ ಸಾಯುವುದಿಲ್ಲ. ಪ್ರೇಮಿಗಳಿಗೆ ಸಾವು ಇದೆ, ಪ್ರೇಮಕ್ಕೆ ಸಾವಿಲ್ಲ ಎನ್ನುವ ಮಾತಿನಂತೆ ಇಲ್ಲಿ ಮನಸ್ಸು ಇರುವವರೆಗೂ ಪ್ರೀತಿ ಅಜರಾಮರವಾಗಿ ಉಳಿಯುವುದು. ಅದು ಜೀವಂತವಾಗಿರುವುದು ನೆನಪುಗಳಲ್ಲಿ ಎಂಬ ಕಟು ಸತ್ಯವನ್ನು ಸ್ಪಷ್ಟಪಡಿಸಿದ್ದಾರೆ.

ವಿರಹ ತಾಪವನ್ನು ಅನುಭವಿಸುವ ಪ್ರೇಮಿಗಳ ತಹತಹಿಸುವಿಕೆ, ಅವರನ್ನು ಕಾಡುವ ಒಂಟಿತನ, ಪ್ರಕೃತಿಯು ಚೈತನ್ಯ ಕಳೆದುಕೊಂಡಂತಾಗುವುದು, ಎಲ್ಲದರಲ್ಲು ನೀರಸ ಭಾವವೇ ವ್ಯಕ್ತವಾಗುವ ಅಂಶಗಳನ್ನು 'ನೀನಿಲ್ಲದೆ ನಲ್ಲೆ' ಕವಿತೆಯಲ್ಲಿ

ಸ್ಮಶಾನವಾಗಿದೆ ಈ ಮನದಂಗಣ ನೀನಿಲ್ಲದೆ ನಲ್ಲೆ
ನೆನಪು ಭೂತಗಳ ರಿಂಗಣ ರಿಂಗಣ ನೀನಿಲ್ಲದೆ ನಲ್ಲೆ
ಭರವಸೆ ಹೊಂಗನಸಿಲ್ಲ, ಇಲ್ಲಿ ರವಿ ಚಂದಿರ ತಾರೆ
ಕವಿದ ಕಾರಿರುಳು ಈಗ ಇಡೀ ದಿನ ನೀನಿಲ್ಲದೆ ನಲ್ಲೆ

ಕ್ಯಾಮರಾ ಕಣ್ಣು ; ಪು ; ೪೩೪

ಎಂದು ವಿರಹಿ ಪ್ರೇಮಿಯ ಮಾನಸಿಕ ಸ್ಥಿತಿಯನ್ನು ಪ್ರತಿಪಾದಿಸುವಲ್ಲಿ ಈ ಸಾಲುಗಳು ಶಕ್ತವಾಗಿವೆ ಎಂದು ಹೇಳಬಹುದು. ಪ್ರೀತಿ ಇದ್ದಾಗ, ಪ್ರೇಮಿಗಳು ಪರಸ್ಪರ ಮನಸ್ಸು ಬಿಚ್ಚಿಡುವಾಗ, ಆಡುವ ಮಾತುಗಳಲ್ಲಿ ವ್ಯಕ್ತವಾಗುವ ಭಾವನೆಗಳು ಎಲ್ಲವು ಒಬ್ಬರಿಗೊಬ್ಬರು ಉತ್ಪ್ರೇಕ್ಷೆಯಿಂದ ಹೊಗಳಿಕೊಂಡು ಇಂದ್ರ, ಚಂದ್ರ, ನೀನಿಲ್ಲದೆ ಬದುಕಿಲ್ಲ ಎನ್ನುವ ಮಟ್ಟಿಗೆ ಇದ್ದವರು ದೂರಾದಾಗ ಒಬ್ಬರ ಮೇಲೆ ಮತ್ತೊಬ್ಬರು ಪರಸ್ಪರ ದೂರುವುದಕ್ಕೆ ಪ್ರಾರಂಭಿಸುತ್ತಾರೆ. ಅದು ವಿರಹದ ಉರಿಯಲ್ಲಿ ಬೇಯುವ ಪ್ರೇಮಿಗಳು ಮನಸ್ಸಿಗೆ ಹೇಳುವ ಮಾತು. ಈ ದುಃಖ ನಿರಾಶೆ ಕಂಬನಿಯೆಲ್ಲ ವ್ಯರ್ಥ. ಮರೆತು ಬಿಡು ಅವನನ್ನು ಮನಸೇ ಎಂದು ಅವರವರೇ ಹೇಳಿಕೊಳ್ಳುತ್ತಾರೆ. ನಲ್ಲೆ ನಲ್ಲನನ್ನು ಮರೆಯುವಂತೆ ನಲ್ಲ ನಲ್ಲೆಯನ್ನು ಮರೆತು ಬಿಡು ಎಂದು ಮನಸ್ಸಿಗೆ ಮೊರೆ ಸಲ್ಲಿಸುವ ರೀತಿ ಹೇಗೆ ವ್ಯಕ್ತವಾಗಿದೆ ಎಂದರೆ,

ನನ್ನ ಬಾಳಿನ ಸಿರಿಯೇ ನನ್ನ ಹೃದಯದ ದೊರೆಯೇ
ಎಂದವಳು ನಿನ್ನೆ ತನಕ
ಇಂದು ನಿರ್ಭಾವದಲಿ ಕೇಳುವಳು ಯಾರು ನೀ ?
ಮರೆತು ಬಿಡು ಅವಳನ್ನು ಮನವೇ

ಕ್ಯಾಮರಾ ಕಣ್ಣು ; ಪು ; ೪೩೫

ಎಂದು ನಲ್ಲೆಯ ಬಗ್ಗೆ ಹೇಳುತ್ತಾನೆ. ಹಾಗೆಯೇ ನಲ್ಲೆ ನಲ್ಲನಿಗೆ ಹೀಗೆ ಹೇಳುತ್ತಾಳೆ.

ನನ್ನ ಪ್ರೀತಿಯ ಸೆಲೆಯೇ, ನನ್ನ ಶಕುಂತಲೆಯೇ
ಎಂದವನು ನಿನ್ನ ತನಕ
ಇಂದು ಕೇಳುವನಲ್ಲ "ಉಂಗುರವ ತೋರು ನೀ"
ಮರೆತು ಬಿಡು ಅವನನ್ನು ಮನವೇ

ಕ್ಯಾಮರಾ ಕಣ್ಣು ; ಪು ; ೪೩೬

ಎನ್ನುವ ಎರಡು ಸೆಲೆಯಲ್ಲಿ ವ್ಯಕ್ತವಾಗುವ ಪ್ರೇಮಿಗಳ ಯಾತನೆಯ ಮಾತುಗಳು ಸಾಮಾನ್ಯವಾಗಿ ಪ್ರೀತಿಯಿಂದ ದೂರಾಗಿ ಹೋದ ಪ್ರೇಮಿಗಳ ಮನಸ್ಸಿನ ಭಾವನೆಗಳು ಇಲ್ಲಿ ನೈಜವಾಗಿ ಮೂಡಿ ಬಂದಿವೆ. ಯಾವುದೋ ಒತ್ತಡಕ್ಕೆ ಸಿಕ್ಕಿಯೋ, ಭಯದಿಂದಲೋ ಸಂಗಾತಿ ಏನನ್ನು ಹೇಳದೆ, ಇದ್ದಕ್ಕಿದ್ದಂತೆ ದೂರಾಗಿ ಹೋದಾಗ ಅವನನ್ನು ಕಾಡುವ ಪ್ರಶ್ನೆ, ಯಾವ ಕಾರಣಕ್ಕೆ ನನ್ನಿಂದ ನೀ ದೂರಾದೆ ಎಂಬುದನ್ನು ಹೇಳಿ ಹೋಗು ಎಂದು ಒತ್ತಾಯಿಸುವ ಮಾತುಗಳು 'ಕಾರಣ' ಕವಿತೆಯಲ್ಲಿ ಹೀಗೆ ಬರುತ್ತವೆ.

ಒಲವೆಂಬ ಹಣತೆ ಎದೆಯಲ್ಲಿ ಬೆಳಗಿ
ಬೆಳಕಾದೆ ಬಾಳಿಗೆ
ಇಂದೇಕೆ ಹೀಗೆ ಬೆಳಕನ್ನು ತೊರೆದು
ನೀ ಸರಿದೆ ನೆರಳಿಗೆ ?

ಕ್ಯಾಮರಾ ಕಣ್ಣು ; ಪು ; ೪೩೮

ಮನಸ್ಸಿನಲ್ಲಿ ಅನುರಾಗದ ಬೀಜ ನೆಟ್ಟು ಸವಿಯಾದ ಭಾವಗಳಿಗೆ ನಾದವಾಗಿ ಬಂದು ಜೊತೆಯಾಗಿ ಹಾಡಿದ ಸಂಗಾತಿ ಪ್ರೀತಿಯ ಗಿಡ ನೆಟ್ಟು ಮರವಾಗಿ ಫಲ ಬಿಡುವ ವೇಳೆಗೆ ಧರೆಗುರುಳುವಂತೆ ಈ ಬಾಳಿನಿಂದ ದೂರಾದಾಗ ಸಂಗಾತಿಗೆ ಕೇಳುವ ಪ್ರಶ್ನೆ ಏನೆಂದರೆ ಹೇಳದೆ-ಕೇಳದೆ ಮರೆಯಾಗುವ ಮುನ್ನ ಕಾರಣ ಹೇಳಿ ಹೋಗು ಎಂದು ಜಗ್ಗಿಸಿ ಕೇಳುವ ನಲ್ಲನ ಈ ಮಾತುಗಳು ಪ್ರೇಮದಿಂದ ದೂರಾದ ಮನಸ್ಸಿನಲ್ಲಿ ಹುಟ್ಟುವ ಪ್ರಶ್ನೆಗಳು ಯಾವ್ಯಾವ ಬಗೆಯಲ್ಲಿರುತ್ತವೆ ಎಂಬುದರ ಚಿತ್ರಣ ನೀಡುವ ಕವಿತೆಯ ವಸ್ತು ಸಾಮಾನ್ಯವೆಂಬಂತೆ ಸಹಜವಾಗಿ ಮೂಡಿ ಬಂದಿದೆ.

ಪ್ರೀತಿಸುವ ಹೃದಯಗಳಿಗೆ ಜಗತ್ತೇ ಹಗೆಯಾಗುತ್ತದೆ. ಎಲ್ಲ ಪ್ರೀತಿಯು ಗೆಲ್ಲುವುದಿಲ್ಲ. ಪ್ರೀತಿಯು ಸಫಲತೆ ಕಾಣುವುದು ಅಷ್ಟು ಸುಲಭವೇನಲ್ಲ. ಪ್ರೇಮಿಗಳಿಗೆ ಎದುರಾಗುವ ಅಡೆ-ತಡೆಗಳು ಹಲವು, ಅವೆಲ್ಲವನ್ನು ಮೀರುವ, ಗೆಲ್ಲುವ, ಎದುರಿಸುವ ಎದೆಗಾರಿಕೆ, ಎಲ್ಲ ಪ್ರೇಮಕ್ಕು ಇರುವುದಿಲ್ಲ. ಅದರಿಂದಾಗಿ ಕೆಲವು ಪ್ರೇಮ ಗೆಲ್ಲುತ್ತವೆ, ಕೆಲವು ಸೋಲುತ್ತವೆ, ಮತ್ತೆ ಕೆಲವು ಸಾಯುತ್ತವೆ ಕೂಡ. ಅದೇ ಪ್ರೀತಿಯ ರೀತಿಯಾಗಿರುತ್ತದೆ. ಈ ಜಗತ್ತು ಪ್ರೇಮಿಗಳನ್ನು ಒಂದು ಮಾಡುವುದಕ್ಕೆ ಬಿಡದಿರಲು

ಹಲವು ಕಾರಣಗಳಿವೆ. ಜಾತಿ ಮತದ ಅಡ್ಡ ಗೋಡೆಗಳು, ಹಣ ಅಂತಸ್ತು, ಅಧಿಕಾರ, ಘನತೆ ಎಂಬ ಪ್ರತಿಷ್ಠೆಗಳು, ಸಂಪ್ರದಾಯದ ಬಂಧನಗಳು ನೂರಾರು. ಇವೆಲ್ಲವನ್ನು ಎದುರಿಸಬೇಕಾದ ಅನಿವಾರ್ಯತೆ ಪ್ರೇಮಿಗಳಿಗೆ, ಆದರೆ ಪ್ರೀತಿಗೆ ಇದೆಲ್ಲವನ್ನು ಮೀರುವ, ಗೆಲ್ಲುವ ಶಕ್ತಿ ಇದೆ. ಪ್ರೀತಿಯೇ ಹಾಗೆ ತಡೆ ಹಿಡಿದಷ್ಟು ಮೇಲೆ ಚಿಮ್ಮುತ್ತ ಹರಿಯುತ್ತವೆ. ಅವನ್ನೆಲ್ಲಾ ಕವಿ 'ಪ್ರೀತಿಯ ರೀತಿ' ಕವಿತೆಯಲ್ಲಿ ಹೀಗೆ ಹೇಳುತ್ತಾರೆ. ೧

ಜಗವೇ ನಮಗಿಂದು ಹಗೆಯಾಗಿದೆ
ಬೇರಾಗಬೇಕೆಂದಿದೆ ನಾವು
ದೂರಾಗಬೇಕೆಂದಿದೆ
ಕುಲವೇ ನಮಗಿಂದು ಹೊಲೆಯಾಗಿದೆ
ತಲೆ ಬಾಗಬೇಕೆಂದಿದೆ ಪ್ರೀತಿ
ಬಲಿಯಾಗಬೇಕೆಂದಿದೆ
ಎಲ್ಲೆಲ್ಲೂ ಅಡ್ಡಗೋಡೆ, ಎಲ್ಲೆಲ್ಲೂ ಮುಳ್ಳು ಬೇಲಿ
ಏನೇನೋ ಕಟ್ಟುಪಾಡು, ಪ್ರೀತಿಯ ಹಾದಿಗೆ
ಕಾವಲು ಸೇನೆ ಸಜ್ಜಾಗಿದೆ ನಮ್ಮನ್ನು ಸದೆ ಬಡಿಯಲು

ಕ್ಯಾಮರಾ ಕಣ್ಣು ; ಪು ; ೪೫೬

ಎಂಬ ಸಾಲುಗಳಲ್ಲಿ ಪ್ರೇಮಿಗಳಿಗಿರುವ ಅಡ್ಡಿ ಆತಂಕಗಳನ್ನು ಕವಿ ಅಭಿವ್ಯಕ್ತಿಸುವ ಸರಳ ಸುಲಭ ಆಕರ್ಷಕವಾದ ಶೈಲಿ ಓದುಗರಿಗೆ ಮೆಚ್ಚುಗೆಯಾಗುತ್ತದೆ. ಆದರೂ ಪ್ರೀತಿಗೆ ಎಷ್ಟು ಬಂಧನ ದಿಗ್ಬಂಧನಗಳಿದ್ದರೂ ಭಯವಿಲ್ಲ.

ಜಗವೇ ನಮಗಿಂದು ಹಗೆಯಾದರೂ
ದಿಗಿಲುಂಟೇ ಪ್ರೀತಿಗೆ ? ಬೇರೆ
ಮಿಗಿಲುಂಟೇ ಪ್ರೀತಿಗೆ ?

ಪ್ರೀತಿಯ ಮುಂದೆ ಎಲ್ಲ ಕಷ್ಟಗಳು ತೃಣವಾಗುತ್ತದೆ. ಪ್ರೀತಿಗೆ ಯಾರ ಭಯವು ಇರುವುದಿಲ್ಲ ಎಂದು ಸಾಮಾನ್ಯ ಭಾಷೆಯಲ್ಲೆ ಪ್ರೀತಿಯ ಚಿರಂತನತೆಯನ್ನು ಸಾರುತ್ತಾರೆ. ಬದುಕನ್ನು ಅರಳಿಸಲು, ಹಾಗೆಯೇ ಕಮರಿಸಿ ಕತ್ತಲೆಗೆ ನೂಕಲು ಪ್ರೀತಿಯ ಸೆಲೆಯೊಂದೆ ಸಾಕು ಎನ್ನುವುದು ಸಹಜ. ಜೀವನದ ನೋವು–ನಲಿವುಗಳೆಲ್ಲ ನಲ್ಲೆಯ ವರ್ತನೆಗಳ ಮೇಲೆ ನಿಂತಿರುತ್ತವೆ ಎಂಬುದನ್ನು 'ಸಾಲದೇ' ಕವಿತೆಯ ಸಾಲುಗಳಲ್ಲಿ,

ನಿನ್ನ ಕಿರುನಗೆಯೊಂದೇ ಸಾಲದೇ ಓ ನಲ್ಲೆ
ಈ ಬಾಳು ಬೆಳಕಾಗಲು ?

ನಿನ್ನ ಬಿರುನುಡಿಯೊಂದು ಸಾಲದೇ ಕ್ಷಣದಲ್ಲೆ
ಆವರಿಸಲು ಕತ್ತಲು.
ನನ್ನ ಕಂಗಳ ಒಂದು ಉರಿ ನೋಟ ಸಾಲದೇ
ಧಗಧಗಿಸಲು ಜೀವನ ?
ನಿನ್ನ ತುಟಿಗಳ ಒಂದು ಸವಿ ಮುತ್ತು ಸಾಲದೇ
ಹೊಮ್ಮಿಸಲು ಹೊಸ ಚೇತನ ?

ಕ್ಯಾಮರಾ ಕಣ್ಣು ; ಪು ; ೪೬೩

ಪ್ರೀತಿಯೇ ಹಾಗೆ, ನಲ್ಲೆಯ ಮಾತುಗಳೆ ಹಾಗೇ, ಬದುಕನ್ನು ಅರಳಿಸಲು, ಇಲ್ಲವೇ ಕಬಳಿಸಲು, ಬದುಕಿನ ಅಳಿವು-ಉಳಿವು ಪ್ರೀತಿಯ ಮೇಲೆ ನಿಂತಿದೆ, ನಲ್ಲೆಯ ಒಂದು ನೋಟ, ಒಂದು ನುಡಿ, ಒಂದು ಆಲಿಂಗನ. ಒಂದು ಮುತ್ತೆ ಸಾಕು ಬದುಕಿನ ಏನೆಲ್ಲಾ ಸಾಧನೆಗಳಿಗೆ ಜೀವ ತುಂಬುತ್ತದೆ. ಆದರೆ ಅದಕ್ಕೆ ವ್ಯತಿರಿಕ್ತವಾದರೆ ಬದುಕು ಅಸ್ತ-ವ್ಯಸ್ತವಾಗುತ್ತದೆ, ಎಂಬುದನ್ನು ಸಹಜ ನುಡಿಗಳಲ್ಲಿ ಎಲ್ಲರ ಅನುಭವದ ರೀತಿಯಲ್ಲಿ ಹೇಳುವುದು ಕವಿತೆಯ ವೈಶಿಷ್ಟವಾಗಿದೆ. ಅದೇ ಓದುಗರ ಮೆಚ್ಚುಗೆಗೂ ಕಾರಣವಾಗುತ್ತದೆ ಎಂದು ಹೇಳಬಹುದಾಗಿದೆ.

ಬಿ.ಆರ್. ಲಕ್ಷ್ಮಣರಾವ್ ಅವರ ಕಾವ್ಯದಲ್ಲಿ ಹೆಚ್ಚಿನ ಗೀತೆಗಳು ಪ್ರೇಮ, ಪ್ರೀತಿ, ಪ್ರಣಯವನ್ನು ಕುರಿತ ವಸ್ತು ವಿಷಯಗಳಿಗೆ ಸಂಬಂಧಿಸಿವೆ ಎಂಬುದು ಸ್ಪಷ್ಟವಾಗುತ್ತದೆ. ಸಹಜವಾಗಿಯೇ ಹದಿಹರೆಯದವರನ್ನು ಸದಾ ಕಾಡುವ ಈ ಅಂಶಗಳೇ ಅವರ ಕವಿತೆಗಳಲ್ಲಿ ವ್ಯಕ್ತವಾಗುವ ವಿಷಯಗಳಾಗಿರುವುದರಿಂದ ಕಾವ್ಯ ಜನಪ್ರಿಯವಾಗಲು ಈ ಅಂಶಗಳು ಕಾರಣವೆಂದು ಹೇಳಬಹುದು. ಲಕ್ಷ್ಮಣರಾವ್ ಅವರ ಕವಿತೆಗಳಲ್ಲಿ ಬರುವ ಪ್ರೇಮಿಗಳು ಮಧ್ಯಮ ವರ್ಗಕ್ಕೆ ಸೇರಿದವರಾಗಿದ್ದಾರೆ. ಅವರಿಂದಾಗಿಯೇ ಈ ವರ್ಗದ ಸುತ್ತವೇ ಅವರ ಕಾವ್ಯಾನುಭವವು ಸುತ್ತುತ್ತಿದೆ. ತಮ್ಮ ಅನುಭವಕ್ಕೆ ಮುಟ್ಟಿದ್ದನ್ನು, ತಟ್ಟಿದ್ದನ್ನು ಮಾತ್ರ ಇಲ್ಲಿ ಅಭಿವ್ಯಕ್ತಿಸಿದ್ದಾರೆ. ಹಾಗಾಗಿ ಅವರ ಪ್ರೇಮ ಕವಿತೆಗಳು ವರ್ತಮಾನಕ್ಕೆ ಹತ್ತಿರವಾಗುತ್ತವೆ. ತತ್ಕಾಲಕ್ಕೆ ಹತ್ತಿರವಾಗಿ ಬರೆಯುವ ಮಾರ್ಗವೇ ಅವರಿಗೆ ಜನಪ್ರಿಯತೆಯನ್ನು ಗಳಿಸಿಕೊಡುತ್ತದೆ ಎಂದು ಹೇಳಬಹುದು. ಹದಿಹರೆಯದ ಸಹಜ ಭಾವನೆಗಳ ಬಗ್ಗೆ ಲವಲವಿಕೆಯಿಂದ ಬರೆದಿದ್ದಾರೆ. ಅವರ ಕವನಗಳಲ್ಲಿ ಕಾಮವು ಪೂರ್ವ ತಾರುಣ್ಯದ ನೆಲೆಯಲ್ಲಿಯೇ ವ್ಯಕ್ತವಾಗಿದೆ. ಕುತೂಹಲಕ್ಕೆ ಕಾರಣವಾಗುವ ಮೂಲಕ ಓದುಗರ ಮೆಚ್ಚುಗೆ ಗಳಿಸುತ್ತದೆ. ಯೌವ್ವನ ಸಹಜವಾದ ಮೋಹಕತೆಯನ್ನು ಉಳಿಸಿಕೊಡುವ ರೀತಿಯಲ್ಲಿ ಅವರ ಪ್ರೇಮ ಕವಿತೆಗಳು ಸದಾ ಕಾಲ ಓದುಗರನ್ನು ಆಕರ್ಷಿಸುತ್ತವೆ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಬಿ.ಆರ್. ಲಕ್ಷ್ಮಣರಾವ್ ಅವರ ಪ್ರೇಮ ಕವಿತೆಗಳಲ್ಲಿ ವ್ಯಕ್ತವಾಗುವ ಅನುಭವಗಳೆಲ್ಲಾ ಹದಿಹರೆಯದ ಪ್ರೇಮಿಗಳ ಅನುಭವವೇ ಆಗುವುದರಿಂದ ಅವರ ಕವಿತೆಗಳು ಓದುಗರಿಗೆ ಆಪ್ತವಾಗಿ

ಬಿಡುತ್ತವೆ. ಪ್ರೀತಿಯ ಸೆಳೆತ, ಅವರ ತೀವ್ರತೆ, ಪ್ರೀತಿಯ ಮಹತ್ವ, ಮೋಡಿಗಳನ್ನೆಲ್ಲ ಸಶಕ್ತವಾಗಿ ಹಿಡಿದಿಡುವ ಅವರ ಸಹಜವಾದ ಸಾಮಾನ್ಯವಾದ ಶೈಲಿಯು ಜನಪ್ರಿಯತೆಗೆ ಕಾರಣವೆಂದು ಹೇಳಬಹುದು.

ಪ್ರೇಮಿಯ ತಹ ತಹಿಸುವಿಕೆ, ಒದ್ದಾಟ, ಪ್ರೇಮದ ಬಲೆಯಲ್ಲಿ ಸಿಕ್ಕಿಕೊಂಡವನ ತುಡಿತ-ಮಿಡಿತಗಳು, ನಲ್ಲೆಯಿಂದ ದೂರಾದ ಪ್ರೇಮಿಯ ವಿರಹ ವೇದನೆಗಳನ್ನು ಕವಿ ಚಿತ್ರಿಸುವ ರೀತಿಯೇ ಓದುಗರನ್ನು ತನ್ನತ್ತ ಸೆಳೆಯಲು ಸಾಧ್ಯವಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಅವರ ಕವಿತೆಗಳ ರಚನೆಯ ಸ್ವರೂಪದಲ್ಲಿ ಸಂವಹನಶೀಲ ಸರಳತೆಯನ್ನು ತರುವುದರ ಮೂಲಕ ಗಂಭೀರ ಸಂಗತಿಗಳನ್ನು ಒಳಗೊಳ್ಳುವ ಪ್ರಯತ್ನ ನಡೆದಿರುತ್ತದೆ. ಇಂಥ ವಿಶಿಷ್ಟ ಅಭಿವ್ಯಕ್ತಿ ವಿಧಾನದಲ್ಲಿ ಬಹಳ ಬೇಗ ಅರ್ಥವಾಗುವ ವಿವರಗಳಿವೆ. ಅದರಲ್ಲಿಯೇ ಆಲೋಚನೆಯ ಕಡೆಗೂ ಸೆಳೆಯುವ ಪ್ರಯತ್ನವಿದೆ. ಇದು ಓದುಗರ ಅಭಿರುಚಿಗೆ ಒತ್ತು ನೀಡುತ್ತದೆ. ಅದಕ್ಕಾಗಿಯೇ ಅವರ ಕವಿತೆಗಳು ಹೆಚ್ಚಿನ ಓದುಗರನ್ನು ಪಡೆದುಕೊಂಡಿವೆ ಎಂದು ಹೇಳಬಹುದು. ಹೀಗೆ ಅವರ ಕವಿತೆಗಳಲ್ಲಿ ವ್ಯಕ್ತವಾಗಿರುವ ಪ್ರೀತಿ-ಪ್ರೇಮ, ಪ್ರಣಯದ ವಿಷಯಗಳು ಓದುಗರಿಗೆ ಆಪ್ತವಾಗುತ್ತವೆ. ಆ ಮೂಲಕ ಹೆಚ್ಚಿನ ಜನಪ್ರಿಯತೆ ಗಳಿಸುತ್ತವೆ. ಸರಳವಾದ ವಸ್ತು ವಿಷಯಗಳನ್ನು ನೈಪುಣ್ಯತೆಯಿಂದ, ಸೊಗಸುಗಾರಿಕೆಯ ಮೂಲಕ ಅಭಿವ್ಯಕ್ತ ಪಡಿಸುವುದು ಓದುಗರನ್ನು ಆಕರ್ಷಿಸುತ್ತದೆ ಎನ್ನಬಹುದಾಗಿದೆ.

ಪ್ರೇಮ, ಪ್ರೀತಿ, ಪ್ರಣಯದ ವಿಷಯಗಳ ಜೊತೆಗೆ ದಾಂಪತ್ಯ ಬದುಕಿನ ಪ್ರೇಮವನ್ನು ಕುರಿತ ಗೀತೆಗಳು ಪ್ರಮುಖವಾದವು. ಪ್ರಾರಂಭದ ಗೀತೆಗಳಲ್ಲಿ ಕಾಡುವ ನಲ್ಲೆಯಂತೆ. ದಾಂಪತ್ಯ ಬದುಕಿಗೆ ಬಂದಾಗಲೂ ಅವರನ್ನು ಹೆಂಡತಿ ಆವರಿಸಿ ಬಿಡುವುದನ್ನು ಕಾಣುತ್ತೇವೆ. ಹಾಸ್ಯಭರಿತವಾಗಿ, ಹಾಗೆಯೇ ಗಂಭಿರವಾಗಿಯು ದಾಂಪತ್ಯದ ಬದುಕನ್ನು ಕುರಿತು ಬರೆದಿರುವುದನ್ನು ಗಮನಿಸಿದಾಗ 'ಇದ್ದಾಳೆ' ಎಂಬ ಹನಿಗವಿತೆಯಲ್ಲಿ,

ನನ್ನ ಮನೆಯಲ್ಲಿ
ಕಾಮಧೇನುವಿಲ್ಲ,
ಕಲ್ಪವೃಕ್ಷವಿಲ್ಲ,
ರಂಭೆ, ಊರ್ವಶಿಯರಿಲ್ಲ,
ಕೆಣಕಿ ಕಾಡುವ ಶತ್ರುವಿಲ್ಲ,
ಅಂತರಂಗದ ಮಿತ್ರನಿಲ್ಲ
ದೆವ್ವವಿಲ್ಲ, ದೇವಿಯಿಲ್ಲ,
ಕ್ರೀಡೆಯಿಲ್ಲ, ಪೀಡೆಯಿಲ್ಲ,
ಎಂದೆಲ್ಲ

ನನಗನ್ನಿಸಿಯೇ ಇಲ್ಲ
ನನಗೆ ಹೆಂಡತಿಯಿದ್ದಾಳೆ.

ಕ್ಯಾಮರಾ ಕಣ್ಣು ; ಪು ; ೩೪೬

ಎಂದು ಹೇಳುತ್ತಾರೆ, ಅಂದರೆ ಅವರಿಗೆ ಹೆಂಡತಿ ಎಲ್ಲಾ ನೆಲೆಯಲ್ಲಿಯು, ಎಲ್ಲಾ ತರಹದ ಪಾತ್ರಗಳಲ್ಲಿ, ಆಟ-ನೋಟ, ಕಲ್ಪನೆ ಎಲ್ಲದರಲ್ಲೂ ಹೆಂಡತಿ ಇದ್ದಾಳೆಂಬ ಅವರ ಹಾಸ್ಯದ ಮಾತುಗಳಲ್ಲಿ ಹೆಂಡತಿ ಕೇವಲ ಹೆಂಡತಿಯಾಗಿ ಮಾತ್ರವಲ್ಲ, ಅವಳ ಹಲವು ಮುಖಗಳ ಒಳಿತು-ಕೆಡಕಿನ ಎಲ್ಲದರ ಪರಿಚಯವನ್ನು ಇಲ್ಲಿ ತರುತ್ತಾರೆ. ಕಾಮಧೇನು, ಕಲ್ಪವೃಕ್ಷ, ರಂಭೆ, ಊರ್ವಶಿ, ಕೆಣಕುವ, ಕಾಡುವ, ಕ್ರೀಡೆ, ಪೀಡೆಯಾದಂತೆ ಅಂತರಂಗದ ಮಿತ್ರಳೂ ಆಗಿದ್ದಾಳೆ ಎಂಬುದು ಮುಖ್ಯವಾಗಿದೆ.

ದಾಂಪತ್ಯ ಬದುಕು, ಅದರೊಂದಿಗೆ ಮನುಷ್ಯ ಬದುಕಿನ ಮಿತಿಯ ಬಗ್ಗೆ ಹೇಳುವ 'ಪರಿಧಿ' ಕವಿತೆಯಲ್ಲಿ, ಕವಿಗೆ ತೃಪ್ತವಾದ ಬದುಕು ಸಾಕೆಂಬ ಭಾವ, ಗಂಡ-ಹೆಂಡತಿ ಸಂಬಂಧಕ್ಕೆ ಒಂದು ಪರಿಧಿ ಇದೆ. ಅದರೊಳಗೆ ಬದುಕು ಕಟ್ಟಿಕೊಂಡು ಹಳೆಯ ನಂಬಿಕೆಗಳು, ಕಂದಚಾರಗಳನ್ನು ನೆಲಸಮಗೊಳಿಸಿ ಮುಂದಿನ ಜನಾಂಗದ ಬದುಕಿಗೆ ಹೊಸ ಮನೆ ಕಟ್ಟುವ ಮೂಲಕ ತೃಪ್ತಿ ಕಾಣುವ ಹಂಬಲವಿದೆ. ಆದರೆ ಅದು ಈ ನೆಲದ ಮಣ್ಣಿನ ಮೇಲೆಯೇ, ಅತಿಯಾಸೆ, ದುರಾಸೆಯಿಂದ ಈ ಮಣ್ಣಿನಾಚೆಗಿನ ಬದುಕು ಬೇಡ. ಇಲ್ಲಿಯೇ ಇದರೊಳಗೆ ನಾವು ಬದುಕು ಸಾಗಿಸಬೇಕೆಂಬ ಭಾವವನ್ನು ವ್ಯಕ್ತಪಡಿಸುವ ಅವರ ಮಾತುಗಳೆಂದರೆ,

ಈ ನೆಲದ ಮೇಲೆ ಭದ್ರ ಕಾಲೂರಿ ನಡೆಯೋಣ
ಹಿಡಿದು ಹಿತ ಮಿತದ ಹಾದಿ
ಜಿಗಿದು ನಿರ್ವಾತಕ್ಕೆ ಪ್ರೇತಗಳಂತೆ ಅಲೆದಾಟ ಬೇಡ
ಈ ಭುವಿಯ ಅಂಕೆ ಮೀರಿ

ಕ್ಯಾಮರಾ ಕಣ್ಣು ; ಪು ; ೨೮೯

ಎನ್ನುವಲ್ಲಿ ಈ ನೆಲದ ಬದುಕಿನ ಬಗ್ಗೆ ಅವರಿಗಿರುವ ಕಾಳಜಿ, ಅಕ್ಕರೆಯನ್ನು ತಿಳಿಸುವುದರ ಜೊತೆಗೆ ಕವಿಗೆ ಇಹದ ಬದುಕು ಮುಖ್ಯ, ಅದರಾಚೆಗಿನ ಬದುಕನ್ನು ಕುರಿತು ಅವರಿಗೆ ಆಸಕ್ತಿಯಿಲ್ಲ. ಈ ಮಣ್ಣು, ಮಣ್ಣ ಸಂಸ್ಕೃತಿಯೇ ಅವರಿಗೆ ಮುಖ್ಯ ಎನಿಸುವುದನ್ನು ಕಾಣಬಹುದು.

ದಾಂಪತ್ಯ ಬದುಕು ಸುಮಧುರವಾದ ಗೀತೆಯಾಗಿ ಸಾಗಬೇಕಾದರೆ, ಗಂಡ-ಹೆಂಡತಿ ಇಬ್ಬರಲ್ಲಿ ಪರಸ್ಪರ ಪ್ರೀತಿ, ವಿಶ್ವಾಸ, ನಂಬಿಕೆ, ಇರಬೇಕು. ಪರಸ್ಪರರಲ್ಲಿ ಅರಿವು, ಹೊಂದಾಣಿಕೆಯು ಇರಬೇಕು. ದಾಂಪತ್ಯದಲ್ಲಿ ಸರಸ, ವಿರಸ ಎಲ್ಲವು ಬೇಕು. ಸಮರಸದಿಂದ ಕೂಡಿ ಬದುಕಬೇಕು. ಅದಕ್ಕಾಗಿ ಇಬ್ಬರೂ ಯೋಚಿಸಬೇಕು. ದಾಂಪತ್ಯವೆಂಬುದು ಅಕ್ಷಯ ಪಾತ್ರೆಯಲ್ಲ. ಅದನ್ನು ತುಂಬಬೇಕಾದರೆ ಗಂಡ-ಹೆಂಡತಿ ಕೂಡಿಯೇ ಸಾಗಬೇಕು. ಒಳಿತಿರಲಿ, ಕೆಡಕಿರಲಿ, ಅದಕ್ಕೆ ಸಮಾನವಾಗಿ ಅವರಿಬ್ಬರು

ಪಾಲುದಾರರಾಗಿರುತ್ತಾರೆ. ಆ ನೆಲೆಯಲ್ಲಿನ ಯೋಚನೆಗೆ ಉದಾಹರಣೆಯಾಗಿ ಬರುವ ಕವಿತೆ 'ದಾಂಪತ್ಯ' ಎಂಬುದು ಅದರಲ್ಲಿ ವ್ಯಕ್ತವಾಗುವ ಮಾತುಗಳಲ್ಲಿನ ಭಾವವೆಂದರೆ,

ಮನೆಯ ತಲೆಬಾಗಿಲಲ್ಲಿ
ಒಣಗಿದ್ದರೆ ತೋರಣ
ನಾನೊಬ್ಬನೇ ಅಲ್ಲ
ನೀನೂ ಕಾರಣ,
ಅಕ್ಷಯ ಪಾತ್ರೆಯಲ್ಲ
ದಾಂಪತ್ಯದ ನಲಿವು
ತಂದು ತುಂಬಬೇಕು
ನಾವೇ ಪ್ರತಿ ದಿನವು.
ದೇಹಕ್ಕಿಲ್ಲ ಹೊಸ ಹರೆಯ
ಪ್ರತಿ ವಸಂತದಲ್ಲಿ
ಕೂಡಿ ಸಾಧಿಸೋಣ
ಜೋಡಿ ಹೃದಯದಲ್ಲಿ

ಕ್ಯಾಮರಾ ಕಣ್ಣು ; ಪು ; ೪೦೭

ಎನ್ನುತ್ತಾರೆ, ದಾಂಪತ್ಯ ಬದುಕಿನಲ್ಲಿ ಏನೇ ಆದರೂ ಅದಕ್ಕೆ ಇಬ್ಬರೂ ಸಮಾನವಾಗಿ ಹೊಣೆಗಾರರೇ ಆಗುತ್ತಾರೆ. ಸುಖ ಸಂತೋಷ ಅನ್ನುವುದನ್ನು ಇಬ್ಬರೂ ಕೂಡಿಯೇ ಕಂಡುಕೊಳ್ಳಬೇಕಾಗುತ್ತದೆ. ಹಾಗೆ ಮಾಡುವ ಮೂಲಕ ದಾಂಪತ್ಯ ಬದುಕನ್ನು ಸಾರ್ಥಕ ಪಡಿಸಿಕೊಳ್ಳಬೇಕಾಗುತ್ತದೆ. ದಾಂಪತ್ಯದ ಸವಿ ಸುಖ ಪತಿ-ಪತ್ನಿಯರ ನಡುವಿನ ಸಾಮರಸ್ಯ ಎಷ್ಟು ಮುಖ್ಯವೆಂಬುದನ್ನು ಸ್ಪಷ್ಟ ಪಡಿಸಿರುವ ರೀತಿಯೇ ವೈಶಿಷ್ಟ್ಯವಾಗಿದ್ದು, ಓದುಗರನ್ನು ತನ್ನತ್ತ ಸೆಳೆಯುತ್ತದೆ ಎಂದು ಹೇಳಬಹುದು.

ಪತ್ನಿಯನ್ನು ಕುರಿತು ಹೇಳುವ ಮಾತುಗಳಲ್ಲಿ ಪತ್ನಿಯ ಗುಣ ಸ್ವಭಾವದ ಬಗ್ಗೆ ವ್ಯಕ್ತವಾಗಿರುವುದು ದಾಂಪತ್ಯ ಬದುಕಿನ ಸುಖ, ನೆಮ್ಮದಿ, ನಿರಾಳತೆಗೆ ಹೆಂಡತಿಯೇ ಮುಖ್ಯ. ಬದುಕನ್ನು ಹಸನಾಗಿಸಿ ಸಾರ್ಥಕಗೊಳಿಸುವಲ್ಲಿ ಹೆಂಡತಿಯ ಪಾತ್ರ ಮಹತ್ವವಾದುದು. ಇಲ್ಲಿ ಹೆಂಡತಿಯನ್ನು ಪ್ರಶಾಂತವಾದ ಪುಟ್ಟ ಕೊಳಕ್ಕೆ ಹೋಲಿಸುವ ಮೂಲಕ ಸಂಯಮ, ತಾಳ್ಮೆ, ಸಹನೆಯಿಂದ ಬದುಕು ಸಾಗಿಸಿದಾಗ ಬಾಳು ಎಷ್ಟು ಸುಂದರವಾಗುತ್ತದೆ ಹಾಗೆ ಸುಂದರವಾದ ಬಾಳು ನಿಮ್ಮದಾಗಬೇಕಾದರೆ ಹೆಂಡತಿ ಪಾತ್ರ ಹೇಗಿರಬೇಕೆಂದು ಹೇಳುವ ಅವರ ಮಾತುಗಳಲ್ಲಿ ವ್ಯಕ್ತವಾಗುವ ಭಾವವೇನೆಂದರೆ, 'ಇವಳು ನದಿಯಲ್ಲ' ಕವಿತೆಯ ಸಾಲುಗಳಲ್ಲಿ,

ಇವಳು ನದಿಯಲ್ಲ
ಕಣ್ಣೆದುರೆ ಪ್ರತಿ ಕ್ಷಣ
ಹೊಸ ನೀರು ಹೊಸ ವೇಷ ಹೊಸ ಪಾತ್ರ
ಹೊಸ ತುಳುಕು ಬಳಕುಗಳ
ಬಿನ್ನಾಣಗಿತ್ತಿ ಇವಳಲ್ಲ
ತಳಕ್ಕೆಳೆದು ಮುಳುಗಿಸುವ
ಒಳಸುಳಿಗಿಳಿಲಿಲ್ಲ
ಇವಳೊಂದು ಪುಟ್ಟ ಕೊಳ
ನಿರಾತಂಕದಿಂದ ನಾ ಈಜಾಡಲು
ಸಮೃದ್ಧ ಜೀವ ಜಲ ಇವಳೊಂದು ಪುಟ್ಟ ಕೊಳ

ಕ್ಯಾಮರಾ ಕಣ್ಣು ; ಪು ; ೫೯೧

ಬದುಕಿನ ಜೀವ ಜಲವಾಗಿರುವ ಹೆಂಡತಿಯನ್ನು ಒಂದು ಪುಟ್ಟ ಕೊಳಕ್ಕೆ ಹೋಲಿಸುವ ರೀತಿ ವಿಶಿಷ್ಟವಾದುದು. ಸಾಮಾನ್ಯವಾದ ವಸ್ತುವಿನ ಮೂಲಕ ವಿಶಿಷ್ಟತೆಯನ್ನು ಸಾಧಿಸುವ ಅವರ ಈ ಶೈಲಿಯೇ ಓದುಗರ ಮೆಚ್ಚುಗೆ ಗಳಿಸುತ್ತದೆ.

ಈ ಬಗೆಯಲ್ಲಿ ಅವರ ಕವಿತೆಗಳಲ್ಲಿ ಪ್ರೇಮ, ಪ್ರೀತಿ, ಪ್ರಣಯ, ದಾಂಪತ್ಯ ಬದುಕಿನ ಪ್ರೇಮ ವ್ಯಕ್ತವಾಗಿರುವುದನ್ನು ಕಾಣಬಹುದು. ಇವರ ಪ್ರೇಮ ಕವಿತೆಗಳಲ್ಲಿ ಬರುವ ಪ್ರೇಮಿಗಳು ಯಾವುದೇ ಬಗೆಯ ಮಹತ್ವಾಕಾಂಕ್ಷೆ ಹೊಂದಿದವರಲ್ಲ. ನಿತ್ಯ ಬದುಕಿನಲ್ಲಿ ಕಾಣುವ ಸರಳ, ಮುಗ್ಧ ಪ್ರೇಮಿಗಳಾಗಿದ್ದಾರೆ. ಅದರಲ್ಲಿನ ಸರಳತೆ, ನವುರಾದ ಪ್ರೇಮ, ಸಾಮಾನ್ಯ ಓದುಗನಿಗೂ ಅರ್ಥವಾಗುತ್ತದೆ. ಇದರಲ್ಲಿ ಬರುವ ಪ್ರೇಮವು, ಕೆಲವರಲ್ಲಿ ಗೆದ್ದ ಪ್ರೇಮದ ಸಂಭ್ರಮವನ್ನು ಕಂಡರೆ ಮತ್ತೆ ಕೆಲವರಲ್ಲಿ ಸೋತ ಪ್ರೇಮ, ವಿರಹದ ತಾಪವನ್ನು ಕಾಣಬಹುದು. ಸಹಜವಾಗಿ ಮಧ್ಯಮ ವರ್ಗದ ಪ್ರೇಮ ಅವರದ್ದು. ಅಂಥ ಪ್ರೇಮಿಗಳಿಗೆ ಎದುರಾಗುವ ಅಡೆ-ತಡೆಗಳು, ಸಂಪ್ರದಾಯ ನಿಷ್ಠೆ, ಕಟ್ಟುಪಾಡುಗಳು, ಜಾತಿ ಮತದ ಅಡ್ಡಗೋಡೆಗಳು ಇವೆಲ್ಲ ಸಾಮಾನ್ಯವಾದವುಗಳೇ ಆಗಿವೆ. ಆದರೆ ಅದನ್ನು ಅಭಿವ್ಯಕ್ತಿಸುವ ವಿಧಾನದಲ್ಲಿ ಮಾತ್ರ ವಿಶಿಷ್ಟತೆ ಇದೆ. ಪ್ರೀತಿಯ ಅನನ್ಯತೆ, ಹದಿಹರೆಯದ ಪ್ರೇಮದ ತುಡಿತ, ಅವರನ್ನು ಸದಾ ಕಾಡುವ ಪ್ರೀತಿಯ ತಹತಹಿಸುವಿಕೆಗಳನ್ನು ಸರಳ ಸಾಮಾನ್ಯವಾದ ವಸ್ತು ವಿಷಯಗಳ ಮೂಲಕ ಕಟ್ಟಿಕೊಡುವ ಅವರ ಬರಹದ ವಿಶಿಷ್ಟ ಶೈಲಿಯೇ ಮೆಚ್ಚುಗೆಯನ್ನು ಗಳಿಸಲು ಕಾರಣವಾಗಿದೆ.

ಬಿ.ಆರ್. ಲಕ್ಷ್ಮಣರಾವ್ ಅವರ ಪ್ರೇಮ ಕವಿತೆಗಳಲ್ಲಿ ಬರುವ ಪ್ರೇಮಿಗಳು, ಸಂಯಮಿಗಳು, ಸೌಮ್ಯ ಸ್ವಭಾವದವರು, ಅವರಲ್ಲಿ ಪ್ರೀತಿಯ ಅನುಭವಿಸುವಿಕೆ ಇದೆ. ಆದರೆ ಪ್ರೀತಿಯಿಂದ ವಂಚಿತರಾದಾಗ ಭಗ್ನ ಪ್ರೇಮಿಗಳಾಗಿ ಉಳಿಯುವುದಿಲ್ಲ. ಹಾಗೆಯೇ ತಮ್ಮ ಪ್ರೇಮಕ್ಕೆ ಅಡ್ಡಿಯಾಗುವ ಈ

ವ್ಯವಸ್ಥೆಯ ಬಗ್ಗೆ ಸಿಟ್ಟು, ಆಕ್ರೋಶಗಳಿಲ್ಲ. ಅವರು ಬಂಡಾಯಗಾರರಲ್ಲ. ಮಧ್ಯಮ ವರ್ಗದ ಪ್ರೇಮ ಪ್ರೀತಿಯ ಭಾವಗಳನ್ನು ಹುರುಪು-ಉಲ್ಲಾಸಗಳ ಮೂಲಕವೇ ಅಭಿವ್ಯಕ್ತಿಸುತ್ತಾರೆ. ಇವರ ಕವಿತೆಗಳಲ್ಲಿ ಮುಖ್ಯವಾದ ಅಂಶವೇನೆಂದರೆ ಕವಿ ತಾನು ನೋಡುತ್ತಾ ಅನುಭವಿಸುತ್ತಾ ನಮಗೂ ಅಂತೆಯೇ ತೋರಿಸುವ ಪ್ರಯತ್ನ ಮಾಡುತ್ತಾರೆ. ಆ ಪ್ರಯತ್ನದ ವಿಶಿಷ್ಟತೆಯಿಂದಾಗಿಯೇ ಅವರ ಕವಿತೆಗಳು ಬಹಳ ಸುಲಭವಾಗಿ ಓದುಗನಿಗೆ ಅರ್ಥವಾಗುತ್ತವೆ. ಜನಪ್ರಿಯವೂ ಆಗುತ್ತವೆ. ಹೀಗೆ ಅವರ ಕವಿತೆಗಳಲ್ಲಿ ಪ್ರೇಮ, ಪ್ರೀತಿ, ಪ್ರಣಯದ ವಸ್ತು ವಿಷಯಗಳ ಅಭಿವ್ಯಕ್ತವಾಗುವ ರೀತಿಯಿಂದ ಹಾಗೂ ಅವುಗಳ ವಿಶಿಷ್ಟ ನಿರೂಪಣಾ ಶೈಲಿಯಿಂದ, ಸರಳ ಸಾಮಾನ್ಯವಾದ, ನಿತ್ಯ ಬದುಕಿನ ವಿಷಯಗಳಿಗೆ ಕಾವ್ಯಾತ್ಮಕತೆಯನ್ನು ನೀಡುವ ಮೂಲಕ ಕವಿತೆಗಳು ಜನಪ್ರಿಯತೆ ಗಳಿಸುತ್ತವೆ ಎಂಬುದನ್ನು ಅಧ್ಯಯನದ ಮೂಲಕ ಸ್ಪಷ್ಟ ಪಡಿಸಿಕೊಳ್ಳಲಾಗಿದೆ.

ಬಿ.ಆರ್. ಲಕ್ಷ್ಮಣರಾವ್ ಅವರ ಕವಿತೆಗಳಲ್ಲಿ ಪ್ರೀತಿ, ಪ್ರೇಮ, ಪ್ರಣಯಕ್ಕೆ ಸಂಬಂಧಿಸಿದ ವಸ್ತು ವಿಷಯಗಳು ಏಕೆ ಜನಪ್ರಿಯತೆ ಗಳಿಸಿವೆ, ಎಂಬುದಕ್ಕೆ ಕಾರಣವಾದ ಅಂಶಗಳನ್ನು ಈ ಭಾಗದಲ್ಲಿ ಅವರ ಕವಿತೆಗಳ ವಿಶ್ಲೇಷಣೆಯ ಮೂಲಕ ಸ್ಪಷ್ಟ ಪಡಿಸಿಕೊಳ್ಳಲು ಪ್ರಯತ್ನಿಸಲಾಗಿದೆ. ಅವುಗಳ ರಚನೆಯ ಸ್ವರೂಪ ಸಂವಹನಶೀಲತೆಯ ಸರಳತೆ, ಸರಳವಾದ ಸಾಮಾನ್ಯ ಮಾರ್ಗದ ಮೂಲಕವೇ ಗಂಭೀರವಾದ ಜೀವಪರವಾದ ಚಿಂತನೆಯ ಕಡೆಗೆ ಓದುಗರನ್ನು ಸೆಳೆಯುವ ವಿಶಿಷ್ಟವಾದ ನೈಪುಣ್ಯತೆ ಸೊಗಸುಗಾರಿಕೆಗಳಿಂದಾಗಿಯೇ ಅವರ ಕವಿತೆಗಳು ಜನಪ್ರಿಯತೆ ಗಳಿಸಿವೆ ಎಂಬುದನ್ನು ಸ್ಪಷ್ಟಪಡಿಸಿಕೊಳ್ಳಲಾಗಿದೆ.

**೪.೩ ಬಿ.ಆರ್. ಲಕ್ಷ್ಮಣರಾವ್ ರವರ ಕಾವ್ಯ ಮತ್ತು ಸುಗಮ ಸಂಗೀತ.**

ಆಧುನಿಕ ಕನ್ನಡ ಕಾವ್ಯ ತನ್ನದೇ ಆದ ವಿಶೇಷತೆಯಿಂದ ಕೂಡಿದ್ದು, ಸುಗಮ ಸಂಗೀತವು ಕಾವ್ಯ ಸಂವಹನಕ್ಕೆ ಸಹಕಾರಿಯಾದ ಮಾಧ್ಯಮವಾಗಿದೆ. ಹಲವು ಕವಿಗಳ ಕಾವ್ಯವನ್ನು ಜನರಿಗೆ ತಲುಪಿಸುವುದಕ್ಕೆ ಸಂಗೀತ ಮಾಧ್ಯಮ ಪೂರಕವಾಗಿದೆ. ಲಯಬದ್ಧತೆ, ಗೇಯತೆಯ ಗುಣದೊಂದಿಗೆ ರಚಿತವಾದ ಭಾವಗೀತೆಗಳು ಹಾಡಲು ಅನುಕೂಲಕರವಾಗಿವೆ. ಹೀಗೆ ಲಯಬದ್ಧವಾದ ಗೀತೆಗಳಿಗೆ ಸಂಗೀತ ಸಂಯೋಜನೆಗೊಳಿಸಿ ಪ್ರಸಿದ್ಧರಾದ ಗಾಯಕರು ಹಾಡುವ ಮೂಲಕ ಅಪಾರ ಸಂಖ್ಯೆಯ ಕೇಳುಗರನ್ನು ಹೊಂದುವಂತೆ ಮಾಡುವುದು ಸುಗಮ ಸಂಗೀತ ಕ್ಷೇತ್ರದ ಮೂಲಕ ಸಾಧ್ಯವಾಗಿವೆ.

ಭಾವಗೀತೆ ಆಧುನಿಕ ಸಾಹಿತ್ಯದ ಬಹು ಜನಪ್ರಿಯ ಸಾಹಿತ್ಯ ಪ್ರಕಾರವಾಗಿದೆ. ಇವರ ಮೂಲ ಎಳೆ ನಮಗೆ ನಮ್ಮ ಕನ್ನಡ ಸಾಹಿತ್ಯ ಪರಂಪರೆಯಲ್ಲೇ ಅಡಗಿರುವುದನ್ನು ಗುರುತಿಸಬಹುದು. ವಚನ ಸಾಹಿತ್ಯ ಮತ್ತು ಕೀರ್ತನ ಸಾಹಿತ್ಯದಲ್ಲಿ ಭಾವಗೀತೆಯ ನಿದರ್ಶನಗಳನ್ನು ಕಾಣಬಹುದು. ಒಟ್ಟಿನಲ್ಲಿ ಸಾಹಿತ್ಯ ಓದುಗಬ್ಬ ಮತ್ತು ಹಾಡುಗಬ್ಬ ಎಂಬ ಎರಡು ಪ್ರಕಾರಗಳಲ್ಲಿ ಕಂಡು ಬರುತ್ತದೆ. ಓದುಗಬ್ಬವೆಂದರೆ ಕಾವ್ಯ ಪರಂಪರೆ ಹಾಡುಗಬ್ಬ ಎಂದರೆ ದೇಶಿಯ ಕಾವ್ಯ ಪರಂಪರೆ. ಇದನ್ನು

ಮಾರ್ಗ ಮತ್ತು ದೇಶಿ ಎಂಬ ಎರಡು ಪ್ರಕಾರಗಳಲ್ಲಿ ಗುರುತಿಸಿದ್ದು ಮಾರ್ಗವು ಕಾವ್ಯ ಪರಂಪರೆಯಲ್ಲಿ ಬರುತ್ತದೆ. ಇದು ಪಂಡಿತ ವರ್ಗದ ಮೆಚ್ಚುಗೆ ಪಡೆದಿರುವುದು ದೇಶಿ ಪರಂಪರೆ ಎಲ್ಲಾ ವರ್ಗದವರಿಗೆ ಸೇರಿದ್ದು ವಚನಗಳ, ಕೀರ್ತನೆಗಳು ಗಾಯನ ಮತ್ತು ವಾಚನದ ಮೂಲಕ ಜನಪ್ರಿಯವಾಗಿದ್ದವು. ಪಂಡಿತ ವರ್ಗವು ಮಾರ್ಗ ಪರಂಪರೆಯ ಪ್ರೌಢ ಕಾವ್ಯ ಪರಂಪರೆಯ ಆರಾಧಕರಾಗಿದ್ದರು. ಇವರು ಹಾಡುಗಬ್ಬದ ಬಗ್ಗೆ ಆಕ್ಷೇಪಣೆ ಮಾಡುತ್ತಾರೆ. ಹಾಡುಗಬ್ಬ ದೇಶಿ ಕಾವ್ಯ ಪರಂಪರೆಯಿಂದ ಪ್ರಾರಂಭಗೊಂಡು ಜನಪ್ರಿಯವಾಗಿದ್ದ ಅದರ ಮುಂದುವರಿಕೆಯಾಗಿ ಬಂದುದೇ ಭಾವಗೀತೆ ಎಂದು ಗುರುತಿಸಬಹುದು. ಲಯಬದ್ಧವಾದ ಗೀತೆಗಳ ಸಂಗೀತ ಸಂಯೋಜನೆಯ ಮೂಲಕ ಹಾಡುವಿಕೆಗೆ ಅನುಕೂಲಕರವಾಗಿದ್ದು. ಇಂದು ಜನಪ್ರಿಯ ಪ್ರಕಾರವಾಗಿ ಬೆಳೆಯುತ್ತಿವೆ. ಗೀತೆಗಳು ಭಾವ ಪ್ರಪಂಚವನ್ನು ಒಳಗೊಂಡು ಲಯದಿಂದ ಕೂಡಿದ್ದು, ರಮ್ಯತೆಯನ್ನು ಒಳಗೊಂಡು, ನಿತ್ಯ ಬದುಕಿನ ಎಲ್ಲಾ ಭಾವಗಳನ್ನು ಅಭಿವ್ಯಕ್ತಸುತ್ತವೆ. ಬದುಕಿನ ಬಗ್ಗೆ ಉತ್ಕಟ ಪ್ರೀತಿ ನಂಜಿಕೆ, ಸಾಮೂಹಿಕ ಬದುಕಿನೊಟ್ಟಿಗೆ ಒಂದಾಗುವ ಆಸೆ, ನಾಡು ನುಡಿಯ ಬಗೆಗಿನ ಪ್ರೇಮ, ಎಲ್ಲವನ್ನು ಭಾವಗೀತೆಗಳು ಅಭಿವ್ಯಕ್ತಿಸುತ್ತವೆ. ಹೀಗೆ ಸಾಹಿತ್ಯ, ಸಂಗೀತ ಸಮೂಹ ಮಾಧ್ಯಮಗಳ ನಡುವಿನ ಸಂಬಂಧವನ್ನು ಗುರುತಿಸಿಕೊಳ್ಳಬಹುದು.

ಈ ರೀತಿಯ ಸಾಹಿತ್ಯ ಮತ್ತು ಸಂಗೀತದ ನಡುವಿನ ಸಂಬಂಧವೇ ಸಾಹಿತ್ಯವನ್ನು ಹೆಚ್ಚಿನ ಜನರಿಗೆ ತಲುಪಸಿವುದರ ಜೊತೆಗೆ ಅಪಾರ ಸಂಖ್ಯೆಯ ಕೇಳುಗರನ್ನು ಪಡೆಯುವಂತೆ ಮಾಡುತ್ತವೆ. ಸಾಹಿತ್ಯ ಜನಪ್ರಿಯವಾಗುತ್ತವೆ. ಕವಿ ಜನಪ್ರೀತಿ ಗಳಿಸುತ್ತಾನೆ. ಆ ಮಾತು ಕೇವಲ ಜನಪ್ರಿಯ ಕವಿಗಳ ಕವಿತೆಗಳಿಗೆ ಮಾತ್ರ ಅನ್ವಯಿಸುವುದಿಲ್ಲ. ಶಿಷ್ಟ ಗಂಭೀರ ಕವಿಗಳೆಂದು ಗುರುತಿಸಿಕೊಂಡಿರುವ, ಕವಿಗಳ ಕವಿತೆಗಳು ಹಾಡುಗಬ್ಬವಾಗಿ ಹೆಚ್ಚಿನ ಜನರನ್ನು ತಲುಪಿ ಜನಪ್ರಿಯವಾಗಿರುವುದನ್ನು ಕಾಣಬಹುದು.

ಭಾವಗೀತೆಗಳಲ್ಲಿ ಕಂಡು ಬರುವ ಅಂಶವನ್ನು ಎರಡು ರೀತಿಯಲ್ಲಿ ಗುರುತಿಸಬಹುದು. ಒಂದು ನಮ್ಮ ಒಂದು ಭಾವನೆಗಳಿಗೆ ಒತ್ತು ನೀಡುವುದು. ಮತ್ತೊಂದು ಕವಿಯ ಮಾತುಗಳಿಗೆ ಸಂಗೀತದ ಮೂಲಕ ಸಮ್ಮೋಹಗೊಳ್ಳುವುದು. ಹೀಗೆ ಎರಡು ರೀತಿಯ ಸೆಳೆಯುವಿಕೆ ಭಾವಗೀತೆಗಳಲ್ಲಿ ಅಡಕವಾಗಿರುತ್ತದೆ. ಮಧುರವಾದ ಭಾವನೆಗಳನ್ನು ತಮ್ಮ ಕವಿತೆಗಳ ಮೂಲಕ ಓದುಗ/ಕೇಳುಗರ ಕಣ್ಣುಂದೆ ತಂದು ಕಣ್ಣಿಗೆ ಕಟ್ಟುವಂತೆ ಮನಸ್ಸಿಗೆ ಮುಟ್ಟುವಂತೆ ರಚಿಸಲಾಗಿರುತ್ತದೆ. ಅದನ್ನು ಕೇಳುಗರು ಅಸ್ವಾದಿಸುವ ಮೂಲಕ ರಸಾನಂದವನ್ನು ಅನುಭವಿಸುತ್ತಾರೆ. ಅವು ಮನಸ್ಸನ್ನು ರಂಜಿಸುತ್ತವೆ.

ಆಧುನಿಕ ನವ್ಯ ಕಾವ್ಯದ ಸಂದರ್ಭವು ಕಾವ್ಯವನ್ನು ಸಂಗೀತಕ್ಕೆ ಅಳವಡಿಸುವ ಬಗ್ಗೆ ಆಕ್ಷೇಪವೆತ್ತಿದೆ. ಈ ಬಗೆಯ ಆಕ್ಷೇಪಣೆ ಜನಪ್ರಿಯತೆಯ ದೃಷ್ಟಿಯಿಂದ ಬಂದಿವೆ ಎಂಬುದು ಗಮನಾರ್ಹ ವಿಷಯವಾಗಿದೆ. ಆದರೆ ಇಂದು ಜನಪ್ರಿಯವೆಂದು ಗುರುತಿಸಿದ ಕವಿಗಳ ಸಾಹಿತ್ಯ ಎಷ್ಟರಮಟ್ಟಿಗೆ ಸಂಗೀತ ಕ್ಷೇತ್ರದ ಮೂಲಕ ಜನರನ್ನು ತಲುಪಿವೆಯೋ ಹಾಗೆಯೇ ಶಿಷ್ಟ ಗಂಭೀರ ಕವಿಗಳ ಕವಿತೆಗಳು

ಸಂಗೀತದ ಮೂಲಕ ಅಪಾರ ಸಂಖ್ಯೆಯ ಕೇಳುಗರನ್ನು ಹೊಂದಿರುವುದನ್ನು ಕಾಣಬಹುದು. ಕುವೆಂಪು, ಬೇಂದ್ರೆ, ಪು.ತಿ.ನ. ಜಿ.ಎಸ್.ಶಿವರುದ್ರಪ್ಪ, ಚೆನ್ನವೀರ ಕಣವಿ. ಎನ್.ಎಸ್.ಲಕ್ಷ್ಮೀನಾರಾಯಣಭಟ್ಟ, ಕೆ.ಎಸ್. ನರಸಿಂಹಸ್ವಾಮಿ, ಜಿ.ಪಿ.ರಾಜರತ್ನಂ, ಕೆ.ಎಸ್. ನಿಸಾರ್ ಅಹಮದ್. ಜಿಎಸ್. ಸಿದ್ದಲಿಂಗಯ್ಯ, ಚಂದ್ರಶೇಖರ ಕಂಬಾರರ ಗೀತೆಗಳು ಅಪಾರ ಸಂಖ್ಯೆಯ ಕೇಳುಗರನ್ನು ಪಡೆದುಕೊಂಡಿರುವುದು ಗಾಯನದ ಮೂಲಕವೇ ಎಂದು ಹೇಳಬಹುದು, ಹಾಗೆಯೇ ಎಂ.ಎನ್. ವ್ಯಾಸರಾಯ, ಎಚ್. ಎಸ್. ವೆಂಕಟೇಶ ಮೂರ್ತಿ ಜಯಂತ ಕಾಯ್ಕಿಣಿ, ಬಿ.ಆರ್.ಲಕ್ಷ್ಮಣರಾವ್ ಅವರ ಕವಿತೆಗಳ ಸುಗಮ ಸಂಗೀತದ ಮೂಲಕವೇ ಹೆಚ್ಚಿನ ಸಂಖ್ಯೆಯಲ್ಲಿ ಜನರನ್ನು ತಲುಪಲು ಸಾಧ್ಯವಾಗಿದೆ ಎಂಬುದನ್ನು ಗುರುತಿಸಬಹುದು. ಜನಪ್ರಿಯ ಕವಿಗಳ ಕವಿತೆಗಳಂತೆಯೇ ಗಂಭೀರ ಕವಿಗಳ ಕವಿತೆಗಳು ಸಂಗೀತದ ಮೂಲಕವು ಜನಪ್ರಿಯವಾಗಿರುವುದು ಜನಪ್ರಿಯ ಗಾಯಕರ ಹಾಡುವಿಕೆಯಿಂದಾಗಿ ಎಂದು ಗುರುತಿಸಬಹುದು.

ಬಾಳಪ್ಪ ಹುಕ್ಕೇರಿ ಯಶವಂತ ಹಳಿಬಂಡಿ, ಸಿ.ಅಶ್ವಥ್, ಶಿವಮೊಗ್ಗ ಸುಬ್ಬಣ್ಣ, ಎಸ್.ಜಾನಕಿ, ಬಿ.ಕೆ. ಸುಮಿತ್ರ, ಪಿ.ಸುಶೀಲ, ಕಸ್ತೂರಿಶಂಕರ್, ಮಾಲತಿಶರ್ಮ, ರತ್ನಮಾಲಾಪ್ರಕಾಶ್, ಅರ್ಚನಾ ಉಡುಪ, ಬಿ.ಆರ್. ಛಾಯಾ, ಸಂಗೀತಕಟ್ಟಿ, ಎಂ.ಡಿ. ಪಲ್ಲವಿ, ಮೈಸೂರು ಅನಂತಸ್ವಾಮಿ, ವೈ.ಕೆ. ಮುದ್ದುಕೃಷ್ಣ ಸುಪ್ರಿಯ ಆಚಾರ್ಯ, ಉಪಾಸನಾ ಮೋಹನ್, ಅಪೂರ್ವಶ್ರೀಧರ್ ಮುಂತಾದ ಗಾಯಕರು ಸುಗಮ ಸಂಗೀತ ಕ್ಷೇತ್ರವನ್ನು ಬೆಳೆಸಿದರು. ಸುಪ್ರಸಿದ್ಧ ಕವಿಗಳ ಕವಿತೆಗಳನ್ನು ಹಾಡುವ ಮೂಲಕ ಸಾಹಿತ್ಯವನ್ನು ಜನಪ್ರಿಯಗೊಳಿಸಿದರು.

ಹಾಡುಗಬ್ಬದ ಪ್ರಮುಖವಾದ ಗುಣವೆಂದರೆ, ಸರಳತೆ, ಗೇಯತೆ, ಲಯಬದ್ಧತೆಗಳಿಂದ ಕೂಡಿದ್ದು, ಹಾಡಲು ಸುಲಭವಾಗುವುದು, ಸರಳತೆಯಲ್ಲಿ, ಗಂಭೀರತೆ ಇರಲಾರದೆಂಬ ಆರೋಪವಿದ್ದರೂ ಗಂಭೀರವಾಗಿಯೂ ಸಂಕೀರ್ಣತೆಯನ್ನು ಒಳಗೊಂಡು ಸರಳವಾಗಿರಲು ಸಾಧ್ಯ ಎಂಬುದು ಭಾವಗೀತೆಗಳಲ್ಲಿ ಮುಖ್ಯವಾಗಿ ಕಂಡು ಬರುತ್ತದೆ.

ಸಾಹಿತ್ಯ ಜನತೆಯ ಸಲುವಾಗಿ ಎಂಬರ್ಥವು ಇವೆ, ಅದನ್ನು ಬಿ.ಆರ್. ಲಕ್ಷ್ಮಣರಾವ್ ರವರು ತನ್ನ ಕವಿತೆಗಳ ಮೂಲಕ ಮಾಡಿದ್ದಾರೆ. ಅದಕ್ಕಾಗಿ ತಮ್ಮ ಕವಿತೆಗಳನ್ನು ಜನತೆ ಬಳಿಗೆ ಕೊಂಡೊಯ್ಯಲು ಸಮೂಹ ಮಾಧ್ಯಮ, ಸಂಗೀತ ಕ್ಷೇತ್ರವನ್ನು ಹೆಚ್ಚಿನ ರೀತಿಯಲ್ಲಿಯೇ ಬಳಸಿಕೊಂಡಿದ್ದಾರೆಂದು ಹೇಳಬಹುದು. ಸ್ವತ: ಹಾಡುಗರರಾಗಿರುವ ಲಕ್ಷ್ಮಣರಾವ್ ಅವರು ಸಂಗೀತ ಸಂಯೋಜನೆಗಾಗಿಯು ಕವಿತೆಗಳನ್ನು ರಚಿಸಿದ್ದಾರೆ. ಅದು ಅವರಿಗೆ ತುಂಬ ಸುಲಭವು ಆಗಿದೆ. ಸಂಗೀತ ಸಂಯೋಜನೆಯ ಭಾವಕ್ಕೆ ಅನುಗುಣವಾದ ಗೀತೆಗಳು ಇವೆ. ಅರ್ಥ ಮತ್ತು ಲಯದ ದೃಷ್ಟಿಯಲ್ಲಿ ಬದಲಾವಣೆ ಮಾಡದ ರೀತಿಯಲ್ಲಿ ಕವಿತೆಗಳನ್ನು ರಚಿಸುವುದು ಲಕ್ಷ್ಮಣರಾವ್ ರವರಿಗೆ ಸಾಧ್ಯವಾಗಿವೆ ಎಂದು ಹೇಳಬಹುದು. ಈ ಮೂಲಕ ಅವರ ಸಾಹಿತ್ಯವು ಜನರಿಗೆ ತಲುಪಲು ಸಾಧ್ಯವಾಗಿವೆ ಎಂದು ಗುರುತಿಸಬಹುದು.

ಬಿ.ಆರ್. ಲಕ್ಷ್ಮಣರಾವ್ ಅವರು ತಮ್ಮ ಭಾವಗೀತೆಗಳನ್ನು ೧೪ ಕ್ಯಾಸೆಟ್‌ಗಳಲ್ಲಿ ಹೊರತಂದಿದ್ದಾರೆ. ಅವರು ಮೊದಲು ಹೊರತಂದ ಕ್ಯಾಸೆಟ್ ' ನನ್ನವಳು ' ಆಲಿಂಗನ ' ಹಾಡೇ ಮಾತಾಡೇ", ಹೇಳಿ ಹೋಗು ಕಾರಣ' ' ಗೆಳೆಯರಿರಲಿ ಈ ಬಾಳನಲಿ' ' ಸಾವಿರುವುದೇ ಹೀಗೆ ' ' ಕೊಲ್ಲುವುದಾದರೆ ಕೊಂದುಬಿಡು' ' ಸುಬ್ಬಾಭಟ್ಟರ ಮಗಳೇ' ಹೂನಗೆ, ವಾಸಂತೀ, ದೇವ ಪ್ರೇಷೆ, ಜೀವ ಸಖಿ, ಸ್ನೇಹ, ಇಲ್ಲಿ ಬರುವ ಗೀತೆಗಳನ್ನು ಸಿ.ಅಶ್ವಥ್, ಮೈಸೂರು ಅನಂತಸ್ವಾಮಿ, ಎಂ.ಡಿ. ಪಲ್ಲವಿ, ಸುಪ್ರಿಯ ಆಚಾರ್ಯ , ನಂದಿತಾ, ರತ್ನಮಾಲಾ ಪ್ರಕಾಶ್, ಸಂಗೀತಾಕಟ್ಟಿ, ಬಿ. ಆರ್. ಛಾಯಾ, ಅರ್ಚನಾ ಉಡುಪ, ಉಪಾಸನ ಮೋಹನ್, ವೈ.ಕೆ. ಮುದ್ದುಕೃಷ್ಣ, ಅವರುಗಳ ದನಿಯಲ್ಲಿ ಕವಿಯ ಭಾವನೆಗಳಿಗೆ ಜೀವ ತುಂಬಿ ಹಾಡಲಾಗಿವೆ. ಬಿ.ಆರ್. ಲಕ್ಷ್ಮಣರಾವ್ ಅವರ ಗೀತೆಗಳಿಗೆ, ಸಿ.ಅಶ್ವಥ್, ಸ್ವರ ಸಂಯೋಜನೆ ಮಾಡಿದ್ದಾರೆ. ಹಾಡಿನ ಧಾಟಿ, ಲಯದ ಬಗ್ಗೆ ಅರಿವಿರುವ ಲಕ್ಷ್ಮಣರಾವ್ ಭಾವಗೀತೆಗಳು ಹಾಡಲು ಸುಲಭವಾದ ರೀತಿಯಲ್ಲಿ ರಚಿತವಾಗಿವೆ. ಇದರಿಂದಾಗಿಯೇ ಅವರ ಕವಿತೆಗಳು ಹೆಚ್ಚಿನ ಕೇಳುಗರನ್ನು ಗಳಿಸಿಕೊಂಡಿವೆ ಎಂದು ಗುರುತಿಸಬಹುದು. ಬಿ.ಆರ್.ಲಕ್ಷ್ಮಣರಾವ್ ರವರ ಭಾವಗೀತೆಗಳು ಧ್ವನಿಸುರಳಿಯಲ್ಲಿ ಹೊರಬಂದು ಜನಪ್ರಿಯತೆ ಗಳಿಸಿರುವ ಪ್ರಮುಖ ಗೀತೆಗಳು 'ಅಮ್ಮ ನಿನ್ನ ಎದೆಯಾಳದಲ್ಲಿ ಗಾಳಕೆ ಸಿಕ್ಕ ಮೀನು, 'ಆಗಬೇಕು ನಾನು ಒಂದು ಮಣ್ಣ ಹುಳ' 'ಆಗು ಗೆಳೆಯ ಆಗು ನೀನು' 'ಆತ್ಮ ವಂಚಕರು ನಾವು ಪ್ರಿಯ' 'ಈಗೇಕೆ ಆ ನೆನಪು' ಈ ಬೀದಿಯಲ್ಲಿ ನಾ ಓಡಾಡಿದ್ದು 'ಉಪ್ಪು ನನಗೆ ಸಿಹಿ ನೀರು ನಿಮಗಿರಲಿ' "ಏಕೆ ಈ ನಿಟ್ಟುಸಿರು' 'ಏಕೆ ಬಂದೆ ನೀ ನಟ್ಟಿರುಳು' 'ಕಂಗಳು ಕೇವಲ ನೋಡಲಿಕ್ಕಲ್ಲ' 'ಕೆಂಪು ಕೆಂಪು ಕೆಂಗುಲಾಬಿ' 'ಕೊಲ್ಲುವುದಾದರೆ ಕೊಂದು ಬಿಡು''ಗೆಳೆಯರಿರಲಿ ಈ ಬಾಲಿನಲಿ' 'ಜಿಟ್ಟು ಜೋಡಿ ಜಿಟ್ಟಿ' 'ಜಾಲಿ ಬಾರಿನಲ್ಲಿ ಕೂತು ಪೋಲಿ ಗೆಳೆಯರು' 'ಜಿಪುಣ ಅಂದ್ರೆ ಜಿಪುಣ' 'ದೇವರೆ ಅಗಾಧ ನಿನ್ನ' 'ದೇಹವನು ಹೀಗಳೆಯ ಬೇಡ ಗೆಳೆಯ' 'ನನ್ನವಳು ನನ್ನಾಕೆ' 'ನಮಗೇಕೆ ನಲ್ಲ ನಾಳೆಯ ಚಿಂತೆ' 'ನಲ್ಲೆ ನಿನ್ನ ಮರೆಯಲಿ' 'ನಾ ಚಿಕ್ಕವನಾಗಿದ್ದಾಗ' 'ನಾ ಬಲ್ಲೆ ಅವ ಸುಳ್ಳುಗಾರ' 'ನಿನ್ನ ಕಿರುನಗೆಯೊಂದೆ ಸಾಲದೆ' 'ನೀನಿಂದಿಗೂ ನನಗೆ ಎಟುಕದ ಹಣ್ಣು' 'ಪ್ರೀತಿಗೆ ತನ್ನದೇ ಭಾಷೆ' 'ಬಾ ಬಾ ಯುಗಾದಿ ಬಾ' 'ಬಾಳ ದಾರಿ ಸಹನೆಯಲ್ಲಿ' 'ಬಿಡಲಾರೆ ನಾ ಸಿಗರೇಟು' 'ಮದುವೆ ಮದುವೆ ಮದುವೆ' 'ಮನದ ಹಂಬಲ' 'ಮನಸೇ ನನ್ನ ಮನಸೇ' 'ಮರವಾಗೆಲೆ ಓ ಜೀವವೇ' 'ಸುಬ್ಬಾ ಭಟ್ಟರ ಮಗಳೇ' 'ಸುರಿಯಲಿ ತಂಪೆರೆಯಲಿ' 'ಸ್ವತಂತ್ರ ದೇಶದ ಸ್ವತಂತ್ರ ಜನತೆಯ' 'ಹೇಳಿ ಹೋಗು ಕಾರಣ' 'ಯಾವ ಕಣ್ಣು ಹೀಗೆ ನೋಡಲಿಲ್ಲ' 'ಬಂದಂತೆ ಮರುವಸಂತ' ಈ ಎಲ್ಲಾ ಗೀತೆಗಳು ಸಂಗೀತಕ್ಕೆ ಸಂಯೋಜನೆಗೊಂಡಿವೆ. ಜನಪ್ರಿಯ ಗಾಯಕರು ಲಕ್ಷ್ಮಣರಾವ್‌ರವರನ್ನು ಒಳಗೊಂಡಂತೆ ಹಾಡುವ ಮೂಲಕ ಜನರ ಬಳಿಗೆ ಸಾಹಿತ್ಯವನ್ನು ತಲುಪಿಸಿದ್ದಾರೆ. ಹಾಗಾಗಿ ಹೆಚ್ಚಿನ ಜನಪ್ರೀತಿ ಗಳಿಸಿದೆ. ಅವರ ಪ್ರೇಮ ಗೀತೆಗಳು ಯುವ ಜನರ, ಹದಿಹರೆಯದ ಮನಸ್ಸಿಗೆ ಲಗ್ಗೆ ಹಾಕಿವೆ ಎಂಬುದು ಗಮನಾರ್ಹವಾದುದು.

ಬಿ.ಆರ್.ಲಕ್ಷ್ಮಣರಾವ್ ಅವರು ವಿವಿಧ ಸಂದರ್ಭಗಳಿಗಾಗಿ ರಚಿಸಿರುವ ಗೀತೆಗಳು ಪ್ರಮುಖವಾಗಿವೆ. ಕಾನೂನು ಪ್ರಾಧಿಕಾರದವರು ಜನ ಸಾಮಾನ್ಯರು ಕಾನೂನನ್ನು ಹೇಗೆ ಬಳಸಿಕೊಳ್ಳಬೇಕೆಂಬ ತಿಳುವಳಿಕೆ ನೀಡುವ ಧ್ವನಿ ಸುರಳಿ ತರಲು ಲಕ್ಷ್ಮಣರಾವ್ ಅವರು ೮ ಗೀತೆಗಳನ್ನು ಬರೆದಿದ್ದಾರೆ. 'ಕಲಿಯೋಣ ಬನ್ನಿ' ಧ್ವನಿ ಸುರಳಿಗೆ ನಾಲ್ಕು ಮಕ್ಕಳ ಗೀತೆಗಳನ್ನು, ಕ್ರೀಡಾ ಮೇಳಕ್ಕಾಗಿ ಒಂದು ಗೀತೆಯನ್ನು, ವಿಜ್ಞಾನ ಪರಿಷತ್ತಿಗೆ, ಮೂಢ ನಂಬಿಕೆಯ ವಿರುದ್ಧದ ಗೀತೆಗಳು, ಪರಿಸರದ ಗೀತೆಗಳು. ಈ ಬಗೆಯ ಗೀತೆಗಳನ್ನು ರಚಿಸುವ ಮೂಲಕ ಜನ ಸಾಮಾನ್ಯರಿಗೆ ಅರಿವು ಮೂಡಿಸುವ ಪ್ರಯತ್ನವನ್ನು ತಮ್ಮ ಕವಿತೆಗಳಲ್ಲಿ ಮಾಡಿದ್ದಾರೆ.

ಇವರ ಬಹುಪಾಲು ಗೀತೆಗಳು ಪ್ರೇಮಕ್ಕೆ ಸಂಬಂಧಿಸಿದವುಗಳು. ಇದರಲ್ಲಿ ಬರುವ ಪ್ರೇಮಿಗಳು ಸರಳ ಮುಗ್ಧ ಪ್ರೇಮಿಗಳು, ವಿಷಾದದ ನೆರಳನ್ನು ಹೊತ್ತಿರುವ ಪ್ರೇಮ ಗೀತೆಗಳು ಇವೆ. 'ಸುಬ್ಬಾ ಭಟ್ಟರ ಮಗಳೇ' ಇದರಲ್ಲಿನ ಗೀತೆಗಳು ಪ್ರಮುಖವಾಗಿ ಪ್ರೀತಿ ಪ್ರೇಮ ಪ್ರಣಯ, ವಿರಹ ಈ ವಸ್ತುಗಳ ಮೂಲಕ ಯುವಕ ಯುವತಿಯರ ಮನಸ್ಸಿಗೆ ಹತ್ತಿರವಾಗಿವೆ. ಇದರಲ್ಲಿ ಬರುವ ಮೊದಲ ಗೀತೆ ಗೋಪಿ ಮತ್ತು ಗಾಂಡಲೀನದಲ್ಲಿ ಬರುವ 'ಜಾಲಿ ಬಾರಿನಲ್ಲಿ ಕೂತು ಪೋಲಿ ಗೆಳೆಯರು' ಇದನ್ನು ಮೈಸೂರು ಅನಂತಸ್ವಾಮಿ ಮತ್ತು ಸಿ.ಅಶ್ವಥ್ ರವರು ಹಾಡಿದ್ದಾರೆ. ಇಲ್ಲಿನ ಮುಗ್ಧ ಗೋಪಿಯ ಚಿತ್ರಣ ಅವನ ಗೆಳೆಯರ ನಾಗರೀಕ ಆಮಿಷಗಳು ಮುಗ್ಧ ಗೋಪಿ ತನ್ನ ಲೋಕದಿಂದ ಹೊರ ಬರಲಾರದವನಾಗುತ್ತಾನೆ. ಗೋಪಿಯ ದೈಹಿಕ ಚಹರೆಯ ಬಗೆಗಿನ ಹಾಸ್ಯದ ತುಣುಕುಗಳು ಕ್ಯಾಬರೆ ನರ್ತಕಿಯ ಬಿನಪು-ವಯ್ಯಾರಗಳು ಗೋಪಿಯನ್ನು ಆಕರ್ಷಿಸಲು ಸಾಧ್ಯವಾಗದೆ ಗೋಪಿ ತನ್ನ ಕಾಮವನ್ನು ಗೆಲ್ಲುವ ಬಗೆ ಹೇಳುವ ಕವಿಯ ಭಾವನೆಗೆ ಗಾಯಕರ ದನಿ ಜೀವ ತುಂಬಿದೆ.

'ಸುಬ್ಬಾ ಭಟ್ಟರ ಮಗಳೇ' ಗೀತೆಯಲ್ಲಿ ಪ್ರೀತಿಯ ನಿವೇದನೆ, ಪ್ರೇಮಿಗೆ ಕೊಡುವ ಕಾಣಿಕೆಗೆ ಅಗಾಧವಾದ ಪ್ರಕೃತಿಯನ್ನು ಬಳಸಿಕೊಂಡಿರುವುದು, ಲಘು ಧಾಟಿಯ ಹಾಸ್ಯಭರಿತ ಗೀತೆಗೆ ಸಿ.ಅಶ್ವಥ್ ತಮ್ಮ ವಿಶಿಷ್ಟವಾದ ಕಂಠದ ಮೂಲಕ ಶ್ರೋತೃಗಳ ಕನಸುಗಳನ್ನು ತೆರೆದಿದ್ದಾರೆ.

ಸುಬ್ಬಾ ಭಟ್ಟರ ಮಗಳೇ
ಇದೆಲ್ಲಾ ನಿಂದೆ ತಗೊಳ್ಳೆ
ನೀಲಿ ನೈಲೆಕ್ಸಿನ ಮೇಘ ವಿನ್ಯಾಸದ
ಆಕಾಶದ ಸೀರೆ
ದಿಗಂತಗಳೇ ಮೇರೆ
ಮುಂಜಾವಿನ ಬಂಗಾರದ ಬೆಟ್ಟ
ಬೆಳದಿಂಗಳ ಬೆಳ್ಳಿ
ನಿನ್ನ ಭಾಗ್ಯಕೆ ಎಣೆ ಎಲ್ಲಿ?

ನಸುಕಲಿ ಹಿತ್ತಿಲಹುಲ್ಲಿನ ಮೇಲೆ
ರಾಶಿ ರಾಶಿ ಮುತ್ತು
ಇನ್ನು ನಿನ್ನ ಸೊತ್ತು
. . . . . . . . . . .
. . . . . . . . . . .
ಹೂ ಪಡ ಖಾನೆಗೆ ಹಾರಿ
ಪ್ರಾಯವ ಮಧು ಹೀರಿ
ಜುಳುಜುಳು ಹರಿಯುವ ಕಾಲದ ಹೊಳೆಯಲ್ಲಿ
ತೇಲುವ ಮುಳು ಮುಳುಗಿ
ದಿನ ಹೊಸತನದಲಿ ಬೆಳಗಿ

– ಸುಬ್ಬಾ ಭಟ್ಟರ ಮಗಳೇ ; ಪುಟ ; ೧೫–೧೬

ಎನ್ನುವ ಮಾತುಗಳಲ್ಲಿ ಕವಿಯ ಭಾವ ಪ್ರಪಂಚ ಸಾಗುವ ನೆಲೆಯು ಕೇಳುಗರಿಗೆ ಕಚಗುಳಿಯಿಡುತ್ತಾ ನಗೆ ಬುಗ್ಗೆಯಲ್ಲಿ ತೇಲಿಸುತ್ತಾ ರಂಜನೆ ನೀಡುತ್ತವೆ.

ಲಕ್ಷ್ಮಣರಾವ್ ಅವರ ಭಾವಗೀತೆಗಳಲ್ಲಿ ಪ್ರೀತಿಯ ಸೆಳೆತ ಪ್ರೇಮದ ತೀವ್ರತೆ, ವಿಷಾದದ ಛಾಯೆ, ಲಘು ಹಾಸ್ಯ ಪ್ರಕೃತಿಯ ಬಗ್ಗೆ ಒಲವು, ಇವುಗಳೆಲ್ಲ ವ್ಯಕ್ತವಾಗಿವೆ. ಬದುಕಿನ ಬಗೆಗಿನ ಅದಮ್ಯವಾದ ಉಜ್ವಲ ಪ್ರೀತಿಯನ್ನು ಕಾಣಬಹುದು. ನಂಬಿಕೆ, ಸಾಮೂಹಿಕ ಬದುಕಿನ ಬಗೆಗಿನ ತುಡಿತಗಳಿವೆ. ಹಾಗೆಯೇ ಸಿನಿಕತನ, ಹತಾಶೆ, ಅನಾಥ ಪ್ರಜ್ಞೆ ಇವುಗಳಿದ ಹೊರತಾದ ಕನಸುಗಾರಿಕೆ, ಆದರ್ಶ ವಾಸ್ತವ ಪ್ರಜ್ಞೆ ಸಮಕಾಲೀನ ಸಾಮಾಜಿಕ ಪರಿಕಲ್ಪನೆ, ಇವೇ ಮೊದಲಾದ ಅಂಶಗಳನ್ನು ಪ್ರೀತಿಯ ಉತ್ಕಟತೆ, ಅಗಲಿಕೆ, ವಿರಹ, ಭಗ್ನತೆ, ಹದಿಹರೆಯದ ಮೋಹ, ದಾಂಪತ್ಯ ಬದುಕಿನ ಪ್ರೀತಿಯ ಸೆಳೆತ, ಮನುಷ್ಯ ಸಂಬಂಧಗಳಲ್ಲಿ ಹೆಚ್ಚಾಗಿ ಇರುವ ಗಂಡು ಹೆಣ್ಣಿನ ಸಂಬಂಧಗಳನ್ನು ಕುರಿತ ಭಾವನೆಗಳು ಅವರ ಗೀತೆಗಳಲ್ಲಿ ಹೆಚ್ಚಿನದಾಗಿ ಕಂಡುಬರುತ್ತವೆ.

ಜಾಲಿ ಬಾರಿನಲ್ಲಿ ಕೂತು ಗೋಪಿಯನ್ನು ಕೀಟಲೆ ಮಾಡುವ ಗೆಳೆಯರು, ಸುಬ್ಬಾ ಭಟ್ಟರ ಮಗಳೇ ಇದೆಲ್ಲಾ ನಂದೆ ತಕ್ಕೊಳ್ಳಿ' ಎನ್ನುವ ಗೀತೆ, ಈ 'ತೋಟದೊಳಗೊಂದು ಗುಲಾಬಿ ಹೂವಿದೆ', 'ನಾ ಬಿಡಲಾರೆ ಸಿಗರೇಟು ನಿನ್ನಂಥಯೇ ಅದು ಥೇಟು!' ಗೀತೆಗಳ ಭಾವಕ್ಕೆ ಅನಂತಸ್ವಾಮಿ ಹಾಗು ಸಿ.ಅಶ್ವತ್ಥರ ಧನಿ ಅರ್ಥಪೂರ್ಣವಾಗಿ ಕೇಳುಗರ ಹೃದಯಕ್ಕೆ ತಟ್ಟಿದೆ. ರತ್ನಮಾಲಾ ಪ್ರಕಾಶರವರ ಧ್ವನಿಯಲ್ಲಿ 'ನೋಡಿದ ಅವನು ಹೀಗೆ ನೋಡಿದ' ಗೀತೆ ಬಾಡಿದ ಹೃದಯಕ್ಕೆ ತಂಪೆರೆಯುವ ಶಕ್ತಿ ಇನಿಯನ ನೋಟದಲ್ಲಿದೆ ಅದಕ್ಕೆ ಧನ್ಯತೆ ಪಡೆದ ಪ್ರೇಮಿಯ ಭಾವ ತೀವ್ರತೆ ಹರಿದು ಕೇಳುಗರನ್ನು ರಂಜಿಸುವ ಗೀತೆಯಾಗಿವೆ. ಸಿ.ಅಶ್ವತ್ಥ್ ಮತ್ತು ರತ್ನಮಾಲಾ ಪ್ರಕಾಶ್‌ರವರು ಬೇರೆ ಬೇರೆಯಾಗಿ

ಹಾಡಿರುವ 'ನನ್ನಿ ಹೃದಯವ ನಿನಗೆ ನೀಡಿದೆ' ಎಂಬ ಗೀತೆ ಗಂಡು ಹೆಣ್ಣುಗಳ ಅಂತರಂಗದ ತುಡಿತವನ್ನು, ಪರಸ್ಪರ ಪ್ರೀತಿಯ ನಿರಾಕರಣೆಗಾಗಿ ನೊಂದ ಪ್ರೇಮಿ ನೆನಪುಗಳಿಂದ ದೂರಾಗಲು ತಾ ಮಾಡಿದ ತಪ್ಪನ್ನು' ಇನಿಯನನ್ನು ದೂಷಿಸುತ್ತಾ ಹಪಹಪಿಸುವ ಹಾಡು ಭಿನ್ನ-ಭಿನ್ನ ಧನಿಯಲ್ಲಿ ಮೂಡಿ ಬಂದಿದೆ. 'ಬಣ್ಣಿಸಲೇ ಹೆಣ್ಣೇ ಏನು ಬಣ್ಣಿಸಲೇ ಹೆಣ್ಣೆ ನಿನ್ನ ಮಹಿಮೆಯ . . . . ಪ್ರೀತಿ ಪಡೆಯಲು ತಾ ಮಾಡಿದ ಪ್ರಯತ್ನಗಳ ಬಗ್ಗೆ, ಎಲ್ಲಾ ದಾಖಲೆ ವ್ಯಕ್ತಿಗಳ ಸಾಧನೆಯನ್ನು ಹಿಂದಿಕ್ಕಿ ಸಾಗಿದರೂ ಪ್ರೀತಿ ದಕ್ಕದೆ ಕೊನೆಗೆ ಹುಡುಕಾಟದಲ್ಲೇ ಕಾಲ ಕಳೆಯುವ ಹಾಗೆ ಮಾಡಿದ ಹೆಣ್ಣನ್ನು ಕುರಿತ ಪ್ರೀತಿಯ ವರ್ಣನೆಯನ್ನು ಅಶ್ವತ್ಥ್‌ರವರು ತಾವೇ ಚೇಷ್ಟೆ ಮಾಡುವ ರೀತಿಯಲ್ಲಿ ಹಾಡಿ ಯುವ ಮನಸ್ಸಿಗೆ ಮುದ ನೀಡಿದ್ದಾರೆ.

ಸುಬ್ಬಾ ಭಟ್ಟರ ಮಗಳೇ ಇವೆಲ್ಲಾ ನಿಂದೆ ತಕ್ಕೊಳ್ಳಿ ಎಂದು ಧಾರಾಳವಾಗಿ ನೀಡಿದ ಕವಿ 'ನಡುಮನೆ ತಲೆಬಾಗಿಲಲ್ಲಿ ಒಣಗಿದ್ದರೆ ತೋರಣ ನಾನಷ್ಟೆ ಅಲ್ಲ ಗೆಳತಿ ನೀನೂ ಕಾರಣ' ಎಂದು ಹೇಳುತ್ತಾರೆ. ಪ್ರೀತಿಯ ಗಾಳಕ್ಕೆ ಸಿಕ್ಕ ಪ್ರೇಮಿಗಳು ಅವಸ್ಥೆಗಳು, ಪ್ರೇಮಿಯ ಪರಿತಾಪಗಳನ್ನು ಹೇಳುತ್ತಾ ಪ್ರೇಮಕವಿಯಾಗಿಬಿಡುತ್ತಾರೆ. "ಪ್ರೇಮಗೀತೆ ಎದೆಯ ಭಾವ ಹೊರ ಹೊಮ್ಮುವ ಸೆಲೆಯಂತೆ ಈ ಪ್ರೇಮಗೀತೆ ಮನದ ಬಯಕೆ ಕೈಗೂಡಿದ ನೆಲೆಯಂತೆ" ಎನ್ನುತ್ತಾರೆ.

ಪ್ರೇಮದ ಭಗ್ನತೆಯನ್ನು ಕುರಿತು ಹಾಡುವ ಗೀತೆ 'ಕೊಲ್ಲುವುದಾದರೆ ಕೊಂದು ಬಿಡು ಹೀಗೆ ಕಾಡಬೇಡ, ಗಾಯಗೊಂಡಿರುವ ಹೃದಯವಿದು ಚೆಲ್ಲಾಟವಾಡಬೇಡ' ಎನ್ನುವಲ್ಲಿ ಭಗ್ನ ಪ್ರೇಮಿಯ ನೋವಿನ ಧನಿಯನ್ನು ಚಿತ್ರಿಸುತ್ತಾರೆ. ಹಾಗೆಯೇ ಪ್ರೇಮದ ದ್ರೋಹವನ್ನು ನೆನಪಿಸುವ "ಯಾರು ಸಾಕ್ಷಿ ನಿನ್ನ ದ್ರೋಹಕೆ? ಅಂತರಾತ್ಮ ನಿನಗಿದ್ದರೆ ನೋಯುವೆ, ನೀನೂ ಬೇಯುವೆ ಅನುತಾಪದುರಿಯಲಿ, ಆಳವ ನಿಜವಲಿ" ಎನ್ನುವಲ್ಲಿ ಪ್ರೀತಿಯ ಪರಿತಾಪ ಇಬ್ಬರಲ್ಲೂ ಇರುವುದು ಎನ್ನುತ್ತಾರೆ.

"ಮರೆತು ಬಿಡು ಅವನನ್ನು ಮನವೇ ಕವನದಲ್ಲಿ 'ಏಕೆ ಈ ನಿಟ್ಟುಸಿರು? ಈ ವ್ಯರ್ಥ ಕಂಬನಿ? ಮರೆತು ಬಿಡು ಅವನನ್ನು ಮನವೇ' ಎನ್ನುವಲ್ಲಿ ಪ್ರೀತಿ ಮರೆತ ಪ್ರೇಮಿಯ ವರ್ತನೆಗೆ ನೊಂದು ಹೇಳುವ ಮಾತುಗಳಾಗಿವೆ. ಹಾಗೆಯೇ ನಲ್ಲ-ನಲ್ಲೆ ಇಬ್ಬರ ಭಾವನೆಗಳನ್ನು ಕುರಿತು ಹೇಳುತ್ತಾರೆ. ಆದರೂ ಪ್ರೇಮಿಗೆ ತನ್ನ ಪ್ರೇಮವನ್ನು ಮರೆಯಲು ಏನೆಲ್ಲ ಮಾಡಿದರೂ ಬಿಡದೆ ಆ ನೆನಪು ಕಾಡುತ್ತದೆ ಎಲ್ಲಾ ಕಡೆಯು ಅವಳ ನೆನಪು ತರುವ ಚಿತ್ರಣವೇ ಕಾಣುವಂತೆ "ನಲ್ಲೆ ನಿನ್ನ ಮರೆಯಲು ಏನೆಲ್ಲ ಮಾಡಿದೆ . . . ಅರಳಿ ನಿಂತ ಮಲ್ಲಿಗೆಯೂ ಅವಳದೆ ನಗು ಕಾಣುತ್ತದೆ, ಮರಗಳ ತುಂಬ ಅವರ ಹೆಸರೇ ಪೊದೆ ಪೊದೆ ಬಳ್ಳಿ ಬಳ್ಳಿ ಎಲ್ಲಾ ಕಡೆ ಇದೆ ಅದಕ್ಕಾಗಿ ಪರಿತಪಿಸುವ ಪ್ರೇಮಿಯ ಎದೆಯ ನೋವಿನ ಹಾಡಾಗಿದೆ, ಹೀಗೆ ಪ್ರೇಮ ಪ್ರೀತಿ-ಪ್ರಣಯದ ಚೆಲ್ಲಾಟ, ಸಿಹಿ ಕನಸುಗಳು, ಪ್ರೇಮದ ತುಡಿತ ಮಿಡಿತಗಳು ಹಾಗೆಯೇ ಪ್ರೀತಿಯ ಭಗ್ನ, ಭಗ್ನ ಪ್ರೇಮಿಯ ವಿರಹದ ತಾಪ ಈ ಎಲ್ಲಾ ಭಾವಗಳನ್ನು ಹೊಮ್ಮಿಸುವ ಅವರ ಭಾವಗೀತೆಗಳು ಕೇಳುಗರ ಮನಕ್ಕೆ ಮುಟ್ಟಿವೆ. ಅದು ಸರಳವಾದ ಭಾಷೆ, ಚಿರಪರಿಚಿತವಾದ

ಭಾವಾವೇಶಗಳ ಮೂಲಕ ಅವು ನೇರವಾಗಿ ಶ್ರೋತೃಗಳ ಮನಕ್ಕೆ ತಲುಪಲು ಈ ಅಂಶಗಳು ಕಾರಣವಾಗಿವೆ ಎಂದು ಗುರುತಿಸಬಹುದು.

ದಾಂಪತ್ಯ ಬದುಕನ್ನು ಕುರಿತ ಗೀತೆಗಳಲ್ಲಿ ದಾಂಪತ್ರ ಬದುಕಿನಲ್ಲಿ ಪತಿ–ಪತ್ನಿಯರ ಒಡನಾಟ, ಪ್ರೀತಿಯ ಹೊಂದಾಣಿಕೆ, ಪರಸ್ಪರರ ವರ್ತನೆಗಳು ಬಗ್ಗೆ ಹೇಳುವ ಕವಿತೆಗಳಿವೆ. ದಾಂಪತ್ಯವೆಂಬುದು ಅಕ್ಷಯ ಪಾತ್ರೆಯಲ್ಲಿ ದಿನವೂ ನಾವೇ ತಂದು ತುಂಬಬೇಕು ಎನ್ನುತ್ತವೆ. 'ತನ್ನಾಕೆಯ' ಬಗ್ಗೆ ಹೇಳುವ ಪುಟ್ಟ ಕೊಳ' ಕವಿತೆಯಲ್ಲಿ "ನನ್ನವಳು ಈ ನನ್ನಾಕೆ ಹರಿಯುವ ನದಿಯಲ್ಲಿ ಸರಿವ ಸರಿತೆಯಲ್ಲ ಇವಳೊಂದು ಪುಟ್ಟ ಕೊಳ, ನನ್ನ ಬಾಳಿನ ಜೀವಜಲ' ಎನ್ನುತ್ತಾರೆ ತಮ್ಮ ದಾಂಪತ್ಯ ಬದುಕಿನಲ್ಲಿ ತನ್ನಾಕೆಯ ಪಾತ್ರವೇನು ಅವಳ ಗುಣ ಸ್ವಭಾವಗಳ ಬಗ್ಗೆ, ಅಲ್ಪ ತೃಪ್ತ ಸಂತೃಪ್ತ ದಾಂಪತ್ಯ ಬದುಕಿನ ಬಗ್ಗೆ ಹೇಳುವ ಮಾತುಗಳು ಧ್ವನಿಪೂರ್ಣವಾಗಿವೆ, ಪ್ರೇಮ ಕವಿತೆಗಳಲ್ಲಿನ ತುಂಟತನ ಕವಿಯಲ್ಲಿ ಮರೆಯಾಗುತ್ತಾ ಬಂದಿದೆ, 'ಮದುವೆ' ಕವಿತೆಯಲ್ಲಿ ಮದುವೆ ಅರ್ಥ ಅವರವರ ಬದುಕಿನಲ್ಲಿ ಹೇಗೆಲ್ಲಾ ಬರುತ್ತವೆ ಎಂಬುದನ್ನು ತಿಳಿಸುತ್ತಾರೆ.

ಬಿ.ಆರ್.ಲಕ್ಷ್ಮಣರಾವ್ ಅವರ ಗೀತೆಗಳ ಕ್ಯಾಸೆಟ್ ರೂಪದಲ್ಲಿ ಹೊರಬಂದು ಅಪಾರ ಸಂಖ್ಯೆಯ ಕೇಳುಗರನ್ನು ಪಡೆದುಕೊಂಡಿರುವುದು ಸಾಮಾನ್ಯವಾಗಿ ಸಾಹಿತ್ಯದಲ್ಲಿನ ಜನಪ್ರಿಯತೆಯ ಅಂಶಗಳೆಂದು ಗುರುತಿಸುವ ಪ್ರೀತಿ – ಪ್ರೇಮ, ಪ್ರಣಯಕ್ಕೆ ಸಂಬಂಧಿಸಿದ ಗೀತೆಗಳು ಹೆಚ್ಚಿನ ಸಂಖ್ಯೆಯಲ್ಲಿದ್ದ ಅವುಗಳು ಜನರ ಮೆಚ್ಚುಗೆ ಗಳಿಸಲು ಕಾರಣವಾಗಿವೆ ಎಂದು ಗುರುತಿಸಬಹುದು. 'ಮನದ ಹಂಬಲ' ಇಲ್ಲಿ ಮನದ ಹಂಬಲದ ಕನಸೆಲ್ಲವೂ ಮಂಜಂತೆ ಕರಗಿ ಮರೆಯಾಯಿತೆ? ಸೆಲೆ ಬತ್ತಿತೆ ಆ ಪ್ರೀತಿಯ ಹೊಳೆ . . . . ಎಂದು ಹಾಡುತ್ತಾ ಈ ಬಾಳಿಗುಂಟೆ ಮರುವಸಂತ ಈ ಪಯಣಕ್ಕುಂಟೆ ಹೊಸ ದಿಗಂತ, ಬೆಳಕು ಮೂಡೀತೆ ಇರುಳು ಕಳೆದು? ಹೊಸ ಅಂಕಕಾಗಿ ತೆರೆ ಸರಿವುದೆ? ಎಂಬೆಲ್ಲಾ ಪ್ರಶ್ನೆಗಳನ್ನು ಹಾಕುವ ಮೂಲಕ ಹೊಸ ಬದುಕಿನ ಹಾಡಿಗೆ ದಾರಿ ಸುಗಮವಾಗಲು ಬಯಸುವ ಮನದ ಬಯಕೆಯನ್ನು ಮಧುರವಾದ ಗಾಯನವಾಗಿಸಿದ್ದಾರೆ. ಅಂತರಂಗದ "ನೋವಿಗೆ ದನಿಯಾಗಿ ಇಂದೇಕೆ ಆ ನೆನಪು ನನ್ನನ್ನು ಕಾಡಿದೆ' ಎನ್ನುವಲ್ಲಿ ಎದೆಯಾಳದ ವಿಷಾದ ವ್ಯಕ್ತವಾಗಿದೆ. ಹಾಗೆಯೇ ವಿರಹವನ್ನು ಭಗ್ನ ಪ್ರೇಮವನ್ನು ಕುರಿತು ಹೇಳುವ 'ಬಣ್ಣ ಬಣ್ಣವ ಬರೆದು ನಂದನವ ಕಣ್ಮುಂದೆ ತೆರೆದು ಹೋದಳೇಕೆ' ನನ್ನ ತೊರೆದು ಚಿತ್ರಕೆ ಮಸಿ ಬಳಿದು ಎಂಬ ಈ ಗೀತೆಗೆ . . . . ಅಶ್ವಥ್ ದನಿ ನೀಡಿದ್ದಾರೆ. ಹಾಗೆಯೇ ಮತ್ತೊಂದು ಗೀತೆ 'ನಿನ್ನ ಕಿರು ನಗೆಯೊಂದೆ ಸಾಲದೆ ಓ ನಲ್ಲ – ಈ ಬಾಳು ಬೆಳಕಾಗಲು ನಿನ್ನ ಬಿರುನುಡಿಯೊಂದೇ ಸಾಲದೆ ಕ್ಷಣದಲ್ಲೆ ಕವಿಯಲು ಕತ್ತಲು . . . . ನೀ ಬರಲು ನನ್ನ ಜತೆಗಿರಲು ಕಣ್ಣುಗೆಲ್ಲವು ಅಂದ ಮನಸಿಗೆಲ್ಲ ಆನಂದ ಎಂಬುದನ್ನು ರತ್ನಮಾಲಾ ಪ್ರಕಾಶ್‌ರವರ ಮಧುರವಾದ ಕಂಠಸಿರಿ ಯುವ ಮನಸ್ಸಿಗೆ ಹತ್ತಿರವಾಗುವಂತೆ ಮಾಡುತ್ತದೆ.

ಜಿ.ಆರ್.ಲಕ್ಷ್ಮಣರಾವ್ ಅವರ ಹಾಡುಗಳಲ್ಲಿ ಹರೆಯದ ಪ್ರೀತಿ ಕನಸು ಕನವರಿಕೆಗಳನ್ನು ನೆನಪಿಸುವ ವಸ್ತು ವಿಷಯಗಳು ಜನಪ್ರಿಯತೆಯ ಅಂಶಗಳಾಗಿವೆ ಎಂದು ಹೇಳಬಹುದು. ಜೊತೆಗೆ ಪ್ರೀತಿ ಪ್ರೇಮ ಪ್ರಣಯ, ದಾಂಪತ್ಯ, ವಿರಹ ಅಗಲಿಕೆ, ಭಗ್ನತೆ, ಹದಿಹರೆಯದ ಮೋಹ, ಪ್ರೀತಿಯ ಉತ್ಕಟತೆ ಇವುಗಳ ಜೊತೆಗೆ ಗಂಭೀರ ಚಿಂತನೆಯ ಅಂಶಗಳನ್ನು ಒಳಗೊಂಡಿರುವ, ಹಾಸ್ಯ ವ್ಯಂಗ್ಯಗಳಿಂದ ಕೂಡಿದ ಗೀತೆಗಳನ್ನು ಕಾಣಬಹುದು. ಕವಿಯ ಭಾವ ತನ್ನ ಕವಿತೆಗಳು ಎಲ್ಲರನ್ನು ಎಲ್ಲವನ್ನು ಒಳಗೊಂಡು ಎಲ್ಲರಿಗಾಗಿ ಉಳಿಯಬೇಕೆಂಬ ತುಮುಲವನ್ನು ಸೂಸುವ

ನೆಲದ ಅನ್ನವನ್ನುಂಡು ತೇಗೀತೆ ?
ಹಸಿರುಟ್ಟು ಹೂ ತೊಟ್ಟು ಬೀಗೀತೆ ?
ಮೈತುಂಬ ಫಲ ಹೊತ್ತು ಬಾಗೀತೆ ?
ನನ್ನ ಗೀತೆ.

ಅಳುವ ಮಕ್ಕಳ, ದಣಿದ ಒಕ್ಕಲ, ಅಸಹಾಕರಿಗಾಗಿ ಮರುಗಿ ದುರಳರಿಗಾಗಿ ಕೆಚ್ಚಿಂದ ಎರಗಿ ಮುರಿದರೂ ಕಂಗೆಡದೆ ಮಿರುಗ ಬೇಕೆನ್ನುತ್ತಾ

ಎಲ್ಲರಿಗೂ ಹಿತವಾಗಿ ಒಗ್ಗೀತೆ?
ಒಲ್ಲದವರನೂ ಬಳಿಗೆ ಜಗ್ಗೀತೆ?
ಬಲ್ಲವರ ಎದೆಗಳಲಿ ಹಿಗ್ಗೀತೆ?
ನನ್ನ ಗೀತೆ;

– ಸುಬ್ಬಾ ಭಟ್ಟರ ಮಗಳೇ ಪು ; ೧೭–೧೮

ಎನ್ನುವ ಹಂಬಲದಿಂದ ಬಂದಿರುವ ಈ ಗೀತೆ ಕವಿಯ ಆಶಯವೇನೆಂದು ಹೇಳುತ್ತದೆ. 'ಮಾದರಿ', 'ಸ್ವಾತಂತ್ರ್ಯ', 'ಮಳೆ', 'ಕಾಲ', 'ಅಮ್ಮ', 'ಈ ಕಂಗಳು, 'ನಿಂಬೆ ಗಿಡ', 'ವಿಷಾದ', ಮರವಾಗು, 'ಸಾಧನ', 'ಕಾರಣ', 'ಮಣ್ಣು ಹುಳ', 'ಭರವಸೆ', 'ಸಹ' ಕವಿತೆಗಳು ಪ್ರಕೃತಿಯ ಬಗ್ಗೆ ಗೆಳೆತನದ ಬಗ್ಗೆ ಕಾಲದ ಮಹತ್ವದ ಬಗ್ಗೆ ಕವಿಗೆ ತಾನೇನಾಗಬೇಕೆಂಬ ಆಸೆ ಎಲ್ಲವು ವ್ಯಕ್ತವಾಗಿದೆ.

'ಮಾದರಿ' ಪದ್ಯದಲ್ಲಿ ಕವಿ ಪರಿಸರವನ್ನು ಕುರಿತು ಹೇಳುವ ಮಾತುಗಳು ಗಂಭೀರ ಚಿಂತನೆಯಿಂದ ಕೂಡಿವೆ. ಮನುಷ್ಯನಿಗೆ ಪ್ರಕೃತಿ ಹೇಗೆ ಮಾದರಿ ಎಂಬುದನ್ನು

ಉಪ್ಪು ನನಗೆ ಸಿಹಿ ನೀರು ನಿಮಗಿರಲಿ
ಎನ್ನುವ ಸಾಗರವೇ,
ಕಾರ್ಮುಗಿಲಿನ ಆಗರವೇ,
ತಡೆದು ಮುಗಿಲನ್ನು ಇಳೆಗೆ ಮಳೆಯನ್ನು
ಸುರಿಸುವ ಓ ಗಿರಿಯೇ

ಔದಾರ್ಯದ ಐಸಿರಿಯೇ,

ವಂದನೆ ನಿಮಗೆ,

ನೀವೇ ಮಾದರಿ ನಮಗೆ.

ಇಡೀ ಪ್ರಕೃತಿ ತನಗಾಗಿ ಅಲ್ಲವೆಂದು ಎಲ್ಲ ಮನುಷ್ಯರಿಗಾಗಿ ಎನ್ನುವ ಮಂತ್ರ ಪಠಿಸುತ್ತಾ ಸಾಗರ, ಗಿರಿ, ಕಾರ್ಮುಗಿಲು, ಮರ, ನದಿ, ಕಾಡು, ಮಾರುತ, ಈ ಎಲ್ಲವು ನಮಗೇ ಹೇಗೆ ಮಾದರಿಯಾಗಿದೆ ಎಂಬುದರ ವಿವರದೊಡನೆ ಮನುಷ್ಯನಿಗೆ ಪ್ರಕೃತಿಯೇ ಮಾದರಿ ಎಂಬುದನ್ನು ಹೇಳುತ್ತದೆ.

ದೇಹವನ್ನು ಕುರಿತಂತೆ ಕವಿಯ ಭಾವ 'ಸಾಧನ' ಕವಿತೆಯಲ್ಲಿ ವ್ಯಕ್ತವಾಗಿದೆ. ಮನುಷ್ಯ ದೇಹವನ್ನು ತಾನಾಗೇ ಕಲ್ಪಿಸಿದ ಮಾಪಕಗಳಿಂದ ಹೀಗಳೆಯುವುದು ಬೇಡ, ಭವದ ಅನುಭವಕೆ, ಅನುಬಾವಕೆ ದೇಹವೇ ಆಧಾರ "ಈ ಮಾಲೆಯನೆ ಬಳಸಿ ನೀನೇರುವೆ, ಕಡಗಿದನೆ ತೊಡಕೆಂದು ನೀ ದೂರುವೆ; ದೇಹವನು ತೊರೆದು ನೀ ಪಾರಾದ ಬಳಿಕೆ ಏನಿದ್ದರೇನು! ಎಲ್ಲಿ ಸಂಪರ್ಕ? ಎನ್ನುವ ಪ್ರಶ್ನೆ ದೇಹ ನಶ್ವರವೆಂದು ಹೇಳುವ ಮಾತಿಗೆ ದೇಹದ ಪ್ರಾಮುಖ್ಯತೆ ಬಗ್ಗೆ ತಿಳಿಸುವ ಈ ಗೀತೆ ಅರ್ಥಪೂರ್ಣವಾಗಿದೆ.

ಸ್ವತಂತ್ರ ದೇಶದ ಸ್ವತಂತ್ರ ಜನತೆಯ ಸ್ವಾತಂತ್ರ್ಯದ ಕಲ್ಪನೆಯನ್ನು ಕುರಿತ ವಿಡಂಬನಾತ್ಮಕವಾದ ಗೀತೆ ಪ್ರಮುಖವಾಗಿದೆ. ಈ ದೇಶದ ಜನರ ಸ್ವಾತಂತ್ರ್ಯದ ಪರಿಕಲ್ಪನೆಯ ಬಗ್ಗೆ ಉದಾಹರಣೆ ನೀಡುತ್ತಾ ವ್ಯಂಗ್ಯಾತ್ಮಕವಾದ ನುಡಿಗಳ ಮೂಲಕ ವಿಡಂಬಿಸುತ್ತಾ ಸಾಮಾಜಿಕ ಬದುಕನ್ನು ಕುರಿತ ಲೇವಡಿಯನ್ನು ಈ ಗೀತೆಯಲ್ಲಿ ಕಾಣಬಹುದು.

ಹಾದಿಬದಿಯಲ್ಲೆ ಹಾಡು ಹಗಲಲ್ಲೆ

ನಿಂತು ನಿರ್ಲಜ್ಜೆಯಿಂದ

ಅಹಾ, ಭಾರತಮಾತೆಯ ಕಂದ

ಮಾಡುತ್ತಿರುವನು ಒಂದಾ!

ರಸ್ತೆಯೇ ತಿಪ್ಪೆ ಈ ಸತ್ಪ್ರಜೆಗೆ

ಎಸೆಯಲು ಬಾಳೆ ಸಿಪ್ಪೆ;

ಜಾರಿ ಬಿದ್ದಾರು ಮಂದಿ ಎಂದರೆ

ಅನ್ನುವ 'ಅದು ನನ್ನ ತಪ್ಪೇ?

ಯಾರಾದರೇನಂತೆ ಗೋಡೆ, ಅವನಲ್ಲ ವಾರಸುದಾರ

ಹಚ್ಚುತ್ತಾರೆ ಜನ ಸಿನಿಮಾ ಪೋಸ್ಟರ್

ಬರೆಯುತ್ತಾರೆ 'ಧಿಕ್ಕಾರ'

ಕ್ಯಾಮರಾ ಕಣ್ಣು ; ಪು ; ೩೬೭

ಎನ್ನುವಲ್ಲಿ ವಿಡಂಬನೆಯ ಭಾವ ವ್ಯಕ್ತವಾಗಿವೆ.

'ಕಾಲವನ್ನು' ಕುರಿತು ಹೇಳುವ ಕವಿತೆ ಹಾಸ್ಯದ ದಾಟಿಯಿಂದ ಗಂಭೀರತೆಯೆಡೆಗೆ ಸಾಗುತ್ತದೆ. ಕಳೆದು ಹೋದ ಕಾಲ ಮತ್ತೆ ಏನೇ ಕೊಟ್ಟರೂ ಸಿಗುವುದಿಲ್ಲ ಎನ್ನುವ ಕವಿ ಕಾಲವನ್ನು ಹೋಲಿಸುವ ರೀತಿ ಹಾಸ್ಯ ಭಾವದ ಮೂಲಕ.

ಜಿಪುಣ ಅಂದ್ರೆ ಜಿಪುಣ ಈ ಕಾಲ
ಏನೆ ಗಿರವಿ ಇಟ್ರೂ
ಎಷ್ಟೆ ಬಡ್ಡಿ ಕೊಟ್ರೂ
ಹುಟ್ಟೋದಿಲ್ಲ ಬಂದುಗಳಿಗೆ ಸಾಲ;
ಅಮ್ಮ ಯಾರೋ ಅಪ್ಪ ಯಾರೋ ಕಾಣೆ
ಸಿಕ್ಕರೂ ಅಣುವಿನ ಗುಟ್ಟು
ಪ್ರಕೃತಿಯ ಬಗೆ ಬಗೆ ಪಟ್ಟು
ಸಿಕ್ತ ಇಲ್ಲ ಈ ಮಹಾರಾಯನ ಮೂಲ

– ಸುಬ್ಬಾ ಭಟ್ಟರ ಮಗಳೇ ; ಪುಟ ; ೪೭–೪೮

ಎಂದೆಲ್ಲ ಹೇಳುತ್ತಾ ಕಾಲದ ಹಿಡಿತದಿಂದ ಯಾರು ಮುಕ್ತರಾಗಲು ಸಾಧ್ಯವಿಲ್ಲವೆನ್ನುತ್ತಾರೆ. ಎಲ್ಲರ ನೆತ್ತಿಯ ಮೇಲೂ ಕಾಲನ ಪಾದದ ನೆರಳು ಇದ್ದೆ ಇವೆ ಎನ್ನುತ್ತಾ ಕಾಲವನ್ನು ಮೀರಲು ಕವಿ ಕೊಡುವ ದಾರಿ

ಸಿಕ್ಕದೆ ರೂಢಿಯ ಕೈಲಿ
ಕಲ್ಪಿಸಿ ಹೊಸ ಹೊಸ ಗೇಲಿ
ದಿಕ್ಕರಿಸೋಣ ಲೆಕ್ಕಚಾರದ ತಾಳ

ಎನ್ನುವ ಕವಿಯ ಭಾವ ಸಂಗೀತಕಟ್ಟಿಯವರ ಧ್ವನಿಯಲ್ಲಿ ಉತ್ತಮವಾದ ಹಾಡಾಗಿ ಕೇಳುಗರನ್ನು ಆಕರ್ಷಿಸುತ್ತದೆ. 'ಅಮ್ಮ' ಕವಿತೆಯು ಅಮ್ಮನ ಬೆಚ್ಚನೆ ಗೂಡಲ್ಲಿ ಬಂಧಿಯಾದ ಮಗುವಿಗೆ ಸಿಗುವ ಅಮ್ಮನ ಪ್ರೀತಿಯ ಸೆಲೆ. ಜೀವದ ಅಮೃತಧಾರೆ ಸವಿದು ಅಲ್ಲೆ ಬಂಧಿಯಾಗದೆ ಪ್ರಪಂಚದ ಬದುಕಿನೊಂದಿಗೆ ಬದುಕಲು ಕಲಿವೆನೆಂಬ ಅಧಮ್ಯ ಆಸೆ. ಅದನ್ನೆಲ್ಲಾ ಕಲಿತ ಮೇಲೆ ಮತ್ತೆ ಅಮ್ಮನ ಬೆಚ್ಚನೆ ಗೂಡಿಗೆ ಮರಳುವ ಅನಿವಾರ್ಯತೆ 'ಮೂರ್ತ ಪ್ರೇಮದೆಡೆಗೆ' ಎನ್ನುವಲ್ಲಿ ಮನುಷ್ಯ ಎಷ್ಟೇ ಎತ್ತರಕ್ಕೇರಿದರೂ ತಾಯ ಮಮತೆಯೆಡೆಗೆ ಕೊನೆಗೆ ಬರಲೇಬೇಕೆನ್ನುವ ಮೂಲಕ ತಾಯಿ ಪ್ರೀತಿಯ ಸೆಳೆತದ ಬಗ್ಗೆ ಹೇಳಿರುವ ಈ ಹಾಡು ಧ್ವನಿಪೂರ್ಣವಾಗಿದೆ.

'ಗೆಳೆಯರು' ಕವಿತೆಯಲ್ಲಿ ಕವಿ ಗೆಳೆತನ ಗೆಳೆಯರ ಅವಶ್ಯಕತೆ ಯಾಕೆ ಗೆಳೆಯರು ಬದುಕಿಗೆ ಬೇಕಾಗಿದ್ದಾರೆಂಬುದನ್ನು

ಗೆಳೆಯರಿರಲಿ ಈ ಬಾಳಿನಲ್ಲಿ
ಗೆಳೆಯರಿರಲಿ ಕೊನೆತನಕ
ಹಗುರ ಹೃದಯ, ತಿಳಿ ಮನಸಿರಲಿ
ತೊರೆಯ ಎಲ್ಲ ತವಕ
ಶ್ರಮವ ಸಾಧನೆಗೆ ಬೆನ್ನ ಚಪ್ಪರಿಸಲು
ತೊಡಿಸಲು ಹಿಗ್ಗಿನ ಮಾಲೆ
ಬೀಗಿ ಉಬ್ಬಿದರೆ ಚುಚ್ಚಿ ಎಚ್ಚರಿಸಲು
ಬಿದ್ದರೆ ಎತ್ತಲು ಮೇಲೆ

ಸುಬ್ಬಾಭಟ್ಟನ ಮಗಳೆ; ಪು ; ೭

ಎನ್ನುವಲ್ಲಿ ಎಂಥ ಗೆಳೆಯರು ಬೇಕು. ಆ ಗೆಳೆಯರು ಹೇಗಿರಬೇಕು. ಯಾವ ಯಾವುದಕ್ಕೆ ಗೆಳೆಯರು ಬೇಕೆಂದು ಹೇಳುತ್ತಾ ಕವನದ ಅಂತ್ಯದಲ್ಲ. ಜೀಗಿ ಉಜ್ಬಿದರೆ ಚುಚ್ಚಿ ಎಚ್ಚರಿಸಲು ಬಿದ್ದರೆ ಎತ್ತಲು ಮೇಲೆ ಎನ್ನುತ್ತಾರೆ., ಅಂದರೆ ಒಳಿತು ಕೆಡಕು ಸುಖ-ದು:ಖ ಗಳೆರಡರಲ್ಲೂ ಗೆಳೆಯರಿರಬೇಕೆನ್ನುವುದನ್ನು ತಿಳಿಸುತ್ತಾರೆ.

'ಪಿಷಾದ' ಕವಿತೆಯು ಗಂಭೀರ ಚಿಂತನೆಯ ಕಪಿತೆಯಾಗಿದೆ. ದೇವರ ಆಗಾದ ಕರುಣೆಯನ್ನು ಕುರಿತು ಹೇಳುತ್ತಾ ದೈವ ಸೃಷ್ಟಿಯ ಮಹತ್ವದ ಬಗ್ಗೆ

" ತೋಳಿಕೊಂದು ಕುರಿಯ ಕೊಟ್ಟೆ
ಸಿಂಹಕ್ಕೆಂದು ಜಿಂಕೆಯಿಟ್ಟೆ
ನರನಿಗೆ ನರ + ನನ್ನೆ ಬಿಟ್ಟೆ ಬೇಟೆಯಾಡಲು
ತುಳಿತಕೆ ನೀ ತಿಮಿರು ಕೊಟ್ಟೆ
ದುಡಿತಕೆ ಬರಿ ಬೆಮರು ಕೊಟ್ಟೆ
ಕವಿಗೆ ನುಡಿಯ ಡಮರು ಕೊಟ್ಟೆ
ಬಡಿದು ದಣಿಯಲು

ಕ್ಯಾಮರಾ ಕಣ್ಣು ; ಪು ; ೪೨೭ .

ಪ್ರಕೃತಿಯಲ್ಲಿನ ಸೃಷ್ಟಿಯ ವೈಚಿತ್ರದ ಬಗ್ಗೆ ಹೇಳುತ್ತಾರೆ. ಕೊನೆಗೆ ಕೈಯಕೊಟ್ಟೆ ಕೆಡಲೆಂದು ಕಾಲು ಕೊಟ್ಟೆ ಎಡವಲೆಂದು ಬುದ್ಧಿ ಕೊಟ್ಟೆ ನಿನ್ನನ್ನೇ ಅಲ್ಲಗಳೆಯಲು ಎನ್ನುತ್ತಾರೆ. ದೇವರೆ ಕೊಟ್ಟ ದೇಹ ಅಂಗಾಂಗಗಳಿಂದ ಕೊನೆಗೆ ದೇವರನ್ನೇ ಅಲ್ಲಗಳೆಯುವ ಮಟ್ಟ ತಲುಪಿರುವುದಕ್ಕೆ ವಿಷಾದ ವ್ಯಕ್ತಪಡಿಸಿದ್ದಾರೆ.

' ಮರವಾಗು ' ಕವಿತೆಯಲ್ಲಿ ಹಡೆದ ಭೂಮಿ ತಾಯಿಗೆ ವರವಾಗುವ ಮರವಾಗಬೇಕೆಂಬ ಕರೆ ಕೊಡುವ ಕವಿಯ ಭಾವದಲ್ಲಿ ಮನುಷ್ಯ ಬದುಕಿಗಿಂತ ಪ್ರಕೃತಿಯಲ್ಲಿ ' ಮರ ' ವಾಗುವುದರಲ್ಲೇ ಮಹತ್ವವಿದೆ ಎನ್ನುವ ಅಂಶವಿದೆ.

ಮರವಾಗಲೆ ಓ ಜೀವವೇ, ಮರವಾಗು
ಹಲಬಗೆಯಲಿ ಲೋಕಕ್ಕೆ ನೆರವಾಗು
ಅಲೆದಾಡುವ ಜೀವಕ್ಕಲ್ಲಿ ಯಾವ ನೆಲೆ ?
ನೆಲವಾಳಕೆ ಬೇರನೂರಿ ಸ್ಥಿರವಾಗು

ಕ್ಯಾಮರಾ ಕಣ್ಣು ; ಪು ; ೪೩೮

ಪ್ರತಿ ಚೈತ್ರದಲ್ಲಿ ಹೊಸ ಜೀವಕಳೆ ಪಡೆದು ಹಡೆದ ಭೂಮಿ ತಾಯಿಗೆ ವರವಾಗು ಎನ್ನುವ ಮೂಲಕ ಮನುಷ್ಯನ ಬದುಕು ಪ್ರಕೃತಿಗೆ ಶಾಪ ಎಂಬ ಅಂಶವನ್ನು ಮಾರ್ಮಿಕವಾಗಿರ ಹೇಳುವ ಈ ಕವಿತೆ ಗಮನಾರ್ಹವಾಗಿದೆ.

ಅದೇ ಭಾವವನ್ನು ವ್ಯಕ್ತಪಡಿಸುವ ಗೀತೆ ' ಮಣ್ಣು ಹುಳ ' ಕವಿತೆ ಆಗಬೇಕು ನಾನು ಒಂದು ಮಣ್ಣು ಹುಳಿ ನಾನು ಒಲ್ಲ ನಿಜ ಎದೊಂದೆ ಈ ಪ್ರೀತಿಯ ನೆಲ ಎನ್ನುವ ಕವಿಗೆ ಭೂಮಿಯಸೆಳತವನ್ನು ಮೀರಿ ಬೆಳೆಯುವ ಹಂಬಲವಿಲ್ಲ. ಮಣ್ಣು ಸತ್ವ ಹೀರಿ ಬದುಕುವ, ರೈತನ ಮಿತ್ರ ಎರೆಹುಳು ತಾನಾಗಬೇಕೆಂಬ ಭಾವನೆ ಕವಿಯ ಆಶಯವನ್ನು ತಿಳಿಸುತ್ತದೆ.

ಬದುಕಿನಲ್ಲಿ ಭರವಸೆಯೇ ಮುಖ್ಯ ಹತಾಶೆಯಲ್ಲಿ ಏನೂ ಇಲ್ಲ. ಅದು ಬರಿ ಶೂನ್ಯ. ಬರಿ ಬೂದಿ ಎಂದು ಹೇಳುವ ಕವಿ ಪ್ರಕೃತಿಯೇ ಪ್ರತಿಮೆಗಳಾಗಿ ನಮ್ಮ ಮುಂದೆ ಬಂದು ಭರವಸೆಯಡೆಗೆ ಸಾಗುವುದಕ್ಕೆ ಆಧಾರ, ಮಾನವತೆಗೆ ಪ್ರೀತಿಯೊಂದೆ ಆಧಾರ., ಅದನ್ನು ಸ್ನೇಹದಿಂದ ಕರುಣೆಯೊಂದಿಗೆ ಬೆಸೆಯಬೇಕು, ಎಲ್ಲರ ನೋವು ನೀಗಬೇಕು. ಆಗ ನಿನ್ನ ನಗೆಗೂ ಅರ್ಥ, ಅದು ಸ್ವಾರ್ಥ ಮೀರಿದ ಭಾವ ಎಂಬುದನ್ನು 'ಆಗು ಗೆಳೆಯ ಆಗು ನೀನು ಭರವಸೆಯ ಪ್ರವಾದಿ ಹತಾಶೆಯಲ್ಲೇನಿದೆ? ಬರೀ ಶೂನ್ಯ ಬರೀ ಬೂದಿ, ಎನ್ನುವ ಮೂಲಕ ಗೆಳೆಯನಲ್ಲಿ ಚೈತನ್ಯ ತುಂಬಲು ಪ್ರಯತ್ನಿಸಿದ್ದಾರೆ.

'ಸಹ' ಕವಿತೆಯಲ್ಲಿ ನಮ್ಮ ಅಂಗಾಂಗಳು ಕೇವಲ ಅವುಗಳ ಕಾರ್ಯ ಮಾಡಲಿಕ್ಕಲ್ಲ ಅದಕ್ಕೂ ಮೀರಿದ ಒಂದನ್ನು ಮಾಡುವುದಕ್ಕೆ ಆ ಮೂಲಕ ವಿವೇಕವಂತರಾಗಲು ಸಹಾಯಕ ಎಂಬುದನ್ನು

'ಕಂಗಳು ಕೇವಲ ನೋಡಿಲಿಕ್ಕಲ್ಲ
ಕಂಬನಿ ತುಂಬಲು
ನಾಲಿಗೆ ಕೇವಲ ನುಡಿಯಲಿಕ್ಕಲ್ಲ
ರುಚಿಯನ್ನು ಸವಿಯಲು

ಹೃದಯ ಕೇವಲ ಬಡಿಯಲಿಕ್ಕಲ್ಲ
ಲೋಕಕ್ಕೆ ಮಿಡಿಯಲು
ಬುದ್ಧಿ ಬರೀ ದಿಕ್ಕರಿಸಲಿಕ್ಕಲ್ಲ
ಬರೆಹಚ್ಚಿ ಸ್ವೀಕರಿಸಲು"

ಸುಬ್ಬಾಭಟ್ಟರ ಮಗಳೇ ; ಪು ; ೧೨೧

ಎನ್ನುವಲ್ಲಿ ಸ್ವಾರ್ಥದ ಬದುಕು ಬದುಕಲ್ಲ ಎಲ್ಲರಿಗಾಗಿ ಬದುಕ ಬೇಕೆಂದು ಹೇಳುತ್ತಾರೆ. ಈ ರೀತಿಯಲ್ಲಿ ಗಂಭೀರ ಚಿಂತನೆಯನ್ನು ಒಳಗೊಂಡ ಗೀತೆಗಳು ಜನಪ್ರಿಯತೆ ಗಳಿಸಿರುವುದು ಸಂಗೀತದ ಮೂಲಕವೇ ಎಂಬುದನ್ನು ಗಮನಿಸಬಹುದು.

ಬಿ.ಆರ್.ಲಕ್ಷ್ಮಣರಾವ್ ಅವರು ಮಾಧ್ಯಮದ ಮೂಲಕ ಹೆಚ್ಚಿನ ಜನಪ್ರಿಯತೆ ಗಳಿಸಿಕೊಂಡಿದ್ದಾರೆ. ಓರಿತೆರೆಯಲ್ಲಿಯು ಅವರ 'ಬಾರೆ ರಾಜಕುಮಾರಿ,' ಎಂಬ ಗೀತೆ ಸಿನಿಮಾ ಗೀತೆಯೂ ಆಗಿದೆ. 'ಬಾ ಮಳೆಯ ಬಾ' ಎಂಬುದು 'ಆಕ್ಸಿಡೆಂಟ್' ಸಿನಿಮಾ ಗೀತೆಯಾಗಿದೆ. ದೂರದರ್ಶನದ ಧಾರಾವಾಹಿಗಳ ಮೂಲಕವೂ ಅವರ ಕವಿತೆಗಳು ಶೀರ್ಷಿಕೆ ಗೀತೆಗಳಾಗಿ ಪ್ರಚಾರ ಪಡೆದಿರುವುದರೊಂದಿಗೆ ಜನ ಮೆಚ್ಚುಗೆಯನ್ನು ಗಳಿಸಿದೆ.

ಬಿ.ಆರ್.ಲಕ್ಷ್ಮಣರಾವ್ ಅವರು ಮಕ್ಕಳಿಗಾಗಿ ಬರೆದ ನಾಲ್ಕು ಗೀತೆಗಳು 'ಕಲಿಯೋಣ ಬನ್ನಿ' ಕ್ಯಾಸೆಟ್ ನಲ್ಲಿ ಪ್ರಚಾರವಾಗಿ ಪ್ರಸಿದ್ಧವಾಗಿವೆ. ಆಡಿ ಹಾಡಿ ನಲಿದು ಭಾಷೆಯ ಬಗ್ಗೆ ಪರಿಕಲ್ಪನೆಗಳನ್ನು ಬೆಳೆಸಿಕೊಳ್ಳುವ ಆಶಯದೊಂದಿಗೆ ಹೊರಬಂದಿರುವ ಈ ಕ್ಯಾಸೆಟ್ ನಲ್ಲಿ ಬಂದಿರುವ ಗೀತೆಗಳುಎಂದರೆ 'ತರಕಾರಿ ಅಹತರಕಾರಿ' 'ಶಾಲೆ ಮೊದಲು ಮನೆಯಲ್ಲಿ' 'ಅಬ್ಬಬ್ಬ ಭಾರ ರುಬ್ಬು ಗುಂಡು' 'ಬಣ್ಣ-ಬಣ್ಣ-ಬಣ್ಣ' ಎಂಬ ಗೀತೆಗಳು ಮಕ್ಕಳಲ್ಲಿ ಭಾಷಾ ಬೆಳವಣಿಗೆಗೆಯನ್ನು ವೃದ್ಧಿಸುವ ಸಲುವಾಗಿ ಶೈಕ್ಷಣಿಕ ಪರಿಕರವಾಗಿ ಃಆಡಿನ ಮೂಲಕ ಮಕ್ಕಳು ಆಡುತ್ತಾ ಹಾಡುತ್ತಾ ನಲಿದು ವಿವಿಧ ಬಗೆಯ ಪರಿಕಲ್ಪನೆಗಳಲ್ಲಿ ಬೆಳೆಸುವ ವಿಷಯಗಳನ್ನು ಸರಳವಾಗಿ ಮಕ್ಕಳಿಗೆ ಪರಿಚಿತವಾದ ಭಾಷೆಯಲ್ಲೆ ಅವರಿಗೆ ಪರಿಚಿತವಾದ ಹಣ್ಣು, ತರಕಾರಿ, ವಸ್ತುಗಳ ಗುಣ ಉಪಯೋಗ, ಇವುಗಳನ್ನು ಆಕರ್ಷಕವಾದ ರೀತಿಯಲ್ಲಿ ತಿಳಿಸುವುದರ ಮೂಲಕ ಮಕ್ಕಳ ಮನೋವಿಕಾಸಕ್ಕೆ ಪೂರಕವಾದ ಗೀತೆಗಳಾಗಿವೆ ಎಂದು ಗುರುತಿಸಬಹುದು. ಮಕ್ಕಳಿಗೆ ಹಗುರವಾದ ಮತ್ತು ಭಾರವಾದ ವಸ್ತುಗಳನ್ನು ಪರಿಚಯಿಸುವ ಗೀತೆ

ಅಬ್ಬಬ್ಬ ಭಾರ ರುಬ್ಬು ಗುಂಡು
ಅಹಾಃ ಎಷ್ಟು ಹಗುರ ಚೆಂಡು
ಭಾರ ಭಾರಿ ಡಿಕ್ಸನರಿ
ಹಗುರ ಹಕ್ಕಿ ಗರಿ

ಭಾರ ಸ್ಕೂಲು ಬ್ಯಾಗು
ಅನ್ನಿಸಲ್ಲ ನಿಜವಾಗೂ
ಅಲ್ಲೆನಿದೆ ಗೊತ್ತೆ  ಭಾರ ಹಗುರ
ಇಡೀ ಜಗತ್ತೆ ಎಂದು ಮಕ್ಕಳಿಗೆ ಹಿತವಾಗುವ

ಸುಬ್ಬಾಭಟ್ಟರ ಮಗಳೆ ; ಪುಟ ; ೧೪೭

ಆಕರ್ಷಕ ಶೈಲಿಯಲ್ಲಿ ಬದುಕಿನ ಬಗ್ಗೆ ತಿಳಿಸುವ ಗೀತೆ ಗಮನಾರ್ಗವಾಗಿದೆ. ಮಕ್ಕಳಿಗೆ ವಿವಿಧ ಬಗೆಯ ಹಣ್ಣು ತರಕಾರಿಗಳ ಪರಿಚಯದೊಂದಿಗೆ ಅವುಗಳ ಗುಣ ಮತ್ತು ಶಕ್ತಿಯ ಬಗ್ಗೆ ಹೇಳುವ 'ಹಣ್ಣು ತರಕಾರಿ'

ಬೆಂಡೆಕಾಯಿ ಬೆಟ್ಟ
ಬದನೆ ಉಂಟು ತೊಟ್ಟು
ಪಡುವಲಕಾಯಿ ಹಾವು
ಕೋಸು ತಿನ್ನುವ ಹೂವು
ಹುರುಳಿಕಾಯಿ ಪಲ್ಯೆ
ಕುಂಬಳಕಾಯಿ ಪಳದ್ಯೆ
ಈರುಳ್ಳಿ ಹುಳಿಗೆ ಬೆಸ್ಟು
ಸೊಪ್ಪು ಮುದ್ದೆಗೆ ಮಸ್ಟು
ಹನ್ನು ಎಷ್ಟೊಂದು ಹಣ್ಣು
ಎಷ್ಟದ್ದರೂ ಬೇಕೆನ್ನೂ
ಹಣ್ಣಿನ ರಾಜ ಮಾವು
ಕೊಂಚ ದುಬಾರಿ ಸೇಬು
ಹಲಸು ಗಮಗಮ ಸೊಗಸು
ಸಪೋಟ ಡ್ರೈ ಜಾಮೂನು

ಸುಬ್ಬಾಭಟ್ಟರ ಮಗಳೇ ; ಪುಟ ; ೧೪೫.

ಎನ್ನುವ ಮೂಲಕ ಮಕ್ಕಳಿಗೆ ಹಣ್ಣು ತರಕಾರಿಯ ಬಗ್ಗೆ ವಿಭಿನ್ನ ಪರಿಕಲ್ಪನೆಗಳು ಬೆಳೆಯಲು ಸಹಕಾರಿಯಾಗುವುದನ್ನು ಗಮನಿಸಬಹುದು. ಅದೇ ರೀತಿಯಲ್ಲಿ ಮಕ್ಕಳಿಗೆ ವಿವಿಧ ಬಗೆಯ ಬಣ್ಣದ ಪರಿಚಯ ಮಾಡುವ ಮೂಲಕ ಒಂದು ಪಾಠ ಕಲಿಯಲು ಈ ಗೀತೆ ಪೂರಕವಾಗಿವೆ.

ಎಲೆ ಹಸಿರು ಗಿಳಿ ಹಸಿರು
ತಾಜಾ ತರಕಾರಿ ಹಸಿರು

ಗಿಡ ಹಸಿರು ಮರ ಹಸಿರು
ಹಸಿರು ಪ್ರಕೃತಿಯ ಹೆಸರು
ಮಾವಿನ ಚಿಗುರು ಕೆಂಪು
ಗುಲಾಬಿ ಹೂ ಕೆಂಪು
ಸೇಬಿನ ಹಣ್ಣು ಕೆಂಪು
ಸೇವಂತಿಗೆ ಹೂ ಹಳದಿ
ಎಲ್ಲ ಬಣ್ಣಗಳು ಕೂಡಿದರೆ
ಆಗ ಬಿಳಿಯ ಬಣ್ಣ;
ಶಾಂತಿಯ ಸಂಕೇತ ಬಿಳಿ ಬಣ್ಣ
ನಾವೆಲ್ಲ ಒಟ್ಟಾಗೋಣ

ಸುಬ್ಬಾಭಟ್ಟರ ಮಗಳೇ ; ಪು ; ೧೪೩-೧೪೪

ಎನ್ನುವ ಮೂಲಕ ಹಸಿರು ಕೆಂಪು ಹಳದಿ ನೀಲಿ ಬಣ್ಣದ ಪರಿಚಯದ ಮೂಲಕ ಶಾಂತಿಯಿಂದ ಒಟ್ಟಾಗೋಣ ಎಂಬಲ್ಲಿ ಬಣ್ಣಗಳ ಪರಿಕಲ್ಪನೆಯನ್ನು ಮಕ್ಕಳ ಮನಸ್ಸಿನ ಮೂಡಿಸುವ ಉತ್ತಮ ಪರಿಕಲ್ಪನೆಯ ಗೀತೆ ಇವಾಗಿದೆ. 'ಊಟ-ತಿಂಡಿ'ಎಂಬ ಗೀತೆಯು ಎಲ್ಲರ ಮನೆಯಲ್ಲಿ ಬಗೆಬಗೆಯ ತಿಂಡಿಗಳು ಯಾವಾವುದು ಇರುತಿತ್ತು ಎಂಬ ಪರಿಚಯದ ಮೂಲಕ ತಮ್ಮ ಮನೆಯಲ್ಲಿ ಏನಿರುತ್ತಿತ್ತು ಎಂಬುದನ್ನು ತಿಳಿಸುವ ಈ ಚಿತ್ರಣ ಗಮನಾರ್ಹವಾಗಿದೆ. ಈ ಎಲ್ಲಾ ಗೀತೆಗಳು ಮಕ್ಕಳ ಮನಸ್ಸಿಗೆ ಹತ್ತಿರವಾಗಿದ್ದು ನಲಿಯುತ್ತಾ ಭಾಷೆಯನ್ನು ಕಲಿಯುವ ಮೂಲಕ ವಿವಿಧ ಬಗೆಯ ವಸ್ತುಗಳ ಪರಿಚಯನ್ನು ಮೂಡಿಕೊಡುವ ಈ ಗೀತೆಗಳು ಮಕ್ಕಳನ್ನು ರಂಜಿಸುವ ಗೀತೆಗಳಾಗಿವೆ ಎಂದು ಗುರುತಿಸಬಹುದು.

ಸಾಹಿತ್ಯ ಎರಡು ಬಗೆಯಲ್ಲಿ ಜನಪ್ರಿಯವಾಗುವುದೆಂಬುದನ್ನು ಹಿಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ. ಓದುಗಭ್ಯವಾಗಿ ಒಂದು ವರ್ಗಕ್ಕೆ ಮಾತ್ರ ಸೀಮಿತವಾಗುವ ಸಾಹಿತ್ಯ ಹಾಡುಗಬ್ಬವಾದಾಗ ಅದು ಎಲ್ಲಾ ವರ್ಗದ ಜನರನ್ನು ತಲುಪಲು ಸಾಧ್ಯವಾಗುವ ಮಾಧ್ಯಮ ಎಂದರೆ ಸಂಗೀತ ಮಾಧ್ಯಮ ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ. ವಿವಿಧ ಮಾಧ್ಯಮಗಳಾದ ರೇಡಿಯೋ ದೂರದರ್ಶನ, ಪತ್ರಿಕಾ ಮಾಧ್ಯಮ, ಸಿನಿಮಾ, ಮುಂತಾದವುಗಳ ಮೂಲಕ ಸಾಹಿತ್ಯ ಜನರ ಬಳಿಗೆ ತಲುಪುದನ್ನು ಗುರುತಿಸಬಹುದು. ಆಧುನಿಕ ಜಗತ್ತಿನಲ್ಲಿ ಒತ್ತಡಗಳಿಂದ ಕೂಡಿದ, ಸದಾ ಯಾವುದಾದರೊಂದು ಕೆಲಸದಲ್ಲಿ ತೊಡಗಿಸಿಕೊಂಡಿರುವ ಮನಸ್ಸುಗಳಿಗೆ ರಂಜನೆಯು ಅವಶ್ಯಕವಾಗಿದೆ. ಸಮಯದ ಅಭಾವವಿರುವ ಈ ಬಗೆಯ ಶೋತೃಗಳಿಗೆ ಸಾಹಿತ್ಯವನ್ನು ತಲುಪಿಸಲು, ಮನಸ್ಸಿಗೆ ರಂಜನೆಯ ಮಾರ್ಗವಾಗಿರುವ ಸಂಗೀತ ಮಾಧ್ಯಮ ಉಪಯುಕ್ತವಾದ

ಸಾಧನ ಎಂದು ಹೇಳಬಹುದು. ಸಾಹಿತ್ಯದ ಉದ್ದೇಶ ರಸಾನಂದ ಉಂಟು ಮಾಡುವುದೇ ಆಗಿರುತ್ತದೆ. ಎಂದಾಗ ಕವಿಯ ಕವಿತೆಗಳಿಗೆ ರಾಗ ಸಂಯೋಜಿಸಿ, ಸಂಗೀತದ ಮೂಲಕ ಕೇಳುಗರನ್ನು ತಲುಪಿಸುವುದು ಸಾಧ್ಯವಾಗುತ್ತದೆ. ಹಾಗಾಗಿಯೇ ಜಿ.ಆರ್.ಲಕ್ಷ್ಮಣರಾವ್ ಅವರ ಕವಿತೆಗಳು ಸುಗಮ ಸಂಗೀತ ಕ್ಷೇತ್ರದ ಮೂಲಕ ಅಪಾರ ಸಂಖ್ಯೆಯ ಕೇಳುಗರನ್ನು ಪಡೆದುಕೊಂಡಿದೆ. ಅವರೇ ಹೇಳಿಕೊಳ್ಳುವಂತೆ ಒಟ್ಟಾರೆ ಸಾಹಿತ್ಯ ಜನರನ್ನು ತಲುಪುವುದು ಮುಖ್ಯ. ಅದು ಯಾವ ರೀತಿಯಲ್ಲಾದರೂ ಸರಿಯೇ ಎಂಬುದು ಅವರ ಅಭಿಮತ. ಅದಕ್ಕಾಗಿಯೇ ತಾವು ತಮ್ಮ ಗೀತೆಗಳಿಗೆ ರಾಗ ಸಂಯೋಜನೆ ಮಾಡಿಸಿ ಹಾಡುವ ಮೂಲಕ ಹೆಚ್ಚಿನ ಜನರನ್ನು ತಲುಪುವುದಕ್ಕಾಗಿ ಈ ಮಾಧ್ಯಮವನ್ನು ಸಂಪೂರ್ಣವಾಗಿ ಬಳಕೆ ಮಾಡಿಕೊಂಡಿದ್ದೇವೆ. ಅದರಿಂದ ನನ್ನ ಉದ್ದೇಶ, ನನ್ನ ಸಾಹಿತ್ಯ ಜನರ ಬಳಿಗೆ ತಲುಪಬೇಕೆಂಬುದು ಅದು ಈಡೇರಿದೆ ಎನ್ನುವ ತೃಪ್ತಿ ನನಗಿದೆ. ಎಂಬ ಅವರ ಮಾತನ್ನು ಒಪ್ಪಬಹುದಾಗಿದೆ. ಒಟ್ಟಿನಲ್ಲಿ ಸಾಹಿತ್ಯ ಜನರಿಗಾಗಿ ಎಂಬ ಮಾತಿನಂತೆ ಯಾವ ಬಗೆಯಾಲ್ಲಾದರೂ ಅದು ಅವರ ಬಳಿಗೆ ತಲುಪುವುದು ಮುಖ್ಯ ಎಂಬುದಷ್ಟೆ ಮುಖ್ಯವಾಗುತ್ತದೆ. ಈ ಮಾತನ್ನು ಕೇವಲ ಜನಪ್ರಿಯ ಸಾಹಿತ್ಯ ಅಥವಾ ಜನಪ್ರಿಯ ಕವಿಗಳಿಗೆ ಮಾತ್ರ ಅನ್ವಹಿಸಿಕೊಳ್ಳದೆ ಗಂಭೀರ ಕವಿಗಳಿಗೂ ಈ ಮಾತು ಅನ್ವಯವಾಗುತ್ತದೆಂದು ಹೇಳಬಹುದು. ಕವಿಯ ಭಾವನೆಗಳು ಜನರ ಭಾವನೆಗಳಿಗೆ ಹತ್ತಿರವಾಗಿದ್ದಾಗ, ಸುಲಭವಾದ ಭಾಷೆ, ಗೇಯತೆಯಿಂದ ಕೂಡಿದ್ದರೆ ಅದು ಹೆಚ್ಚಿನ ಸಂಖ್ಯೆಯ ಜನರು ಮೆಚ್ಚುವ ಅಂಶವಾಗುತ್ತವೆ. ಹಾಗಾಗಿ ಈ ರೀತಿಯಲ್ಲಿ ಜಿ.ಆರ್.ಲಕ್ಷ್ಮಣರಾವ ಅವರ ಸಾಹಿತ್ಯ ಹೆಚ್ಚಿನ ಸಂಖ್ಯೆಯ ಓದುಗರನ್ನು ಮತ್ತು ಕೇಳುಗರನ್ನು ಪಡೆದುಕೊಂಡಿದೆ. ಲಕ್ಷ್ಮಣರಾವ್ ಅವರ ನೆಲೆಯಲ್ಲಿ ಅದು ಪರಿಪೂರ್ಣವಾಗಿ ಸಾಧ್ಯವಾಗಿದೆ ಎಂದೇ ಹೇಳಬಹುದು. ಜನಪ್ರಿಯತೆಗೆ ಸಂಗೀತವು ಪೂರಕವಾದ ಮಾಧ್ಯಮವಾಗಿದೆ ಎಂದು ಒಪ್ಪಿಕೊಳ್ಳಬಹುದು. ಇದಕ್ಕೆ ಸಮರ್ಥನೆ ನೀಡುವಂತೆ ೧೯೮೬ರ 'ಕೈವಾರ ಸಾಹಿತ್ಯ ಸಮ್ಮೇಳನದಲ್ಲಿ' 'ಜನಪ್ರಿಯ ಸಾಹಿತ್ಯ ಮತ್ತು ಅಭಿರುಚಿ; ಎಂಬ ಗೋಷ್ಠಿಯ ಉದ್ಘಾಟನಾ ಭಾಷಣದಲ್ಲಿ ಹಂಪ ನಾಗರಾಜಯ್ಯ ನವರು 'ಇಲ್ಲಿ ಸಮೂಹ ಮಾಧ್ಯಮಗಳನ್ನು ಲಕ್ಷ್ಯದಲ್ಲಿರಿಸಿ ಜನಪ್ರಿಯ ಸಾಹಿತ್ಯ ಎಂಬ ಶೀರ್ಷಿಕೆಯನ್ನು ನೀಡಲಾಗಿದ್ದು ರೇಡಿಯೋ ವೀಡಿಯೋ ಪತ್ರಿಕೆ, ದೂರದರ್ಶನ ಚಲನಚಿತ್ರ, ನಾಟಕ ಕ್ಯಾಸೆಟ್ಟುಗಳು ಇದರ ಪರಿಧಿಯಲ್ಲಿ ಬರುತ್ತವೆ, ಎನ್ನುತ್ತಾ ಕ್ಯಾಸೆಟ್ ಗಳ ಜನಪ್ರಿಯತೆಯನ್ನು ಗಮನಿಸುತ್ತಾರೆ. ಇದಕ್ಕೆ ಪೂರಕವಾಗಿ 'ಸುಗಮ ಸಂಗೀತ ಕೂಡ ಬಹುಬೇಗ ಜನಪ್ರಿಯತೆ ಗಳಿಸಿದೆ. ಕವನಗಳನ್ನು ಓದಬೇಕು, ರಂಜಿಸಬೇಕೆ ಹೊರತು ಹಾಡಕೂಡದು ಎಂದು ವಾದ ಮಾಡುತ್ತಿದ್ದವರು ಕೂಡ ಜನರ ಆಸೆ ಅಭಿರುಚಿಯ ಹೊನಲಲ್ಲಿ ಸೇರಿಕೊಂಡು ಆಕಾಶವಾಣಿ ನವಸುಮ ವಿಭಾಗಕ್ಕೆ ಹಾಡಲು ಕವಿತೆ ಬರೆದುಕೊಟ್ಟು ಸಂಭಾವನೆಯನ್ನು ಸ್ವೀಕರಿಸಿ ಒಳಗೊಳಗೇ ಸುಖಿಸಿದ ಕವಿಗಳಿದ್ದಾರೆ, ಸುಗಮ ಸಂಗೀತಗಾರರಿಗೆ ಸುಲಭವಾಗಿ ಬೇಗ ಸಿಗಲೆಂದು ದಿಡೀರ್ ಹಾಡುಗಳನ್ನು ಸಂಕಲನಗಳನ್ನು

ಪ್ರಕಟಿಸಿದವರಿದ್ದಾರೆ. ಇವೆಲ್ಲ ಜನರ ಅಭಿರುಚಿಯ ಜಾಡನ್ನು ಹಿಡಿದು ಪ್ರತಿಭೆಗಳು ಹೇಗೆ ಹೆಜ್ಜೆ ಹಾಕುತ್ತವೆಂಬುದಕ್ಕೆ ಸಾಕ್ಷಿಯಾಗಿದೆ . . . ." (ನಾಗರಾಜಯ್ಯ ಹಂಪ (ಸಂ); ೧೯೮೪;ಪು;೬೨) ಎಂಬ ಮಾತುಗಳು ಸಾಹಿತ್ಯ ಸಂಗೀತ ಸಮೂಹ ಮಾಧ್ಯಮಗಳ ನಡುವಿನ ಸಂಬಂಧವನ್ನು ತಿಳಿಸುವುದರ ಜೊತೆಗೆ ಆಧುನಿಕ ಕಾಲಕ್ಕೆ ಕಾವ್ಯದ ಜನಪ್ರಿಯತೆಗೆ ವಿವಿಧ ಮಾಧ್ಯಮಗಳು ಕಾರಣವಾಗಿವೆ ಎಂಬುದನ್ನು ತಿಳಿಸುತ್ತದೆ, ಸುಗಮ ಸಂಗೀತ ಕ್ಷೇತ್ರವು ಆಧುನಿಕ ಕನ್ನಡ ಕಾವ್ಯಕ್ಕೆ ವಿಶಿಷ್ಟವಾಗಿದ್ದು ಕಾವ್ಯ ಸಂವಹನಕ್ಕೆ ಸಹಕಾರಿಯಾಗಿದೆ ಎನ್ನಬಹುದು. ಲಕ್ಷ್ಮಣರಾವ್ ಅವರ ಭಾವಗೀತೆಗಳು ಬಹಳಷ್ಟು ಓದುಗರನ್ನು ಕೇಳುಗರನ್ನು ಗಳಿಸಿಕೊಳ್ಳಲು ಸುಗಮ ಸಂಗೀತ ಉತ್ತಮ ಮಾಧ್ಯಮವಾಗಿದೆ ಎಂಬುದು ಸ್ಪಷ್ಟವಾಗುತ್ತವೆ. ಹಾಗೆಯೇ ಸ್ವತಃ ಹಾಡುಗಾರರಾಗಿರುವ ಬಿ.ಆರ್.ಲಕ್ಷ್ಮಣರಾವ್ ಅವರು ಸಂಗೀತದ ಅರಿವಿನ ಮೂಲಕವೂ ಅವರ ಕಾವ್ಯ ಅನಾಯಾಸವಾಗಿ ಲಯ ಮತ್ತು ಗೇಯತೆಗೆ ಒಗ್ಗುವ ರೀತಿ ಸಾಹಿತ್ಯವನ್ನು ಹೊಂದಿಸಿ ಬರೆಯುವುದು ಅವರಿಗೆ ಸುಲಭವಾಗಿ ಒಗ್ಗಿ ಹೋಗಿತ್ತು. ಅದು ಕೂಡ ಇಲ್ಲಿ ಗಮನಾರ್ಹವಾದ ಅಂಶವೆಂದು ಹೇಳಬಹುದು.

ಬಿ.ಆರ್. ಲಕ್ಷ್ಮಣರಾವ್ ಅವರು ಕಾವ್ಯ ಕ್ಷೇತ್ರದಲ್ಲಿ ನಡೆಸಿರುವಷ್ಟು ಕೃಷಿ ಕಥನ ಕ್ಷೇತ್ರದಲ್ಲಿ ಆಗಿಲ್ಲವೆಂದು ಹೇಳಬಹುದು. ಒಟ್ಟು ಹತ್ತೊಂಭತ್ತು ಕಥೆಗಳು, ಒಂದು ಕಾದಂಬರಿಯನ್ನು ಬರೆದಿದ್ದಾರೆ.

ಆಧುನಿಕ ಸಾಹಿತ್ಯದ ಪ್ರಕಾರಗಳಲ್ಲಿ ಜನಪ್ರಿಯ ಪ್ರಕಾರವೆಂದರೆ ಕಥನ ಸಾಹಿತ್ಯ. ಅದು ಕಾದಂಬರಿ ಪ್ರಕಾರಕ್ಕೆ ಅನ್ವಯಿಸುವುದಾದರೂ ಇಂದು ಕಥನ ಸಾಹಿತ್ಯವು ಹೆಚ್ಚು ಜನಪ್ರಿಯತೆ ಗಳಿಸುತ್ತಿದೆ. ಮಾಧ್ಯಮಗಳ ಮೂಲಕ ಕಥನ ಸಾಹಿತ್ಯ ಬೆಳೆಯುತ್ತಾ ಪ್ರಚಾರಗೊಳ್ಳುತ್ತಿದೆ. ಬಿ.ಆರ್.ಲಕ್ಷ್ಮಣರಾವ್ ಅವರ ಕಥನ ಸಾಹಿತ್ಯದ ಮತ್ತು ಜನಪ್ರಿಯತೆಯ ಬಗ್ಗೆ ಅವಲೋಕಿಸಿದಾಗ ಅವರ ಕಥೆಗಳು ಪತ್ರಿಕೆಗಳ ಮೂಲಕವೂ ಜನಪ್ರಿಯತೆ ಗಳಿಸಿವೆ. ಅವರ ಮೊದಲ ಕಥೆ 'ಚಂದನದ ಗೊಂಬೆ' ಸುಧಾ ವಾರ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಅವರ ಕಥೆಗಳು ಜನಪ್ರಿಯತೆ ಗಳಿಸಲು ಪ್ರಮುಖವಾದ ಕಾರಣವೆಂದರೆ, ಪ್ರತಿ ಕಥೆಯು ನೈಜತೆಯಿಂದ ಕೂಡಿರುವುದು ಅಲ್ಲದೇ ಅವು ನಮ್ಮ ಸುತ್ತ ಮುತ್ತವೇ ನಡೆಯುತ್ತಿವೆ ಎನ್ನುವ ರೀತಿಯಲ್ಲಿ ರಚಿತವಾಗಿರುವುದು ಜನಪ್ರಿಯತೆ ಗಳಿಸಲು ಸಾಧ್ಯವಾಗಿದೆ ಎಂದು ಹೇಳಬಹುದು. ಕಥೆ ಹೇಳುವ ಶೈಲಿ ಆಕರ್ಷಕವಾಗಿದ್ದು ನಿತ್ಯ ಬದುಕಿನ, ಬೆಂಗಳೂರು ಭಾಷೆಯಲ್ಲೇ ನಿರೂಪಿಸುವ ಸರಳವಾದ ಶೈಲಿಯೇ ಓದುಗರಿಗೆ ಕಥೆಯ ವಸ್ತು ಆಪ್ತವಾಗುವಂತೆ ಮಾಡುತ್ತದೆ ಎನ್ನಬಹುದು. ಪ್ರೀತಿ ಪ್ರೇಮ, ಮತ್ತು ಸಾಮಾಜಿಕ ವಸ್ತು ವಿಷಯಗಳನ್ನು ಕುರಿತ ತಮ್ಮದೇ ಆದ ವಿಶಿಷ್ಟವಾದ ನಿರೂಪಣಾ ಶೈಲಿಯಿಂದಾಗಿ ಓದುಗರನ್ನು ತಮ್ಮತ್ತ ಸೆಳೆಯುತ್ತವೆ. ಇವರ ಕಥೆಗಳಲ್ಲಿ ಬರುವ ಪಾತ್ರಗಳು ಕೂಡ ಓದುಗರ ಕಣ್ಣ ಮುಂದಿನ ಪಾತ್ರಗಳೇ ಆಗಿರುವ ಮೂಲಕ ಅವು ಆತ್ಮೀಯವಾಗಿ ಬಿಡುತ್ತವೆ. ಬದುಕಿಗೆ ಅಪ್ತವಾದ ಪ್ರೀತಿಯ ಬಗೆಗಿನ ಅವರ ಕಾಳಜಿ, ಸಂಪ್ರದಾಯದ ಬಗೆಗಿನ ಅವರ ನಿಲುವುಗಳು, ಪ್ರೇಮದ ಬಗೆಗಿನ ಅವರ ಭಾವನೆಗಳು, ಕಥೆಗಳಲ್ಲಿ ವ್ಯಕ್ತವಾಗುವ ಬಗೆ. ಇವುಗಳು ಓದುಗರ ಮೆಚ್ಚುಗೆ ಗಳಿಸುತ್ತವೆ.

ಅವರ ಕಥೆ ಕಾದಂಬರಿಗಳನ್ನು ಕುರಿತ ವಿಶ್ಲೇಷಣೆಯ ಮೂಲಕ ಅವರ ಕಥನ ಸಾಹಿತ್ಯದ ಜನಪ್ರಿಯತೆಯನ್ನು ಸ್ಪಷ್ಟಪಡಿಸಿಕೊಳ್ಳುವ ಪ್ರಯತ್ನ ಮುಂದಿನ ಭಾಗದಲ್ಲಿ ಕಂಡು ಬರುತ್ತವೆ. ಅಂದರೆ ಅವರ ಕಥೆಯ ವಸ್ತು, ವಿಷಯ, ಪಾತ್ರ, ಸಂಭಾಷಣೆ, ಸನ್ನಿವೇಶ ನಿರ್ಮಾಣ, ಘಟನೆಗಳ ವಿವರಗಳು ಇವುಗಳ ವಿಶ್ಲೇಷಣೆಯ ಮೂಲಕ ಅವರ ಕಥನ ಸಾಹಿತ್ಯದ ಜನಪ್ರಿಯತೆಯನ್ನು ಗುರುತಿಸಿಕೊಳ್ಳಲಾಗುವುದು. ಅವರ ಕಥೆಗಳು ಹೇಗೆ ಜನಪ್ರಿಯತೆ ಗಳಿಸಿವೆ. ಅವುಗಳಲ್ಲಿ ವ್ಯಕ್ತವಾಗಿರುವ

ಜನಪ್ರಿಯತೆ ಅಂಶಗಳಾವುವು ಎಂಬುದನ್ನು ಗುರುತಿಸುವ ಮೂಲಕ ಕಥನ ಸಾಹಿತ್ಯದ ಜನಪ್ರಿಯತೆಯನ್ನು ವಿವೇಚಿಸಲಾಗಿದೆ.

**೫.೧ ಜನಪ್ರಿತಯ ಸಾಹಿತ್ಯ ಪರಿಕಲ್ಪನೆ ಮತ್ತು ಬಿ.ಆರ್. ಲಕ್ಷ್ಮಣರಾವ್‌ರವರ ಕಥನಸಾಹಿತ್ಯ :**

ಈಗಾಗಲೇ ಚರ್ಚಿತವಾಗಿರುವ ಜನಪ್ರಿಯ ಸಾಹಿತ್ಯ ಪರಿಕಲ್ಪನೆಯ ಬಗೆಗಿನ ವಿವಿಧ ಲೇಖಕರ ವಿಮರ್ಶಕರ ಅಭಿಪ್ರಾಯಗಳಲ್ಲಿನ ಒಟ್ಟು ನೋಟದಲ್ಲಿ ರೂಪುಗೊಂಡಿರುವ ಜನಪ್ರಿಯ ಸಾಹಿತ್ಯ ಪರಿಕಲ್ಪನೆಯ ಹಿನ್ನಲೆಯೊಂದಿಗೆ ಬಿ.ಆರ್.ಲಕ್ಷ್ಮಣರಾವ್ ಅವರ ಕಥೆ, ಕಾದಂಬರಿಯಲ್ಲಿನ ವಿಶ್ಲೇಷಣೆ ಸಾಗಿದೆ.

ವಿಮರ್ಶೆಯು ಪರಿಭಾವಿಸಿರುವಂತೆ 'ಜನಪ್ರಿಯ ಸಾಹಿತ್ಯ' ವೆಂದರೆ ಹೆಚ್ಚಿನ ಓದುಗವರ್ಗವನ್ನು ಗಳಿಸಿರುವ ಗಂಭೀರ ಓದಿಗೆ ನಿಲುಕದ ಕಳಪೆ ಗುಣಮಟ್ಟದ ದ್ವಿತೀಯ ದರ್ಜೆಯ ಸಾಹಿತ್ಯವಾಗಿದೆ. ಆದರೆ ಲಕ್ಷ್ಮಣರಾವ್ ಅವರ ಕಥನ ಸಾಹಿತ್ಯವನ್ನು ಆ ನೆಲೆಯಲ್ಲಿ ಪರಿಗಣಿಸದೆ ಜನಪ್ರಿಯತೆಯು ಸಾಹಿತ್ಯದ ನೇತ್ಯಾತ್ಮಕ ಅಂಶವೆಂದು ಪರಿಗಣಿಸದೆ ಇತ್ಯಾತ್ಮಕ ದೃಷ್ಟಿಯಲ್ಲಿ ಪರಿಭಾವಿಸುವ ಮೂಲಕ ಅವರ ಕಥೆ, ಕಾದಂಬರಿಯಲ್ಲಿ ವ್ಯಕ್ತವಾಗುವ ಧೋರಣೆಗಳೇನು, ವಸ್ತು ವಿಷಯಗಳೇನು ಒಟ್ಟಾರೆ ಅವರ ಕಥೆಗಳ ಹಿಂದಿರುವ ನಿಲುವುಗಳೇನು ಎಂಬುದರ ಮೂಲಕ ಅವರ ಬರಹದಲ್ಲಿ ಪ್ರತಿಪಾದಿತವಾಗಿರುವ ಅಂಶಗಳಾವುವು ಎಂಬುದನ್ನು ವಿಶ್ಲೇಷಿಸಲಾಗಿದೆ. ಪಂಥ ಪರಿಕಲ್ಪನೆಯಿಂದ ಹೊರತಾಗಿರುವ ಲಕ್ಷ್ಮಣ್‌ರಾವ್ ಅವರ ಬರಹ ಹೇಗೆ ಜನಪ್ರಿಯತೆ ಗಳಿಸಿಕೊಂಡಿದೆ ಎಂಬುದನ್ನು ಕುರಿತಂತೆ ಇಲ್ಲಿ ಚರ್ಚೆ ಮಾಡಲಾಗಿದೆ.

ಜನಪ್ರಿಯ ಸಾಹಿತ್ಯ ಜನ ಸಾಮಾನ್ಯ ಓದುಗರು ಅವರವರ ಅಭಿರುಚಿಗೆ ತಕ್ಕಂತೆ ಅವರ ಜೀವನದ ಕನಸುಗಳನ್ನು, ಜೀವನ ಮೌಲ್ಯಗಳನ್ನು, ಬದುಕಿನ ಆದರ್ಶಗಳನ್ನು, ಸಂಭ್ರಮಗಳನ್ನು ಸರಳವಾಗಿ ಪ್ರತಿಫಲಿಸುವ, ಪ್ರತಿಪಾದಿಸುವ ಸಾಹಿತ್ಯ ಅದು ಸಾಮಾನ್ಯ ಓದುಗನೊಂದಿಗೆ ಸರಳ ನಿರೂಪಣೆ ಹಾಗೂ ಸಂವಾದದ ಮೂಲಕ ಓದುಗನನ್ನು ನೇರವಾಗಿ ತಲುಪುವ ಪ್ರಯತ್ನ ಎಂದು ಬಿ. ಭಾಸ್ಕರರಾವ್ ಅಭಿಪ್ರಾಯ ಪಡುತ್ತಾರೆ. (ವಿವಿಧ ಲೇಖಕರು : ೧೯೯೪ : ಪು-೨೨).

ಎನ್.ಎಸ್. ಚಿದಂಬರರಾವ್‌ರವರು ಜನಪ್ರಿಯ ಸಾಹಿತ್ಯವನ್ನು ಕುರಿತು ಹೀಗೆ ಹೇಳುತ್ತಾರೆ. "ಇಲ್ಲಿ ಬದುಕಿನ ಶೋಧನೆ ಇರುವುದಿಲ್ಲ. ಬದುಕಿನ ಮೇಲ್ಪದರದಲ್ಲಿಯೇ ಕಲೆ ಸೃಷ್ಟಿಯಾಗುವುದರಿಂದ ಇಲ್ಲಿ ಪದೇ ಪದೇ ಅಭ್ಯಾಸ ಮಾಡುವ ಅವಶ್ಯಕತೆಯಿಲ್ಲ. ಒಮ್ಮೆ ಓದಿ ಮರೆತು ಬಿಡಬಹುದಾದ ಕೃತಿಗಳಿವು. ಇಂಥ ಕೃತಿಗಳನ್ನು ತುಂಬಾ ಜನ ಓದುತ್ತಾರೆ. ಇದಕ್ಕೆ ಸ್ಪಷ್ಟ ಕಾರಣಗಳು ಇವೆ. ನಮ್ಮ ಜೀವನದ ಜಂಜಾಟದಲ್ಲಿ ಏನನ್ನಾದರೂ ಓದುವ ಹಂಬಲ ಹುಟ್ಟುವುದೇ ಅಪರೂಪ. ಓದಿದರೂ ಸಹ ಒಂದು ಪೆಡಸಾಗಿರಬಾರದು. ಬೇಗ ಅರ್ಥವಾಗುವಂತಿರಬೇಕೆಂದು ಬಯಸುತ್ತಾರೆ. ಬಹುಜನಗಳು

ಬಯಸುವ ತರ್ಕಬದ್ಧವಾದ ಸಾಹಿತ್ಯವನ್ನು ಜನಪ್ರಿಯ ಸಾಹಿತ್ಯವೆನ್ನಬಹುದು ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಸಿ.ಎನ್. ರಾಮಚಂದ್ರನ್‌ರವರ ಪ್ರಕಾರ ಜನಪ್ರಿಯ ಸಾಹಿತ್ಯದ ಜನಪ್ರಿಯತೆಯ ಕಾರಣಗಳೆಂದು ಹೇಳುವ ಅಂಶಗಳೆಂದರೆ 'ಜನಪ್ರಿಯ ಸಾಹಿತ್ಯ ಓದುಗರ ನಿರೀಕ್ಷೆಗಳನ್ನು ಪೂರೈಸುತ್ತದೆ. ಯೋಚಿಸಿ, ವಿಚಾರಿಸಿ ಅರ್ಥೈಸಲು ಕೃತಿಯಲ್ಲಿ ಗ್ಯಾಪ್ ಬ್ಲಾಂಕ್‌ಗಳಿಲ್ಲದಿರುವುದರಿಂದ ಸಾಮಾನ್ಯ ಓದುಗನಿಗೆ ಹೆಚ್ಚು ಪ್ರಿಯವಾಗುತ್ತದೆ. ಅದು ಓದುಗನ ನಂಬಿಕೆಗಳು ವಿಚಾರಗಳು ಅನುಭವಗಳನ್ನು, ಯಾವುದೇ ವಿಧವಾದ ಧಕ್ಕೆ ಉಂಟು ಮಾಡದೆ ಸಮರ್ಥಿಸುತ್ತದೆ. ಪ್ರತಿಯೊಬ್ಬನಿಗೂ ತನ್ನ ನಿಜ ಜೀವನದಲ್ಲಿರುವ ಅಥವ ಸಾಧ್ಯವಾಗದ ರೋಚಕತೆಯನ್ನು, ಅದ್ಭುತ ಸಾಹಸ, ಪ್ರಣಯ ಕಥೆಗಳ ಮೂಲಕ ಕಾಲ್ಪನಿಕವಾಗಿ ಅನುಭವಿಸುವ ಆಸಕ್ತಿಯನ್ನು ಜನಪ್ರಿಯ ಸಾಹಿತ್ಯ ತಣಿಸುತ್ತದೆ, ಮತ್ತು ಘಟನೆಗಳನ್ನು ರೋಚಕವಾಗಿ ಹೆಣೆಯಲಾಗಿರುತ್ತದೆ. ಇದರಲ್ಲಿ ಮುಂದೇನು ಎಂಬ ಕುತೂಹಲಕ್ಕೆ ಆಸ್ಪದವಿರುವುದಿಲ್ಲ. (ರಾಮಚಂದ್ರನ್ ಸಿ.ಎನ್; ೧೯೯೫ ; ಪು-೨೩) ಎನ್ನುತ್ತಾರೆ.

ಅತಿಭಾವುಕತೆ, ಸೂಕ್ಷ್ಮ ಭಾವದ ಕೊರತೆ, ಸ್ಥೂಲ ಒರಟು ಭಾವಗಳು, ಉದ್ವೇಗದ ಭಾಷೆಯಲ್ಲಿ ಮೆರೆಯುತ್ತವೆ. ಇದು ಕಾದಂಬರಿ ಪ್ರಕಾರದಲ್ಲಿ ಕಂಡು ಬರುತ್ತದೆಂದು ಎಲ್.ಎಸ್. ಶೇಷಗಿರಿರಾಯರ ಅಭಿಪ್ರಾಯವಿದೆ.

ರಾಜೇಂದ್ರ ಚೆನ್ನಿಯವರು ಅಭಿಪ್ರಾಯ ಪಡುವಂತೆ ಜನಪ್ರಿಯ ಕಾದಂಬರಿಯ ಭಾಷೆ, ಪಾತ್ರಗಳು, ಧೋರಣೆಗಳು ಇವೆಲ್ಲವುಗಳ ಪಡಿಯಚ್ಚುಗಳೇ, ಕಾದಂಬರಿಗಳು ನಮಗೆ ಗೊತ್ತಿರುವುದನ್ನು ಗೊತ್ತಿರುವ ರೀತಿಯಲ್ಲಿ ಹೇಳುತ್ತವೆ. ಆದ್ದರಿಂದಲೇ ಅವುಗಳನ್ನು ಸುಲಭವಾಗಿ ಎಲ್ಲೆಂದರಲ್ಲಿ ಓದಬಹುದು ಎನ್ನುತ್ತಾರೆ.

ಜನಪ್ರಿಯತೆಯನ್ನು ಕಾದಂಬರಿ ಪ್ರಕಾರಕ್ಕೆ ಅನ್ವಯಿಸಿ ಚರ್ಚಿಸುವ ಸಂದರ್ಭದಲ್ಲಿ ಕೆಲವು ಅಂಶಗಳು ಪ್ರಸ್ತಾಪವಾಗುತ್ತವೆ. ಅವುಗಳೆಂದರೆ ಜನಪ್ರಿಯ ಸಾಹಿತ್ಯದಲ್ಲಿ ವ್ಯಕ್ತವಾಗುವ ಅಂಶಗಳೆಂದರೆ ನಿತ್ಯ ಜೀವನದ ಸಂಗತಿಗಳು ಭಾವನೆಗಳ ಅತಿರೇಕತೆ, ಸಮೃದ್ಧ ಘಟನಾವಿವರಗಳು, ಸಾಮಾನ್ಯ ದರ್ಜೆಯ ನೀರಸವೆನಿಸುವ ಚರ್ವಿತ ಚರ್ವಣ ವಿಷಯಗಳು, ಸರಳವಾದ ಶೈಲಿ, ಶಿಥಿಲವಾದ ಬಂಧಗಳಿಂದ ಕೂಡಿರುವ ಸತ್ವಯುತವಾಗಿಲ್ಲದ ಜಾಳಾದ ಬರವಣಿಗೆ, ಸಿದ್ಧ ವಸ್ತು ಪಾತ್ರ, ಸನ್ನಿವೇಶಗಳು, ಅತಿಯಾದ ಸರಳತೆ, ಭಾವುಕತೆ, ರೋಚಕತೆ, ಅನಿರೀಕ್ಷಿತ ಘಟನೆಗಳ ಸಮೃದ್ಧ ವಿವರಗಳು, ಪ್ರೀತಿ-ಪ್ರಣಯ, ಪ್ರೇಮಕ್ಕೆ ಸಂಬಂಧಿಸಿದ ವಸ್ತುಗಳ ವಿಫುಲ ವರ್ಣನೆಗಳು, ಓದುಗರನ್ನು ರಂಜಿಸುವ ಮತ್ತು ವಿನೋದದ ಉದ್ದೇಶದಿಂದಲೇ ಬರೆದ ಬರಹಗಳು, ಸಂಕೀರ್ಣ ಸಮಸ್ಯೆಗಳ ಆಳಕ್ಕಿಳಿಯದೆ ಸಾಮಾನ್ಯ ವಿಷಯಗಳ ನಿರೂಪಣೆ, ಇವುಗಳಿಂದಾದ ಜನಪ್ರಿಯ ಸಾಹಿತ್ಯವನ್ನು ವಿಮರ್ಶೆಯು ಸಾಹಿತ್ಯದ ನೇತ್ಯಾತ್ಮಕ ಅಂಶವಾಗಿ ಪರಿಭಾವಿಸಿಕೊಂಡು ಅದು ಗಂಭೀರ ಓದಿಗೆ ನಿಲುಕದ, ಕಳಪೆ ಗುಣಮಟ್ಟದ ದ್ವಿತೀಯ

ದರ್ಜೆಯ ಸಾಹಿತ್ಯವೆಂದು ನಿರ್ವಚಿಸಿಕೊಂಡು ಚರ್ಚಿಸುತ್ತವೆ. ಆದರೆ ಅದೇ ಅಂಶಗಳು ಹೇಗೆ ಜನಪ್ರಿಯ ಸಾಹಿತ್ಯದಲ್ಲಿ ಗುಣಾತ್ಮಕವಾಗಿ ಕಂಡು ಬರುತ್ತವೆ ಎಂಬುದರ ಜೊತೆಗೆ ಜನಪ್ರಿಯತೆ ಎಂಬುದು ಕೇವಲ ಜನಪ್ರಿಯ ಸಾಹಿತ್ಯಕ್ಕೆ ಮಾತ್ರ ಅನ್ವಯಿಸುವುದಿಲ್ಲ. ಗಂಭೀರ ಸಾಹಿತ್ಯವು ಒಳಗೊಂಡಿರುತ್ತವೆ ಎಂಬುದು ಒಪ್ಪತಕ್ಕ ಮಾತಾಗುತ್ತದೆ.

ಈ ರೀತಿಯ ಅಭಿಪ್ರಾಯಗಳಲ್ಲಿ ವ್ಯಕ್ತವಾಗಿರುವ ಜನಪ್ರಿಯ ಸಾಹಿತ್ಯದ ಪರಿಕಲ್ಪನೆಯೊಂದಿಗೆ ಬಿ.ಆರ್. ಲಕ್ಷ್ಮಣರಾವ್ ಅವರ ಕಥನ ಸಾಹಿತ್ಯದಲ್ಲಿ ಜನಪ್ರಿಯತೆಯು ಗುಣಾತ್ಮಕವಾಗಿ ಹೇಗೆ ಚಿತ್ರಿತವಾಗಿದೆ ಎಂಬುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

ಲಕ್ಷ್ಮಣರಾವ್ ಅವರ ಕಥೆಗಳನ್ನು ವಿಶ್ಲೇಷಿಸಿದಾಗ ಅವರ ಕಥೆಗಳು ಪ್ರೀತಿ ಪ್ರೇಮದ ಕಥಾವಸ್ತುಗಳನ್ನು ಒಳಗೊಂಡಿವೆ. ಪ್ರೇಮ, ಕಾಮದ ಬಗ್ಗೆ ಕಥೆಗಾರರು ತಾಳುವ ಆರೋಗ್ಯಕರವಾದ, ಪ್ರಬುದ್ಧವಾದ ನಿಲುವುಗಳು, ಸಮಾಜದ ಕಟ್ಟು ಕಟ್ಟಳೆಗಳು, ವ್ಯವಸ್ಥೆಯ ಹಿಡಿತದಿಂದ ಬಿಡಿಸಿಕೊಳ್ಳಲಾರದ ಸ್ಥಿತಿ, ಜಾತಿ ಮತ ಧರ್ಮದ ಅಡ್ಡಗೋಡೆಗಳು, ಪ್ರಜ್ಞಾವಂತ ಮನಸುಗಳನ್ನು ಕಾಡುವ ನೈತಿಕ ಪ್ರಜ್ಞೆ ಪಾಪ ಪ್ರಜ್ಞೆಗಳು, ಅವರ ಕಥೆಗಳಲ್ಲಿ ತಮ್ಮದೇ ಆದ ವಿಶಿಷ್ಟತೆಗಳೊಂದಿಗೆ ನೆಲೆ, ಪಡೆದುಕೊಂಡಿವೆ. 'ಜೆಸ್ಪರ್' ಯಾಕೆಂದರೆ' 'ಒಂದು ಪ್ರೇಮದ ಕಥೆ' 'ಯಾರಿಗೂ' ಹೇಳ್ಬೋಣು ಬ್ಯಾಡಾ' ಹೀಗೂ ಆಗುವುದುಂಟು. 'ಕಚ್ಚಿಕ್ಕು', 'ನಿರಂತರ' 'ಕವಿತಾ' ಮೊಲೆ ಜೆಂಕಿ ಮುದುಕ ಇತ್ಯಾದಿ' ಕಥೆಗಳಲ್ಲಿ ವ್ಯಕ್ತವಾಗುವ ಪ್ರೇಮ ಮತ್ತು ಪ್ರೇಮದ ನೆಲೆಯಲ್ಲಿ ಆಗುವ ಸೋಲು-ಗೆಲುವು ಏನೇ ಆದರೂ ಕೂಡ ಅವೆಲ್ಲಾ ಈ ವ್ಯವಸ್ಥೆಯ ಜೊತೆ ಸೆಣಸಾಡುತ್ತಾ ಅಂತಿಮವಾಗಿ ತಮ್ಮದೇ ಆದ ಅರಿವಿನ ನಿಲುವಿನೊಂದಿಗೆ ಬಂದು ನಿಲ್ಲುತ್ತವೆ. ಅವರ ಕಥೆಗಳಲ್ಲಿ ನಿರಂತರವಾಗಿ ಪ್ರೇಮಿಗಳಿಗೆ ಎದುರಾಗುವ ಅಡ್ಡಿ ಆತಂಕಗಳ ಬಗ್ಗೆ ರೋಷ, ಆಕ್ರೋಶ ಆವೇಶ ಪೂರಿತವಾದ ದನಿಗಳಿಲ್ಲ. ಆಕ್ರೋಶಗಳಿಲ್ಲ, ಸಿಟ್ಟು, ಸೆಡವುಗಳಿದ್ದರೂ ಮೌನವಾಗಿಯೇ, ಸಾಧ್ಯವಾದಾಗ ಸಂಯಮ ಪೂರ್ಣವಾದ ಮಾತುಗಳಲ್ಲಿ ಅದು ವ್ಯಕ್ತವಾಗುವುದನ್ನು ಕಾಣಬಹುದು. ಜೆಸ್ಪರ್ ಕಥೆಯ ನಾಯಕಿಯ ಮಾತುಗಳಲ್ಲಿ ಇದನ್ನು ಗುರುತಿಸಬಹುದು. "ಅಪ್ಪನಿಗೆ ಹೃದಯಘಾತವಾಗಿತ್ತು. ಅವರು ಭಾವಾವೇಶಕ್ಕೆ ಒಳಗಾಗುವ ಯಾವ ವಿಷಯವನ್ನು ಅವರಿಗೆ ಹೇಳುವಂತಿರಲಿಲ್ಲ. ಅಂಥದರಲ್ಲಿ ನಾನು ಒಬ್ಬ ಪರಜಾತಿಯ ಯುವಕನನ್ನು ಪ್ರೇಮಿಸ್ತಿದ್ದೀನಿ ಮದುವೆಯಾಗ್ತೀನಿ ಅಂತ ಹೇಗೆ ಹೇಳುವುದು ಎಂಬ ತಾಕಲಾಟವನ್ನು ನಾಯಕಿ ಅಮ್ಮನ ಬಳಿ ಹೇಳಿದಾಗ 'ಈ ವಿಚಾರ ನಿನ್ನ ತಂದೆಗೆ ಹೇಳಿ ನನ್ನ ಕುಂಕುಮ ಅಳಿಸಬೇಡವೆ ತಾಯಿ ನಿನ್ನ ಕಾಲಿಗೆ ಬಿದ್ದು ಬೇಡಿಕೊಳ್ತೀನಿ' ಎನ್ನುವಲ್ಲಿ (ನಿರಂತರ : ೨೦೦೫; ಜೆಸ್ಪರ್ ; ಪುಟ ; ೧೬) ಪ್ರೇಮಕ್ಕೆ ಎದುರಾದ ಅಡ್ಡಿಯನ್ನು ಮಾನವೀಯ ಮೌಲ್ಯಗಳಡಿಯಲ್ಲೆ ಪರಿಹರಿಸಿಕೊಳ್ಳುವ ಆಕೆಯ ಸಂಯಮದ ನಡೆಯನ್ನು ಸರಳವಾಗಿ ನೇರವಾಗಿ ಪ್ರತಿಪಾದಿಸುವುದು ಓದುಗನಿಗೆ ನೇರವಾಗಿ ಮುಟ್ಟುತ್ತದೆ. 'ನಿರಂತರ' ಕಥೆಯಲ್ಲಿ ವ್ಯಕ್ತವಾಗುವ ಅಂಶಗಳು, ಪ್ರೇಮ, ಪ್ರೇಮದ ಸುಖ, ಆನಂತರ ಪ್ರೇಮಕ್ಕೆ ಎದುರಾಗುವ ಸಂಪ್ರದಾಯ

ನಿಷ್ಠೆಗಳು, ತುಂಬಾ ಸರಳವಾದ ಮಾರ್ಗದಲ್ಲೆ ನಿರೂಪಣೆಗೊಂಡಿವೆ. 'ಪ್ರೇಮಿಸುವುದು ಪ್ರೇಮಿಸಲ್ಪಡುವುದು ಎಂಥ ಸುಖದ ಸಾರ್ಥಕ ದಿವ್ಯ ಅನುಭವ, ಪ್ರೇಮ ನಿಜಕ್ಕೂ ಕುರುಡು, ನಾನು ಎಲ್ಲಕ್ಕೂ ಕುರುಡಾದೆ, ಜಾತಿ, ಮತ, ಸಮಾಜ, ಪ್ರತಿಷ್ಠೆ, ಮಾನ ಮರ್ಯಾದೆ, ಕೊನೆಗೆ ನನ್ನ ಉದ್ಯೋಗ, ಭವಿಷ್ಯದ ಭದ್ರತೆ ಯಾವುದೂ ನನ್ನನ್ನು ತಡೆಯಲು ಸಮರ್ಥವಾಗಲಿಲ್ಲ. ನನ್ನ ವಿದ್ಯೆ, ಬುದ್ಧಿ, ವಿವೇಕ, ವ್ಯವಹಾರ, ಚಾತುರ್ಯ ಎಲ್ಲ ಪ್ರೇಮದೆದುರು ಅಲೌಕಿಕ ಅನುಭವದ ತೀವ್ರ ಸೆಳೆತದೆದುರು ಶರಣು ಹೊಡೆದವು .. ಎನ್ನುವಲ್ಲಿ ಪ್ರೀತಿಯ ಸೆಳೆತದ ತೀವ್ರತೆ ವ್ಯಕ್ತವಾಗಿರುವುದು ಸಾಮಾನ್ಯ ಪರಿಭಾಷೆಯಲ್ಲೆ ಆದರೂ 'ನನಗೆ ಇದ್ಯಾವುದೂ ಯೋಚಿಸಲಿಕ್ಕೆ ಸಾಧ್ಯವಾಗ್ತಾ ಇಲ್ಲ. ನಾನು ಹುಚ್ಚಿಯಾಗಿ ಬಿಟ್ಟಿದ್ದೀನಿ ಅವನಿಲ್ದೆ ನನ್ನ ಬದುಕು ಶೂನ್ಯ ಅನ್ನಿಸುತ್ತೆ ಅವನಿಗಾಗಿ ನಾನು ಸಾಯುವುದರಲ್ಲಿ ಸುಖವಿದೆ ಅನ್ನಿಸುತ್ತೆ ಎನ್ನುವ ಸುಮಳ ಮಾತುಗಳು ಪ್ರೇಮದ ಸೆಳೆತ ಹಾಗೂ ಗಟ್ಟಿತನವನ್ನು ಹೇಳುತ್ತವೆ. (ನಿರಂತರ ; ೨೦೦೫ ; ಪುಟ ; ೨೫-೨೬) ಅಂತಿಮವಾಗಿ ಕಾಲಕ್ಕೆ ಬಿಟ್ಟು ಪ್ರೀತಿಗಾಗಿ ಕಾಯುವ ತೀರ್ಮಾನಕ್ಕೆ ಬರುತ್ತಾಳೆ. ಕಥೆ ಸಹಜವಾಗಿ ಮೂಡಿ ಬಂದಿದೆ.

ಕಬ್ಬೆಕ್ಕು' ಕಥೆಯಲ್ಲಿಯು ಭಿನ್ನಮತಗಳ ನಡುವಿನ ಪ್ರೀತಿಯ ಗೆಲುವನ್ನು ಕಾಣಬಹುದು. ವಿವಿಧ ಧರ್ಮಜಾತಿ ಪಂಗಡಗಳಿಂದ ಕೂಡಿರುವ ಬಹುಮುಖ ಸಂಸ್ಕೃತಿಯ ವೈವಿಧ್ಯತೆಗಳಿಂದ ಕೂಡಿದ ನಮ್ಮ ನಾಡಿನಲ್ಲಿ ಹಿಂದೂ ಮುಸ್ಲಿಂ ಸ್ನೇಹ ಬಾಂಧವ್ಯದ ಅಗತ್ಯವನ್ನು ಎತ್ತಿ ಹಿಡಿಯುವ, ಪ್ರಾಮಾಣಿಕ ಪ್ರೀತಿಯ ಪಾರಮ್ಯವನ್ನು ಉದಾತ್ತಗೊಳಿಸುವ ಅಂಶವನ್ನು ಕಾಣಬಹುದು. ಅದರ ಮೂಲಕ ಮತ ಬಾಂಧವ್ಯದ ತುರ್ತನ್ನು ಎತ್ತಿ ಹಿಡಿಯುವ ಒಂದು ಪುಟ್ಟ ಕಥೆ 'ಕಬ್ಬೆಕ್ಕು'. ಮುಸಲ್ಮಾನ ಮತ್ತು ಹಿಂದೂ ಕುಟುಂಬದ ನಡುವಿನ ಸ್ನೇಹ ಬಾಂಧವ್ಯದ ವಿವರ ಇದೆ. ಬ್ರಾಹ್ಮಣ ಮಂಜುನಾಥ, ಮುಸಲ್ಮಾನ ಮುನ್ನ ಇವರ ನಡುವಿನ ಸ್ನೇಹ ಸೌಹಾರ್ದ ಪರಸ್ಪರ ನೋವು, ನಲಿವಿಗೆ ಸ್ಪಂದಿಸುವ ಮಾನವೀಯತೆ, ಸ್ನೇಹಿತನ ಮದುವೆಗಾಗಿ ಹೆಣ್ಣು ನೋಡಲು ಹೋದಾಗ ಪರಿಸ್ಥಿತಿಯ ಅನಿವಾರ್ಯತೆಗಾಗಿ ಹೇಳುವ ಒಂದು ಸುಳ್ಳು, ಮದುವೆಗೆ ಮಧ್ಯಸ್ಥಿಕೆ ವಹಿಸಲು ಮುಂದಾಗುವ ಮುನ್ನನನ್ನೇ ಮಾಲಿನಿ ಮೆಚ್ಚುವುದು, ಪ್ರೀತಿಸುವುದು, ಕೊನೆಗೆ ಸತ್ಯ ತಿಳಿಯುವ ಮುನ್ನ ನಾನೊಬ್ಬ ಮುಸಲ್ಮಾನ, (ನಿರಂತರ : ೨೦೦೫ ; ಪುಟ ೧೮೭) ಎಂದಾಗ ಮಾಲಿನಿ ನೀಡುವ ಉತ್ತರ 'ಶಾಂತ ಮನಸ್ಸಿನಿಂದ ತೂಗಿ ಅಳೆದು ವಿಚಾರ ಮಾಡಿ ಬರೆಯುತ್ತಿದ್ದೇನೆ. ನಾನು ಈಗಲೂ ನಿಮ್ಮವಳೇ, ನೀವು ಸ್ವೀಕರಿಸುವುದಾದರೆ (ಕಬ್ಬೆಕ್ಕು ; ಪು : ೧೮೯) ಎನ್ನುವಲ್ಲಿ ಅವಳ ದಿಟ್ಟತನಕ್ಕೆ ಮುನ್ನನ ಮನಸ್ಸು ಒಲಿಯುತ್ತದೆ. ಮಾಲಿನಿಯ ದಿಟ್ಟ ಎದೆಗಾರಿಕೆಯ ಮನಸ್ಸಿನಿಂದಾಗಿ ಪ್ರೇಮ ಗೆಲ್ಲುತ್ತದೆ. ಕಥೆಗಾರರು ಕಥೆಯ ಪ್ರಾರಂಭದಲ್ಲೇ ನೀಡುವ ಮುನ್ನ, ಮಂಜುನಾಥ ಇವರ ಸಾಮರಸ್ಯದ ಒಡನಾಟಗಳ ವಿವರದ ಮೂಲಕವೇ ಕತೆಯ ಅಂತ್ಯವನ್ನು ನಿರೀಕ್ಷಿಸುವ ಸಾಧ್ಯತೆ ಕಂಡು ಬರುತ್ತದೆ. ಮಲೆನಾಡಿನಲ್ಲಿ ಯಾರಿಗೂ ತಿಳಿಯದಂತೆ ಹಣ್ಣು ತಿಂದು ಹೋಗಲು ರಾತ್ರಿಯ ಕತ್ತಲಲ್ಲಿ ಬರುವ 'ಕಬ್ಬೆಕ್ಕು', ಪ್ರೀತಿಯು ಹಾಗೆ ಹೇಳಿ ಕೇಳಿ ತೋರಿಸಿಕೊಂಡು

ಬರುವುದಿಲ್ಲ. ಮನಸ್ಸಿನಿಂದ ಹುಟ್ಟುವುದು, ಅರಿಯದಂತೆಯೇ ಮನಸ್ಸು ಕದ್ದು ಬಿಡುತ್ತವೆ ಎನ್ನುವ ಪ್ರೇಮದ ಸಂಕೇತವಾಗಿ ಬರುವ ಮೂಲಕ ಕತೆಯ ಹೊಳಪನ್ನು ಹೆಚ್ಚಿಸುತ್ತವೆ. ಲಕ್ಷ್ಮಣರಾವ್ ಅವರ ಕಥೆಗಳಲ್ಲಿ ಪ್ರೇಮದ ತುಡಿತ, ಮಿಡಿತಗಳ ತೀವ್ರತೆ, ಪ್ರೇಮದ ಆಳ, ಅಗಲಗಳು, ಅವಕ್ಕಿರುವ ವ್ಯವಸ್ಥೆಯ ಭಯ, ಆತಂಕ, ನೋವು ನಿರಾಶೆಗಳನ್ನು ತುಂಬಾ ಸರಳವಾದ ರೀತಿಯಲ್ಲಿ ವ್ಯಕ್ತವಾಗುತ್ತವೆ. ಅದೇ ಓದುಗರನ್ನು ಆಕರ್ಷಿಸುತ್ತದೆ. ಅಲ್ಲಿನ ಪಾತ್ರ, ಸನ್ನಿವೇಶ, ಘಟನೆಗಳ ವಿವರಗಳು ಓದುಗನನ್ನು ಕಾಡುತ್ತಾ ಹೋಗುತ್ತವೆ. ಇಲ್ಲೆಲ್ಲಾ ವ್ಯಕ್ತವಾಗುವುದು ಬುದ್ಧಿಯ ಅಂಶಗಳಿಗಿಂತ ಭಾವನೆಗಳಿಗೆ ಹೆಚ್ಚಿನ ಒತ್ತು ಇರುತ್ತದೆ. ಜನಪ್ರಿಯ ಸಾಹಿತ್ಯದ ಲಕ್ಷಣವೆಂದು ಗುರುತಿಸಿಕೊಂಡಿರುವ ವಿಮರ್ಶೆಯ ನೆಲೆಯಲ್ಲಿ ಪರಿಭಾವಿಸಿದಾಗ ಇವರ ಕಥೆಗಳಲ್ಲಿ ಯಾವುದೇ ಬಗೆಯ ಗೊಂದಲ, ದ್ವಂದ್ವ, ತಾರ್ಕಿಕ ಚರ್ಚೆಗೆ ಹೋಗದೆ ವಿಷಯವನ್ನು ಸರಳವಾಗಿ ನೇರವಾಗಿ ಹೃದಯಕ್ಕೆ ತಟ್ಟುವಂತೆ ವಸ್ತು ವಿಷಯದ ನಿರೂಪಣೆ ಪಾತ್ರಗಳ ಮೂಲಕ ಅದನ್ನು ಸಾಧಿಸಿಕೊಂಡಿರುವುದನ್ನು ಗುರುತಿಸಬಹುದು. ಸಿದ್ಧ ಮಾದರಿಗಳು ಎನ್ನುವ ಪ್ರೀತಿಪ್ರೇಮ, ಹಾಸ್ಯವ್ಯಂಗ್ಯ ವಿಡಂಬನೆಗಳು, ಇವುಗಳ ಸುತ್ತವೇ ಅವರ ಕಥೆಗಳು ಮತ್ತು ಕಾದಂಬರಿಯ ವಸ್ತು ವಿಷಯಗಳು ಹೆಣೆಯಲ್ಪಟ್ಟಿವೆ. ಇದು ಕೂಡ ಅವರ ಕಥೆಗಳಲ್ಲಿನ ಜನಪ್ರಿಯತೆಯ ಅಂಶವೆಂದು ಗುರುತಿಸಬಹುದಾಗಿದೆ.

ಲಕ್ಷ್ಮಣರಾವ್ ಅವರ ಕಥೆಗಳಲ್ಲಿ ನಿರೂಪಿತವಾಗಿರುವ ವಿಷಯ ಜನರಿಂದ ದೂರವಾದವುಗಳಲ್ಲ. ಮಧ್ಯಮ ವರ್ಗದ ಸಮಾನ್ಯ ಜನರ ಬದುಕಿನ ದಿನನಿತ್ಯದ ಜಂಜಾಟಗಳಿಗೂ ಅಲ್ಲಿ ಒತ್ತು ನೀಡಲಾಗಿದೆ. 'ನಾಗರೀಕ' ಕತೆಯನ್ನು ಈ ನೆಲೆಯಲ್ಲಿ ನೋಡಬಹುದು. ಅಲ್ಲಿ ಚರ್ಚಿತವಾಗಿರುವ ವಿಷಯ ನಾಗರೀಕ ಬದುಕು, ಅಂದರೆ ಬೆಂಗಳೂರು ನಗರ ಜೀವನದ ಒತ್ತಡದ ಬದುಕಿನ ಒಟ್ಟು ನೋಟವಿದೆ. ಸಿನಿಮಾ ನೋಡಲು ಹೊರಟ ದಂಪತಿಗಳು, ಪಡುವ ಧಾವಂತಗಳು, ಮನೆಯಿಂದ ಹೊರಟಾಗಿನಿಂದ ಸಿನಿಮಾ ನೋಡಿ ತಿಂಡಿ ಮುಗಿಸಿ ಹೊರ ಬಂದು ರಾತ್ರಿ ಮನೆ ಸೇರುವವರೆಗಿನ ಚಿತ್ರಣವಿದೆ. ಅಲ್ಲಿ ಅವರು ಅನುಭವಿಸುವ ಕಿರಿಕಿರಿಗಳು, ತಾಕಲಾಟಗಳು, ಅಸಹನೆ, ಒತ್ತಡ, ಕಾದು ಕಾದು ಬಳಲುವುದು, ಸಿನಿಮಾ ಕಥೆ ಕೂಡ ಮುಂಬಯಿ ನಗರ ಜೀವನದ ಯಾಂತ್ರಿಕ ಒತ್ತಡದ ಬದುಕನ್ನು ಪ್ರತಿಬಿಂಬಿಸುವುದು. ಹೋಟೆಲ್ ಹೊಕ್ಕು ಕೂಡಲು ಜಾಗಕ್ಕಾಗಿ ಅರ್ಧ ಗಂಟೆ ಕಾದು, ನಂತರ ತಿಂಡಿಗಾಗಿ ಇನ್ನರ್ಧ ಗಂಟೆ ಕಾದು ಅರೆ ಹೊಟ್ಟೆ ತುಂಬಿಸಿ ಕೊಂಡು, ಕಾಫಿ ಕುಡಿದು ನಾಲಿಗೆ ಕೆಡಿಸಿಕೊಳ್ಳುವುದು, ಅಮ್ಮಾವ್ರ ಗಂಡನಾಗಿ ದುಡಿದು ಗಿಂಬಳದ ಹಣದಲ್ಲಿ ಹೆಂಡತಿಯ ಆಸೆಗಳನ್ನೆಲ್ಲಾ ಪೂರೈಸುತ್ತಾ ಬದುಕುವ ಆತ ಇದ್ದು ಇಲ್ಲದಂತಹ ಸ್ಥಿತಿಗೆ ತಲುಪುವುದು. ವಿಷಾದದ ಮೂಲಕ ಕಥೆ ಅಂತ್ಯವಾಗುತ್ತದೆ. ಇದೇ ಬಗೆಯ ಜಂಜಾಟಗಳ ಚಿತ್ರಣವನ್ನು 'ಘಾತ' 'ವಿಹಾರ' 'ಕವಿತಾ' 'ಮೊಲೆ ಬೆಂಕಿ ಮುದುಕ ಇತ್ಯಾದಿ' ಕಥೆಗಳಲ್ಲಿಯು ಕಾಣುತ್ತೇವೆ. ನಿತ್ಯ ಬದುಕಿನ ಸಾಮಾನ್ಯ ವಿಷಯಗಳ ಸರಳ ನಿರೂಪಣೆಯೊಂದಿಗೆ ಹರಿತವಾದ ವ್ಯಂಗ್ಯವನ್ನು ವಿಡಂಬನಾತ್ಮಕವಾಗಿ ಚಿತ್ರಿಸುವುದನ್ನು ಕಾಣಬಹುದು.

ಸಾಮಾನ್ಯವಾಗಿ ಜನಪ್ರಿಯ ಸಾಹಿತ್ಯವೆಂದು ಗುರುತಿಸುವ ಸಾಹಿತ್ಯದಲ್ಲಿ ತಂತ್ರಗಾರಿಕೆಯಲ್ಲಿ ಹೊಸತನದ ಕೊರತೆ ಕಂಡು ಬರುತ್ತದೆ. ಅದರಿಂದಾಗಿಯೇ ಚರ್ವಿತ ಚರ್ವಣ, ಏಕತಾನತೆಯ ನಿರೂಪಣೆಯು ಕಂಡು ಬರುತ್ತದೆ ಎಂಬ ಮಾತು ಇದೆ. ಲಕ್ಷ್ಮಣರಾವ್ ಅವರ ಕಥೆಗಳಲ್ಲಿ ಈ ಬಗೆಯ ನಿರೂಪಣೆಗಳನ್ನು ಗುರುತಿಸಬಹುದು. ಆದರೂ ಕಥೆಗಳಲ್ಲಿ ಆಕರ್ಷಕವಾದ ಶೈಲಿ. ಓದುಗರನ್ನೇ ರಂಜಿಸುತ್ತದೆ. ಕಥೆಗಳು ಆಪ್ತವಾಗುತ್ತವೆ. ಅವರ ಎಲ್ಲಾ ಪ್ರೇಮ ಕಥೆಗಳಲ್ಲಿ, ಕಾದಂಬರಿಗಳಲ್ಲಿ ನಿರೂಪಿತವಾಗಿರುವ ಘಟನೆಗಳು, ಸನ್ನಿವೇಶಗಳಿಗೆ ಇದನ್ನು ಅನ್ವಯಿಸಿ ನೋಡಬಹುದಾಗಿದೆ. 'ನಿರಂತರ' ಕಥೆಯ ನಾಯಕಿಯ ಪ್ರೇಮ, ಅದಕ್ಕೆ ಎದುರಾಗುವ ಜಾತಿ ಮತದ ಅಡ್ಡಗೋಡೆ 'ಹೀಗೊಂದು ಪ್ರೇಮದ ಕಥೆ', 'ಯಾರಿಗೂ ಹೇಳೋದು ಬ್ಯಾಡಾ' 'ನಿರಂತರ' 'ಜೆಸ್ಟರ್' ಕವಿತಾ, ಹೀಗೊಂದು ಪ್ರೇಮ ಕಥೆ ಕಾದಂಬರಿಯ ರವಿ ಮತ್ತು ಗ್ರೇಸಿಯರಪ್ರೇಮ ಅವರು ಪಡುವ ಅವಸ್ಥೆಗಳು, ಇದರಲ್ಲೆಲ್ಲಾ ವ್ಯಕ್ತವಾಗುವ ಪ್ರೇಮ, ಪ್ರೇಮಿಗಳಿಗೆ ಎದುರಾಗುವ ಆತಂಕಗಳು, ವ್ಯವಸ್ಥೆಯ ಭಯ ಕುಟುಂಬದ ಬಾಂಧವ್ಯ ಬಂಧನ ಸೆಳೆತಗಳು, ಸಾಮಾನ್ಯವಾದ ರೀತಿಯಲ್ಲಿ ಸಹಜವಾದ ಘಟನೆಗಳಾಗಿ ಬಿಂಬಿಸಲ್ಪಟ್ಟಿವೆ.

'ಹೀಗೊಂದು ಪ್ರೇಮ ಕಥೆ' ಕಾದಂಬರಿಯ ನಾಯಕ ರವಿಗೆ 'ವ್ಯಾಪಾರವೇ ಬದುಕಾದ, ಬದುಕೇ ವ್ಯಾಪಾರವಾದ, ಧನಾರ್ಜನೆಯೇ ಜೀವನದ ಪರಮೋದ್ದೇಶವಾದ, ಯಾಂತ್ರಿಕ ಏಕತಾನ, ಸಂಪ್ರದಾಯಬದ್ಧ ಬದುಕನ್ನು ವಿರೋಧಿಸುವ ಮನಸ್ಥಿತಿ ಇದೆ. (ಹೀಗೊಂದು ಪ್ರೇಮ ಕಥೆ ; ೧೯೮೧-೨೦೦೫ ಪುಟ ; ೧)ಸಭ್ಯರಂತೆ, ಮಡಿವಂತರಂತೆ ಸೋಗು ಹಾಕುವ ತನ್ನೂರಿನ ತನ್ನ ಜನರ ಮುಖವಾಡದ ಬದುಕಿನ ಬಗ್ಗೆ ರವಿಗೆ ಹೇಸಿಗೆಯಾಗುತ್ತದೆ. ಅದರಿಂದಾಗಿ ಆತ ತನ್ನದೇ ಆದ ಅಸ್ತಿತ್ವದ ಸ್ಥಾಪನೆಗಾಗಿ ಹೋರಾಟ ಮಾಡಬೇಕಾಗುತ್ತದೆ. ಸ್ವತಂತ್ರವಾಗಿ ಬದುಕು ಕಟ್ಟಿಕೊಳ್ಳುವ ಕಡೆಗೆ ಸಾಗುವ ಆತ, ಆತನ ಮನೆಯವರನ್ನು ಒಪ್ಪಿಸುವ ರೀತಿ ಉಪಾಯದಿಂದಲೇ ಒಂದೊಂದೇ ಹಂತದಲ್ಲಿ ಸಾದಿಸುತ್ತಾ ಹೋಗುತ್ತಾನೆ. ಧನಾರ್ಜನೆಗಾಗಿ, ವಿದ್ಯೆಯಲ್ಲ ಜ್ಞಾನ ಸಂಪಾದನೆಗಾಗಿ ವಿದ್ಯೆ ಎಂಬುದನ್ನು ತಂದೆ ರಂಗಯ್ಯನವರಿಗೆ ಮನವರಿಕೆ ಮಾಡಿಕೊಟ್ಟು ಓದಲು ಸೇರುವುದೇ ಮೊದಲ ಗೆಲುವು ಎಂದುಕೊಳ್ಳುತ್ತಾನೆ. ಆನಂತರ ತನ್ನಿಚ್ಚೆಯ ಶಿಕ್ಷಕ ವೃತ್ತಿ ಬಿಟ್ಟರೂ ಬ್ಯಾಂಕಿನ ಉದ್ಯೋಗಿಯಾದಾಗ ಅದು ನನ್ನ ವ್ಯಕ್ತಿತ್ವ ಸ್ಥಾಪನೆಯ ಮೊದಲ ಹಂತವೆಂದು ಭಾವಿಸುತ್ತಾನೆ. ಆನಂತರ ಗ್ರೇಸಿ ಅವನ ಪ್ರೀತಿ, ಜಾತಿಯ ಕಾರಣದಿಂದಾಗಿ ಸೋಲುವ ಹಂತ ತಲುಪಿದಾಗ, ಉಪಾಯದಿಂದ ವಾಮ ಮಾರ್ಗದ ಮೂಲಕ ತನ್ನವರಿಂದ ಹೊರಬಂದು ಪ್ರೀತಿಯನ್ನು ಪಡೆಯುವುದು, ಮುಂದಿನ ಎಲ್ಲಾ ಸಮಸ್ಯೆಗಳಿಗೆ ಸಿದ್ದನಾಗುವುದು, ಇದಕ್ಕೆ ಪ್ರೋತ್ಸಾಹಕವಾಗಿ ಬರುವ ಶೇಖರ್. ಅವನ ಹೋರಾಟದ ಬದುಕಿಗೆ ಒತ್ತಾಸೆಯಾಗುವುದು, ಕಾದಂಬರಿಯು ಸರಳವಾಗಿ ಓದಿಸಿಕೊಂಡು ಹೋಗುತ್ತದೆ. ಜಾತಿ, ಮತ ವ್ಯವಸ್ಥೆಯನ್ನು ಮೀರಿ ಕ್ರಿಶ್ಚಿಯನ್ ಹುಡುಗಿಯನ್ನು ಪಡೆಯುವಲ್ಲಿ ಯಶಸ್ಸು ಕಾಣುತ್ತಾನೆ. ಹೀಗೆ

ಕಾದಂಬರಿಯ ವಸ್ತು ವಿಷಯ ಸರಳ, ನಿರೂಪಣೆ, ಸಹಜ ವಿಷಯಗಳು ಗೊಂದಲ, ದ್ವಂದ್ವಗಳಿಗೆ ಎಡೆಕೊಡದ ಘಟನೆಗಳ ವಿವರಗಳಿಂದಾಗಿ ಕಾದಂಬರಿ ಮೆಚ್ಚುಗೆಯಾಗುತ್ತದೆ.

ಲಕ್ಷ್ಮಣರಾವ್ ಅವರ ಬಹುತೇಕ ಕಥೆಗಳು ಓದುಗರ ನಿರೀಕ್ಷೆಗಳನ್ನು ಪೂರೈಸುವ ನೆಲೆಯಲ್ಲಿ ನಿರೂಪಿತವಾಗಿವೆ. ಅವರ ಕತೆಗಳಲ್ಲಿ ಘಟಿಸುವ ಘಟನೆಗಳು, ಪ್ರತಿಪಾದಿತವಾಗಿರುವ ವಿಷಯಗಳು, ಅಲ್ಲಿ ಬರುವ ಪಾತ್ರಗಳು ಇವೆಲ್ಲಾ ನಮ್ಮ ಸುತ್ತ ಮುತ್ತ ನಡೆಯುವ ವಿಷಯಗಳೇ ಆಗಿವೆ ಎನಿಸುತ್ತದೆ. ಅನುಭವದ ಮಿತಿಯಲ್ಲೆ ಈ ಎಲ್ಲಾ ಕಥೆಗಳು ಸಾಗುತ್ತವೆ. ಅನುಭವದಾಚೆಗಿನ ವಿಷಯಗಳು ಲಕ್ಷ್ಮಣರಾವ್ ಅವರನ್ನು ಹೆಚ್ಚಾಗಿ ಕಾಡುವುದೇ ಇಲ್ಲ ಎಂಬುದು ಮುಖ್ಯವಾದ ಅಂಶವಾಗಿದೆ. 'ನಿರಂತರ' 'ಜೆಸ್ಟರ್' 'ಕವಿತಾ' ನಾಗರೀಕ' 'ಒಂದು ರಾತ್ರಿ' ಯಾಕೆಂದರೆ 'ಗಡಿಯಾರ' 'ಚಂದನದಗೊಂಬೆ' ಹೀಗೂ ಆಗುವುದುಂಟು' ಕಥೆಗಳಲ್ಲಿ ನಿರೂಪಿತವಾಗಿರುವ ವಸ್ತು ವಿಷಯಗಳು ಓದುತ್ತಾ ಹೋದಂತೆ ಈ ಕಥೆಯ ಸಾಗುವಿಕೆ. ಕಥೆಯ ಅಂತ್ಯದ ಬಗ್ಗೆ ಓದುಗನ ನಿರೀಕ್ಷೆಯನ್ನು ಹುಸಿ ಮಾಡದಂತೆ ಸಾಗುವುದನ್ನು ಕಾಣಬಹುದು.

'ನಿರಂತರ' ಕಥೆಯಲ್ಲಿ ಬರುವ ಎರಡು ಪ್ರೇಮ ಪ್ರಕರಣಗಳು. ಅಣ್ಣ ಮತ್ತು ತಂಗಿ ಇವರಿಬ್ಬರ ಪ್ರೇಮ ಪ್ರಕರಣಗಳು. ವೈಶ್ಯ ಪಂಗಡಕ್ಕೆ ಸೇರಿದ ಭಾಗ್ಯಳನ್ನು ಪ್ರೀತಿಸಿ ಪ್ರೇಮದಿಂದ ದೂರಾದ ಅಣ್ಣ ಒಂದು ಕಡೆಯಾದರೆ, ಅನ್ಯಜಾತಿಗೆ ಸೇರಿದ ರಾಜಾರೆಡ್ಡಿಯನ್ನು ಪ್ರೀತಿಸಿದ ತಂಗಿ ಸುಮ ಅದಕ್ಕಾಗಿ ಪರಿತಪಿಸುವುದು, ಇನ್ನೊಂದು ಕಡೆ, ತಂಗಿಯ ಪ್ರೀತಿಯ ಸಫಲತೆಗಾಗಿ ಮಿಡಿಯುವ ಅಣ್ಣ. ಯುವ ಪ್ರೇಮವನ್ನು ರಭಸವಾಗಿ ಕಾಡುವ, ಅವರನ್ನು ಅಗಲಿಸುತ್ತಿರುವ ಜಾತಿ ವ್ಯವಸ್ಥೆ. ಅನುಭವ ಜನ್ಯವಾದ ಅಣ್ಣನ ಸಮಾಧಾನದ ಮಾತುಗಳು, ಸಂಯಮದಿಂದಲೇ ಸಾಗುವ ಕಥೆಯ ನಿರೂಪಣೆ, ಓದುಗರಿಗೆ ಹತ್ತಿರವಾಗುತ್ತದೆ. ಮುಂದೇನು ಎಂದು ಕಾತರದಿಂದ ಕಾಯುತ್ತಾ ಬರುವ ಓದುಗರಿಗೆ ಅದರಲ್ಲೇನು ವಿಶೇಷವಿಲ್ಲ. ಮಧ್ಯಮ ವರ್ಗದ ಕುಟುಂಬದಲ್ಲಿ ನಡೆಯುವುದು ಸಹಜ ಎನ್ನುವ ರೀತಿಯಲ್ಲಿ ಕಥೆಯ ಅಂತ್ಯವನ್ನು ನಿರೂಪಿಸುವುದು ಜನಪ್ರಿಯತೆಗೆ ಕಾರಣವಾಗುತ್ತದೆ. ಕಥೆ ಓದುಗನಿಗೆ ಆಪ್ತವಾಗುತ್ತದೆ.

ಲಕ್ಷ್ಮಣರಾವ್ ಅವರ ಕಥಾನಾಯಕಿಯರ ಪಾತ್ರ ಚಿತ್ರಣವು ಕೂಡ ನಮ್ಮ ಸಾಮಾಜಿಕ ವ್ಯವಸ್ಥೆಯ ಚೌಕಟ್ಟಿನಲ್ಲೆ ಬರುವಂತಹವರು, ಹಾಗೆಯೇ ಬದುಕು ಸಾಗಿಸಲು ತೊಡಗುತ್ತಾರೆ. 'ನಿರಂತರ' ಕಥೆಯ ರಮ, ಒಂದು ಪ್ರೇಮದ ಕಥೆಯ ಲಕ್ಷ್ಮಿ, ಯಾರಿಗೂ ಹೇಳೋದು ಬ್ಯಾಡದ ಜಾನಕಿ, ಕಬ್ಬೆಕ್ಕು ಕತೆಯ ಮಾಲಿನಿ, ಕವಿತಾ ಕಥೆಯ ನಂಜಮ್ಮ, ಪುಟ್ಟ ಗೌರಿ ಇವರೆಲ್ಲಾ ಸಮಾಜದ ನೀತಿನಿಯಮ, ಅಚಾರವಿಚಾರಗಳ ಚೌಕಟ್ಟಿನಲ್ಲೇ ತಮ್ಮ ಸಮಸ್ಯೆಗಳಿಗೆ ಮುಖಾಮುಖಿಯಾಗುತ್ತಾರೆ. ಅವರಿಗೆ ಎದುರಾಗುವ ಆತಂಕಗಳಿಗೆ ಪರಿಹಾರವು ಮಾನವೀಯ ಸಂಬಂದದ ನೆಲೆಯಲ್ಲಿಯೇ ಸಾಕಾರಗೊಳ್ಳುತ್ತವೆ. ಕ್ರೂರ ವ್ಯವಸ್ಥೆಯ ಹಿಡಿತಕ್ಕೆ ಸಿಕ್ಕಿ ಬಾಡಿ ಹೋಗುತ್ತಿರುವ ಮನುಷ್ಯ ಸಂಬಂಧಗಳ ಬಗ್ಗೆ ಚಿಂತನೆ, ಪ್ರೀತಿ ವಿಶ್ವಾಸಗಳನ್ನು ಎತ್ತಿ ಹಿಡಿಯುವ, ಮಾನವೀಯ ಅಂತಃಕರಣದಿಂದ ಕೂಡಿದ

ಜೀವಪರ ಚಿಂತನೆಗಳು ಅವರಲ್ಲಿ ವ್ಯಕ್ತವಾಗುವ ಅಂಶಗಳು. ಪ್ರೀತಿಯನ್ನು, ಜೀವನ ಪ್ರೀತಿಯನ್ನು ಮನುಷ್ಯ ಸಂಬಂಧಗಳನ್ನು ಗಂಡು ಹೆಣ್ಣಿನ ಪ್ರೀತಿಯನ್ನು ವ್ಯವಸ್ಥೆಯ ಒಡಿತಕ್ಕೆ ಒಳಗಾಗಿ ನಲುಗಿ ಹೋಗದಂತೆ ಕಾಯುವ ಜೀವಪರವಾದ ದನಿ ಅವರದು. ನೈತಿಕತೆ, ಪಾಪಪ್ರಜ್ಞೆಗಳಿದ್ದರೂ ಅದು ಮಾನವೀಯ ನೆಲೆಯಲ್ಲಿಯೇ ವ್ಯಕ್ತವಾಗಿದೆ. ಗಂಡು ಹೆಣ್ಣಿನ ಪ್ರೀತಿಯನ್ನು ಕಾಪಾಡುವ ಧೋರಣೆಯು ಅವರದು, ಅಲ್ಲಿಯೂ ಕೂಡ ಅನೀತಿ ಅಶ್ಲೀಲತೆಯಿಂದ ಕೂಡಿರದ ಅವರ ನಿಲುವುಗಳು ರಮಾ, ಲಕ್ಷ್ಮಿ, ಜಾನಕಿ, ಮಾಲಿನಿ, ಇವರುಗಳ ಪಾತ್ರಗಳ ಮೂಲಕ ಪ್ರತಿಪಾದನೆಯಾಗಿರುವುದನ್ನು ಕಾಣಬಹುದು. ಜೆಸ್ಟರ್ ಕಥೆಯ ನಾಯಕಿಯ ಪ್ರೀತಿ ಜಾತಿಯ ಕಾರಣದಿಂದ ದೂರಾದರೂ ಅನ್ಯರ ಪ್ರೀತಿಯ ಬಗ್ಗೆ ಅವಳು ತೋರುವ ಕಾಳಜಿ ಮನೆ ಕೆಲಸದಾಕೆ ಮಲ್ಲಿ ಮತ್ತು ಜಾನಿಯರ ಪ್ರೀತಿಗೆ ಸಹಾಯಕಳಾಗಿ ನಿಲ್ಲುವ ಮೂಲಕ ಸಾರ್ಥಕತೆ ಕಾಣುತ್ತದೆ. 'ಕಬ್ಬೆಕ್ಕು' ಕತೆಯಲ್ಲಿನ 'ಮಾಲಿನಿ' ಪ್ರೀತಿಗಾಗಿ ಜಾತಿ ಧರ್ಮದ ಅಡ್ಡಗೋಡೆಯನ್ನು ಮುರಿದು ನಿಲ್ಲುವ ದಿಟ್ಟತನವಿದ್ದರೂ ಅದೂ ಪ್ರೀತಿಯ ಮೂಲಕವೇ ಮಾನವೀಯತೆ ಮೆರೆಯುತ್ತದೆ. 'ಯಾರಿಗೂ ಹೇಳೋಣೂ ಬ್ಯಾಡಾ' ದಲ್ಲಿನ ಜಾನಕಿ ಜೀವನದಲ್ಲಿ ಬಹಳಷ್ಟು ಕಷ್ಟಗಳನ್ನು ಎದುರಿಸಿದವಳು. ವೈವಾಹಿಕ ಜೀವನ ಮುರಿದರೂ ಅಣ್ಣಂದಿರ ಪ್ರಜ್ಞಾಪೂರ್ವ ನಡವಳಿಕೆಯಿಂದಾಗಿ ಮತ್ತೆ ಓದಿ ಕೆಲಸಕ್ಕೆ ಸೇರಿ ಆರ್ಥಿಕವಾಗಿ ಸ್ವತಂತ್ರವಾದರೂ ಒಂಟಿತನ ಕೊನೆತನಕ ಅಸಾಧ್ಯವೆಂಬ ಅಣ್ಣಂದಿರ ಹಿತನುಡಿಗೆ ತಲೆ ಬಾಗಿ ಮರುಮದುವೆಯಾದಾಗ ಜೊತೆಯಾದವನು ಸದಾಶಿವರೆಡ್ಡಿ, ಆನಂತರದ ಬದುಕು ನರಕವಾದಾಗ, ತರಭೇತಿಗೆಂದು ಒಂದು ಪರಿಚಿತರಾದ ಉಪನ್ಯಾಸಕರ ಒಡನಾಟ, ಪ್ರೀತಿಯಿಂದ ಆಕೆ ಮತ್ತು ಆತ ಪರಸ್ಪರ ಒಪ್ಪಿ ವಿವಾಹೇತರ ಸಂಬಂಧ ಹೊಂದುವುದು ಸ್ತ್ರೀ ಸಹಜ ಬಯಕೆಯ ಪೂರೈಕೆಗಾಗಿ ಮಾತ್ರ, ಅದು ಈಡೇರಿದ ನಂತರ ಆ ಸಂಬಂಧದಿಂದ ಅಂತರ ಕಾಯ್ದುಕೊಂಡು ಪರಸ್ಪರ ದೂರಾಗುವುದು ವಿವೇಚನಾಯುತ ವಿಶ್ಲೇಷಣೆಯ ಮೂಲಕ ವ್ಯಕ್ತವಾಗುತ್ತದೆ. ಇದೆಲ್ಲವನ್ನು ತಿಳಿಸಿ ಬದುಕು ಒಡೆಯುವುದಕ್ಕಿಂತ ಬದುಕು ಅಸ್ತ-ವ್ಯಸ್ತವಾಗದಂತೆ ಜಾನಕಿ ತೆಗೆದುಕೊಳ್ಳುವ ತೀರ್ಮಾನದಲ್ಲಿ ಪ್ರೇಮ ಮನೆ ಮುರಿಯುವಂತಾಗದೆ, ಬದುಕನ್ನು ಅವರದೇ ನೆಲೆಯಲ್ಲಿ ಕಟ್ಟಿಕೊಳ್ಳುವ ಮೂಲಕ ಯಾವುದೇ ತಾರ್ಕಿಕ ಜಿಜ್ಞಾಸೆಗೆ ತೊಡಗಿ ಗೋಜಲು ಮಾಡದಂತೆ ಸೌಮ್ಯಗೊಳಿಸಿರುವುದು. ಸಾಮಾನ್ಯವಾಗಿರುವ ವಿವಾಹೇತರ ಸಂಬಂಧ ಗೋಳಿನ ಕಥೆಯಾಗದಿರುವುದೇ ಕಥೆಯ ವೈಶಿಷ್ಟ್ಯಯೆನ್ನಬಹುದು. ಮನುಷ್ಯ ಸಂಬಂಧಗಳನ್ನು ನಲುಗಿ ಹೋಗದಂತೆ ಪ್ರೀತಿಯ ನೆಲೆಯಲ್ಲಿ ಕಾಯುವುದನ್ನು ಕಾಣಬಹುದಾಗಿದೆ.

ಹಾಗೆಯೇ 'ದಾಖಲೆ' ನಾ ಕೊಂದ ಯುವಕ' ಕಥೆಗಳ ನಾಯಕರಾದ ಸತ್ಯ ಮತ್ತು ಚಂದ್ರು ರವರು ವ್ಯವಸ್ಥೆಯ ವಿರುದ್ಧ ನಡೆಸುವ ಹೋರಾಟ ಶೋಷಣೆಯ ವಿರುದ್ಧದ ದನಿಯಲ್ಲಿ ಮಾನವ ಪರವಾದ ಕಾಳಜಿಯಿಂದಲೇ ಮನುಷ್ಯ ಸಂಬಂಧಗಳನ್ನು ಬೆಸೆಯುವ ಪ್ರಯತ್ನವಿರುವುದನ್ನು ಕಾಣಬಹುದು.

'ಮೊಲೆ ಬೆಂಕಿ ಮುದುಕ ಇತ್ಯಾದಿ' ಕಥೆಯು ಕೂಡ ವಿಶಿಷ್ಟ ಚಿಂತನೆಯಿಂದ ಕೂಡಿದೆ. ವಿವಾಹೇತರ ಸಂಬಂಧದ ನೆಲೆಯಲ್ಲಿ ಸ್ತ್ರೀಪರವಾದ ಚಿಂತನೆಯನ್ನು ಒಳಗೊಂಡಿದೆ. ಪ್ರೀತಿಯ ಕೊರತೆಯಿಂದ ನಲುಗುತ್ತಿರುವ ಜೀವಿಗಳ ಮನಸ್ಸನ್ನು ಬಿಚ್ಚಿಡುವ ಪ್ರಯತ್ನವಿದೆ. ಉಬ್ಬಿದ ದುಂಡು ಮೊಲೆಗಳ ಗೀಳು ಹಚ್ಚಿಕೊಂಡಿರುವ ನಾಯಕ, ತನ್ನ ಆಸೆ ಆಕಾಂಕ್ಷೆ ಅಭಿರುಚಿಗಳಲ್ಲಿ ವ್ಯತಿರಿಕ್ತವಾದ ಅಭಿರುಚಿ ಬೆಳೆಸಿಕೊಂಡಿರುವ ಹೆಂಡತಿ, ತಂಗಿಯ ಮೇಲಿನ ಪ್ರೀತಿಗಾಗಿ ತನ್ನ ಪ್ರೀತಿಯನ್ನು ತ್ಯಾಗ ಮಾಡಿದರೂ ತಂಗಿ ಸುಮಾಳ ಬಾಳು ದುರಂತವಾಗುವುದು ದಕ್ಷ ಪ್ರಾಮಾಣಿಕ ನಿಷ್ಠಾವಂತ ಶಿಕ್ಷಕ ನಿವೃತ್ತಿಯ ನಂತರ ಮಕ್ಕಳ ನಿರ್ಲಕ್ಷ್ಯತೆಯಿಂದಾಗಿ ಮುದಿ ಹೆಂಡತಿಯೊಂದಿಗೆ ಅನಾಥವಾಗಿ ಬಾಳು ನೂಕುವ ಮುದುಕ, ಇವರುಗಳ ಜೀವನದ ವಿವರದೊಂದಿಗೆ ಕಥೆ ಸಾಗುತ್ತದೆ.

ಕಥಾನಾಯಕನಲ್ಲಿದ್ದ ಅಗಾಧ ಹುಚ್ಚು ಎಂದರೆ ಉಬ್ಬಿದ ಮೊಲೆಗಳ ಮೇಲಿನ ಗೀಳು, ಹೆಂಡತಿಯಲ್ಲಿಲ್ಲವೆಂಬ ಕೊರಗು ಇವೆ. ಅಪಘಾತವಾದ ಹೆಣ್ಣಿನಲ್ಲಿ ಅದನ್ನು ಕಾಣುತ್ತಾನೆ. ಮನೆಗೆಲಸದ ನಂಜಿಯಲ್ಲಿದ್ದುದರಿಂದ ಅವಳಲ್ಲಿ ವಿಶೇಷ ಆಸೆ ಉಂಟಾದರೂ ಅವನಲ್ಲಿನ ನೈತಿಕ ಪ್ರಜ್ಞೆ, ಜೊತೆಗೆ ಕಾಡುವ ಪಾಪ ಪ್ರಜ್ಞೆ ತಾನಾಗಿಯೇ ಒಲಿದು ಬಂದ ನಂಜಿಯನ್ನು ತಿರಸ್ಕರಿಸುವಂತೆ ಮಾಡಿತೇನೋ ಎನ್ನುವಲ್ಲಿ ಆತ್ಮ ವಿಮರ್ಶೆಯು ನಡೆಯುತ್ತದೆ. ನಂಜಿಯನ್ನು ತಿರಸ್ಕರಿಸಲು ಕಾರಣ 'ನಾನು ನನ್ನ ಹೆಂಡತಿಯನ್ನು ಎಷ್ಟು ದ್ವೇಷಿಸಬಹುದಾದರೂ, ಅವಳು ಬೇರೊಬ್ಬನೊಂದಿಗೆ ವ್ಯಭಿಚಾರಕ್ಕೆ ತೊಡಗಿದರೆ ಸಹಿಸಬಲ್ಲಂಥ ಮನಸ್ಥಿತಿಗೆ ಬಂದು ತಲುಪಿದ್ದೇನೆಂದು ನನಗನ್ನಿಸುವುದಿಲ್ಲ. ಈ ಸ್ವಾತಂತ್ರ್ಯವನ್ನು ನನ್ನ ಹೆಂಡತಿಗೆ ಕೊಡದೆ ನಾನು ನಂಜಿಯೊಂದಿಗೆ ಸುಖಿಸುವುದು ನೈತಿಕವಾಗಿ ಸಮರ್ಥನೀಯವಲ್ಲ ಎಂಬ ನಿಲುವು ನನ್ನ ಸುಪ್ತ ಪ್ರಜ್ಞೆಯಲ್ಲಿರಬಹುದು. (ನಿರಂತರ : ೨೦೦೫ : ಪು: ೮೧) ಎನ್ನುವಲ್ಲಿ ಅವರ ಆತ್ಮ ವಿಮರ್ಶೆಯ ವಿಶ್ಲೇಷಣೆಯ ಜೊತೆಗೆ ಸ್ತ್ರೀ ಪರವಾದ ನಿಲುವು ವ್ಯಕ್ತವಾಗಿದೆ. ಇಲ್ಲಿ ಈಡೇರದ ಗುಪ್ತ ಬಯಕೆಗಳಿಂದಾಗಿ ಪರಿತಪಿಸುವ ನಾಯಕನ ತಳಮಳ, ತಲ್ಲಣಗಳು, ಅವನನ್ನು ಕಾಡುವ ನೈತಿಕ ಪ್ರಜ್ಞೆ, ಇವೆಲ್ಲ ಪ್ರೀತಿ ಪ್ರೇಮದ ಸಂದರ್ಭದಲ್ಲಿ ಮಧ್ಯಮ ವರ್ಗದ ಜನರ ಮನೋಭಾವವನ್ನು ವ್ಯಕ್ತಪಡಿಸುವ ಚಿತ್ರಣವಿದೆ. ಈ ಕಥೆಯಲ್ಲಿ ನಿರೂಪಿತವಾಗಿರುವ ವಿವಿಧ ಬಗೆಯ ಜೀವಿಗಳ ಮನಸ್ಸನ್ನು ಬಿಚ್ಚಿಡುವ ಘಟನೆಗಳ ಸಮೃದ್ಧವಾದ ವಿವರಣೆಗಳು, ಪಾತ್ರಗಳು, ಅವುಗಳ ವರ್ತನೆಗಳು ಸುಮ, ಮುದುಕ, ಅಪಘಾತದ ಸಂದರ್ಭದ ವಿವರಗಳು, ತಮ್ಮಿಬ್ಬರ ದಾಂಪತ್ಯ ಬದುಕನ್ನು ಕುರಿತು ಹೇಳುವ ನವ್ಯ ಕಾವ್ಯದ ನಿರೂಪಣೆ, ಈ ಎಲ್ಲದರಿಂದ ಕಥೆಗೆ ಘಟನೆಗಳ ಪಾತ್ರಗಳ ಭಾರ ಹೇರಿದಂತೆನಿಸದರೂ ಅಂತ್ಯದಲ್ಲಿ ಬರುವ ವಿಶ್ಲೇಷಣೆ ಆತ್ಮ ವಿಮರ್ಶೆಯ ನಿಲುವು, ಎಲ್ಲರಲ್ಲೂ ಇರಬಹುದಾದ ಅಂಶಗಳೆಂದು ಸ್ಪಷ್ಟ ಪಡಿಸುವ ಲೇಖಕರು ಕೊನೆಗೆ ಹೇಳುವ ಮಾತೆಂದರೆ "ನಿಮ್ಮ ಕನ್ನಡಿಯಲ್ಲಿ ತನ್ನ ಪ್ರತಿಬಿಂಬ ಕಂಡರೆ ಎಳ್ಳಷ್ಟು ಆಶ್ಚರ್ಯ ಪಡಬೇಕಿಲ್ಲ" ಎನ್ನುವಲ್ಲಿ ಸ್ಪಷ್ಟವಾಗುತ್ತದೆ (ಅದೇ ಪುಟ : ೮೧). ಇದೆ ಕಥೆಯ ವಿಶಿಷ್ಟತೆ, ಅದರಿಂದಲೇ ಓದುಗನಿಗೆ ಕಥೆ ಮೆಚ್ಚುಗೆಯಾಗುತ್ತದೆ.

'ಕವಿತಾ' ಕತೆಯಲ್ಲಿ ಕಥೆಗಾರರು ಪ್ರೀತಿಯ ಮತ್ತೊಂದು ಮುಖವನ್ನು ಬಿಂಬಿಸುತ್ತಾರೆ. ಕಥಾವಸ್ತು ವಿಷಯದ ನೆಲೆಯಿಂದ ನೋಡುವಾಗ ಸಾಮಾನ್ಯ ವಸ್ತು ವಿಷಯ ಎನಿಸಿದರೂ ಕೂಡ ಕಥೆಗಾರರಲ್ಲಿ ವ್ಯಕ್ತವಾಗಿರುವ ಮಾನವೀಯತೆ ಮಿಡಿತವೇ ಪ್ರಮುಖವಾಗಿ ಕತೆ ಓದುಗರಿಗೆ ಆಪ್ತವಾಗಿ ಬಿಡುತ್ತದೆ. ಮನೆ ಕೆಲಸದಾಕೆಯಾದ ನಂಜಮ್ಮ ಅವಳ ಬದುಕು, ತಾನು ಕಷ್ಟ ಪಟ್ಟರೂ ಇತರರ ಕಷ್ಟಕ್ಕೂ ಮಿಡಿಯುವ ಅವಳ ವಿಶಾಲ ಮನಸ್ಸು, ಆಕೆಗೆ ನೆರವಾಗುವ ಮೂಲಕ ಬದುಕು ಕಟ್ಟಿಕೊಳ್ಳಲು ಬರುವ ಹಳ್ಳಿಯ ಪುಟ್ಟಗೌರಿ. ವಯೋ ಸಹಜವಾದ ಆಸೆಗಳಿಗೆ ಒಳಗಾಗುವ ಆಕೆಯ ವರ್ತನೆಗಳು, ಸಿನಿಮಾ ಹುಚ್ಚು, ಮನೆಯೊಡತಿಯ ಬ್ರಾ ಕದ್ದು ತೊಡುವ ಅವಳ ಹಂಬಲ ಇವುಗಳಲ್ಲಿ ವ್ಯಕ್ತವಾಗುತ್ತದೆ. ಕದ್ದು ಮುಚ್ಚಿ ಎದುರು ಮನೆ ಕಾಲೇಜು ಯುವಕನ ಜೊತೆ ಸಿನಿಮಾಕ್ಕೆ ಹೋದಾಗ ಸಿಕ್ಕಿ ಬಿದ್ದು ಹಳ್ಳಿ ಸೇರುತ್ತಾಳೆ. ಮದುವೆಯಾದರೂ ಅವಳ ಹಿಂದಿನ ವರ್ತನೆಗಳು ಗಂಡನಿಗೆ ತಿಳಿದು ಸಾಂಸಾರಿಕ ಬದುಕಿನಲ್ಲಿ ಇರಸು ಮುರುಸು ಉಂಟಾಗುತ್ತದೆ. ಅನುಮಾನ, ತಪ್ಪು ಗ್ರಹಿಕೆಯಿಂದ ಹೊರ ಬಂದು ಆಕೆ ಗರ್ಭಿಣಿಯಾಗಿ ಹೆಣ್ಣು ಮಗುವಿಗೆ ಜನ್ಮ ನೀಡುತ್ತಾಳೆ. ಆ ಮಗುವಿಗೆ ಕಥೆಗಾರರು ಕೊಡುವ ಹೆಸರು 'ಕವಿತಾ' ಎಂಬುದಾಗಿದೆ.

ತನ್ನ ಕಾವ್ಯ ಸ್ಫೂರ್ತಿಯಾದ ಪುಟ್ಟ ಗೌರಿಯ ಪಾತ್ರ ವಾಮನನ ಕಾವ್ಯ ಮೀಮಾಂಸೆಯ ಮಾತಾದ 'ಕಾವ್ಯ ಗ್ರಾಹ್ಯವಾಗುವುದು ಅಲಂಕಾರದಿಂದ, ಸೌಂದರ್ಯವೆ ಅಲಂಕಾರ' ಎಂಬುದಕ್ಕೆ ಜೀವಂತ ನಿದರ್ಶನವಾಗಿ ಕವಿಗೆ ಸ್ಫೂರ್ತಿಯಾಗುತ್ತಾಳೆ. ಪುಟ್ಟ ಗೌರಿಯ ಬೆಳವಣಿಗೆ ಬದಲಾವಣೆಗಳನ್ನು ಕಾವ್ಯದ ಆತ್ಮ, ವಕ್ರೋಕ್ತಿ, ಕಲೆಯ ಸೃಷ್ಟಿ ಮತ್ತು ಮಾನಸಿಕ ದೂರ, ಧ್ವನಿ ಮೊದಲಾದ ವಿಶ್ಲೇಷಣೆಗಳಿಗೆ ಆಕೆ ಹೋಲಿಕೆಯಾಗುವುದರ ಮೂಲಕ ಕವಿ ಮನಸ್ಸನ್ನು ವ್ಯಾಪಿಸುತ್ತಾಳೆ. ಇಲ್ಲಿಂದೀಚೆಗಿನ ಪುಟ್ಟ ಗೌರಿಯ ಬದುಕಿಗೆ ಸ್ಪಂದಿಸುವ ಮೂಲಕ ಕವಿಯ ಮಾನವೀಯತೆ ಸ್ಪಷ್ಟವಾಗುತ್ತದೆ. ಅವಳ ಸಾಂಸಾರಿಕ ಬದುಕಿನಲ್ಲಿ ಬಿರುಕುಂಟಾದಾಗ, ಅವಳ ಹೆರಿಗೆ ಬೇನೆಯ ಸಮಯದಲ್ಲಿ ತಮ್ಮ ರಕ್ತವನ್ನು ದಾನ ಮಾಡುವ ಮೂಲಕ ಪುಟ್ಟಗೌರಿಯನ್ನು ಉಳಿಸಿಕೊಳ್ಳಬೇಕೆಂಬ ಅವರ ಕಾಳಜಿ ಜೀವಪರವಾಗಿದೆ. ಕಾವ್ಯ ಹುಟ್ಟುವುದು ಮಾನವ ಪ್ರೀತಿಯ ನೆಲೆಯಾದ ಹೊಸ ಬೆಳಕಲ್ಲಿ ಎನ್ನುವ ಮೂಲಕ ಪುಟ್ಟಗೌರಿಯ ಪಾತ್ರದ ಮೂಲಕ ಕಾವ್ಯ ಮೀಮಾಂಸೆಯ ವಿಮರ್ಶೆಯಲ್ಲಿ ಸ್ಪಷ್ಟವಾಗುವುದೇನೆಂದರೆ ಕಾವ್ಯ ಹುಟ್ಟುವುದು, ಅವರ ಸಾರ್ಥಕತೆ ಇರುವುದು. ಮಾನವೀಯತೆ ಮತ್ತು ಪ್ರೀತಿಯ ನೆಲೆಯಲ್ಲಿ ಎಂಬುದನ್ನು ಸ್ಪಷ್ಟ ಪಡಿಸುವ 'ಕವಿತಾ' ಕಥೆ ವಿವಿಧ ಅರ್ಥ ವಿಸ್ತಾರಗಳನ್ನು ಹೊಂದಿ ಹೊಸ ಕಾವ್ಯದ ಸಂಕೇತವಾಗಿ ಮೂಡಿರುವ ಕಥೆಯೆಂದು ಗುರುತಿಸಬಹುದು.

ಸಾಹಿತ್ಯ ಮತ್ತು ಮಾನವೀಯ ಪ್ರೀತಿ ಇವುಗಳ ಬಿಜ್ಞಾಸೆಯಾಗಿ ಬರುವ 'ದಾಖಲೆ' ಮತ್ತು 'ನಾನು ಕೊಂದ ಯುವಕ' ಕಥೆಗಳಲ್ಲಿ ವ್ಯಕ್ತವಾಗುವ ವಿಷಯಗಳು ಎಂದರೆ 'ದಾಖಲೆಯಲ್ಲಿ ಕವಿ ಮತ್ತು ಕ್ರಾಂತಿಕಾರಿ ಸತ್ಯ ಇವೆರಡು ಪಾತ್ರಗಳ ಮುಖಾಮುಖಿಯೊಂದಿಗೆ ಸಾಹಿತ್ಯ ಮತ್ತು ಕ್ರಿಯೆಗಳ

ಮುಖಾಮುಖಿಯಾಗುತ್ತವೆ. ದೇವರು ಧರ್ಮ ಭಜನೆಗಳಲ್ಲಿ ನಂಬಿಕೆ ಇಲ್ಲದ ಸತ್ಯನಿಗೆ ಈ ಭೂಮಿಯ ಬಗ್ಗೆ ಇಲ್ಲಿನ ಜೀವಿಗಳ ನೋವು, ನಲಿವು ಪ್ರೇಮ ನಿರಾಶೆಗಳ ಬಗ್ಗೆ ಕಾಳಜಿ ಇವೆ. ಆಧ್ಯಾತ್ಮದ ಬಗೆಗಿನ ಅವನ ನಿಲುವೇನೆಂದರ ಅದೆಲ್ಲ ಭ್ರಮಾಧೀನರಿಗೆ ಸರಿ, ಬದುಕನ್ನು ಎದುರಿಸುವ ತಾಕತ್ತಿಲ್ಲದೆ, ಹೇಡಿಗಳಾಗಿ ತಲೆ ತಪ್ಪಿಸಿ ಕೊಂಡು ಓಡುವವರಿಗೆ ಸರಿ' ಎನ್ನುತ್ತಾನೆ. (ನಿರಂತರ ೨೦೦೪ ; ದಾಖಲೆ ; ಪುಟ ; ೪೪) ಬದುಕಿನಲ್ಲಿನ ಅಸಂಗತಿಗಳು, ಭೀಬತ್ಸಗಳೇ ಪ್ರಮುಖ ಎನಿಸುತ್ತವೆ. ಈ ಬ್ರಹ್ಮಾಂಡದಲ್ಲಿ ಆ ಪರಮಾತ್ಮನ ಲೀಲಾ ವಿನೋದ ನಾಟಕ ಎಂಬ ಮಾತಿಗೆ ಸತ್ಯನ ಉತ್ತರವೇನೆಂದರೆ, "ಹಾಗಿದ್ದರೆ ಸರಿ ಬಿಡಿ ಈ ಜಗತ್ತಿನ ಎಲ್ಲ ಅನ್ಯಾಯ, ಅನಾಚಾರಗಳಿಗೂ, ಕಷ್ಟ ಕೋಟಲೆಗಳಿಗೂ, ರೋಗ ರುಜಿನಗಳಿಗೂ, ಶೋಷಣೆ ಪೀಡನೆಗಳಿಗೂ ಆ ದೇವರೇ ಜವಾಬ್ದಾರನೆಂದು" ಆಚಾರ್ಯರ ಜೊತೆ ವಾದಿಸುತ್ತಾನೆ. ಸತ್ಯದ ಹುಡುಕಾಟಕ್ಕೆ ತೊಡಗಿದ ಸತ್ಯ ತುರ್ತು ಪರಿಸ್ಥಿತಿಯಲ್ಲಿ ಜೈಲು ಸೇರಿ ಕೊನೆಗೆ ಸ್ನೇಹಿತನ ಉಪದೇಶದಿಂದಾಗಿ ಹೊರ ಬಂದು ವೈದ್ಯನಾಗಿ ಬಡವರ ಸೇವೆಯಲ್ಲಿ ತೊಡಗುತ್ತಾನೆ.

ಹಳ್ಳಿಯ ಹೊಲಸು ರಾಜಕೀಯ, ದಬ್ಬಾಳಿಕೆ ದೌರ್ಜನ್ಯಗಳಿಗೆ ಸೆಟೆದು ನಿಂತ ಸತ್ಯನ ಕೊಲೆಯಾಗುತ್ತದೆ. ಅನ್ಯಾಯದ ವಿರುದ್ಧ ದನಿ ಎತ್ತುವ ಸತ್ಯನ ಅಂತ್ಯ ದುರಂತವಾಗುತ್ತದೆ. ಕಥೆಯಲ್ಲಿ ವ್ಯಕ್ತವಾಗುವುದು ಸಾಹಿತ್ಯ ಮತ್ತು ಬದುಕು, ವಾಸ್ತವ ಬದುಕು ಮತ್ತು ಸಾಹಿತ್ಯ ಇವುಗಳ ನಡುವಿನ ಸಂಬಂಧದ ಕಂದರ ಹೆಚ್ಚಾಗಿದೆ. ಸತ್ಯನ ಸಾವು ಕವಿಗೆ ದುಃಖವನ್ನು ತರುತ್ತದೆ. ಆದರೂ ಮನಸ್ಸಿಗೆ ಹೆಚ್ಚಿನ ನೆಮ್ಮದಿಯನ್ನು ತರುವುದು ಸಾಹಿತ್ಯದ ಒಂದು ಮುಖ್ಯವಾದ ನಿಲುವು ಆಗಿದೆ.

'ನಾನು ಕೊಂದ ಯುವಕ' ಕಥೆಯಲ್ಲಿ ಬರುವ ಚಂದ್ರು ಬಂಡಾಯಗಾರ, ಬಂಡಯ ಕಾವ್ಯ ಬರೆಯುವ ಮೂಲಕ ಜನ ಮೆಚ್ಚುಗೆ ಗಳಿಸಿರುತ್ತಾನೆ. ಆತನ ಬಂಡಾಯದ ಧ್ವನಿಯ ಹಿಂದೆ ಅವನ ಅಂತರಂಗದಲ್ಲಿ ಅಡಗಿದ ಸತ್ಯವಾಗಿರುವ ಅವನ ಹುಟ್ಟಿನ ಗುಟ್ಟು ಇದೆ. ಚಂದ್ರು ಹರಿಜನ ಹೆಣ್ಣಿನಲ್ಲಿ ಶ್ರೀಮಂತ ಜಮೀನ್ದಾರನಿಂದ ಹುಟ್ಟಿದವನು. ಗಂಡು ಮಗುವಿನ ಹಂಬಲಕ್ಕೆ ಪ್ರೇರಕವೆಂಬಂತೆ ಹರಿಜನರ ಹೊಟ್ಟೆಯಲ್ಲಿ ಹುಟ್ಟಿದ ಚಂದ್ರು ನಿಜವಾದ ತಂದೆಯ ಹೆಂಡತಿಯ ಹೆಣ್ಣು ಮಗುವಿನ ಜಾಗಕ್ಕಿಟ್ಟು ಆತನು ಮೇಲುಜಾತಿಗೆ ಸೇರುತ್ತಾನೆ. ವಿದ್ಯಾರ್ಥಿ ದೆಸೆಯಿಂದಲೇ ಗೆಳೆಯರ ಸಹವಾಸದಿಂದ ಬಂಡಾಯಗಾರನಾಗಿದ್ದವನು ಜಾತಿ ಮತ, ದೇವರು ಶ್ರೀಮಂತಿಕೆಗಳನ್ನು ಧಿಕ್ಕರಿಸುವ ಮನೋ ಬಲ ಹೊಂದಿದ್ದವನು. ತಂದೆಯ ಸಾವಿನ ನಂತರ ತಂದೆಯ ಅನೈತಿಕ ಸಂಬಂಧ ತನ್ನ ಹುಟ್ಟಿನ ರಹಸ್ಯ ತಿಳಿದುಕೊಂಡು ತನ್ನ ಉದ್ಯೋಗಕ್ಕೆ ರಾಜೀನಾಮೆ ನೀಡಿ ಹಳ್ಳಿಗೆ ತೆರಳಿ ತನ್ನವರ ಉದ್ಧಾರಕ್ಕಾಗಿ ಹೆಣಗಾಡುತ್ತಾನೆ. ಇದಕ್ಕೆ ತನ್ನವರಿಂದಲೇ ವಿರೋಧ ವ್ಯಕ್ತವಾಗುವುದು. ಸ್ವತಃ ದಲಿತರೇ ತಮ್ಮ ಬದುಕಿನ ಸುಧಾರಣೆಗೆ ಒಪ್ಪದೆ ಹೋಗುವುದು, ತಂದೆಯ ಆಸ್ತಿ ವಿಷಯದಲ್ಲಿ ಅಕ್ಕ, ಭಾವನ, ವಿರೋಧ ಆಸ್ತಿ ದಾಖಲೆಗಳನ್ನು ಪಡೆದು ಹಳ್ಳಿಯಿಂದ ಹೊರ ಹೋಗಲು ನಿರ್ಧರಿಸಿದಾಗ, ಆತನ ಹೆಣ ಪಾಳುಗುಡಿಯ

ಅರಳಿ ಮರದ ಕೊಂಬೆಯಲ್ಲಿ ನೇತಾಡುವುದು, ಅದು ಕೊಲೆಯೋ ಆತ್ಮಹತ್ಯೆಯೋ ತಿಳಿಯದೆ ಹೋಗುವ ಚಿತ್ರಣವಿದೆ.

ಚಂದ್ರನ ಸಾವಿಗೆ ಕವಿ ತಾನು ಕಾರಣ ಎಂಬ ಪಾಪ ಪ್ರಜ್ಞೆ ಕಾಡುವುದಕ್ಕೆ ಕಾರಣ, ಚಂದ್ರು ತನ್ನ ಜನ್ಮ ರಹಸ್ಯ ತಿಳಿಸಿ ಮಾರ್ಗದರ್ಶನ ಕೋರಿ ಕವಿಯ ಬಳಿ ಬಂದಾಗ ಅವನಿಗೆ ಎರಡು ಆಯ್ಕೆಗಳನ್ನು ಕೊಡುತ್ತಾರೆ. ಒಂದು ನಿಜವನ್ನು ಧೈರ್ಯವಾಗಿ ಒಪ್ಪಿಕೊಂಡು ಅದರ ಎಲ್ಲಾ ಪರಿಣಾಮಗಳಿಗೆ ಮುಖಾಮುಖಿಯಾಗಿ ನಿಲ್ಲುವುದು, ಎರಡನೆಯದು ನಿಜವನ್ನು ಮುಚ್ಚಿಟ್ಟು ಜಾಣತನದಿಂದ ತಾಳ್ಮೆಯಿಂದ ಸುಭದ್ರ ಜೀವನ ನಡೆಸುವುದು. ಮುಖವಾಡದ ಜೊತೆ ಎಂದಾಗ ಚಂದ್ರು ಮೊದಲ ಸಲಹೆಯನ್ನು ಒಪ್ಪಿ ನೇರ, ಪ್ರಾಮಾಣಿಕ ದಾರಿಯಲ್ಲಿ ಸಾಗಿ ದುರಂತ ಕಾಣುತ್ತಾನೆ. ಕವಿಯ ಎರಡನೆ ಸಲಹೆಯನ್ನು ಸ್ವೀಕರಿಸಿ ತಾನು ಪ್ರೀತಿಸಿದ ಜಾನಕಿಯೊಂದಿಗೆ ಸುಖ ಸಂಸಾರ ಸಾಗಿಸಬಹುದಾಗಿತ್ತು. ಕವಿಗೆ ಕಾಡುವ ಪಾಪಪ್ರಜ್ಞೆ ಮತ್ತು ತಾನೀಗ ನಿಜವಾಗಿ ಬದುಕಿದ್ದೇನೆಂಬ ಭ್ರಮೆಯಿಂದ ಹೊರ ಬರುವುದು. ಈ ಕಥೆಯಲ್ಲಿ ಮುಖ್ಯವಾಗಿ ವ್ಯಕ್ತವಾಗುವ ಅಂಶವೇನೆಂದರೆ ಚಂದ್ರುವಿನ ಗುಣಕ್ಕೆ ಹೊಂದಿಕೊಂಡಂತೆ ಸತ್ಯವನ್ನು ಒಪ್ಪಿಕೊಂಡು ಚಂದ್ರು ದುರಂತ ಅಂತ್ಯ ಕಾಣುವುದು, ದಲಿತರಿಗಾಗುವ ಸ್ಥಿತಿಯೊಂದಿಗೆ ಬಂಡಾಯಕ್ಕೆ ಆಗುವ ಹಿನ್ನೆಡೆಯನ್ನು ವ್ಯವಸ್ಥೆಗೆ ಸಂದ ಜಯವನ್ನು ನಿರೂಪಿಸುವುದರ ಜೊತೆಗೆ ವ್ಯವಸ್ಥೆಯ ಭಾಗವಾಗಿರುವ ಕವಿಗೆ ತನ್ನ ಈವರೆಗಿನ ಭ್ರಮೆಯಿಂದ ಹೊರಬರುವುದು. ಇದರಲ್ಲಿ ವ್ಯವಸ್ಥೆಯ ಎದುರು ಬಂಡಾಯ ನಿಷ್ಕ್ರಿಯೆಯಾಗುತ್ತವೆಂದು ಹೇಳುವ ಸಾಹಿತ್ಯದ ಹಪಹಪಿಸುವಿಕೆಯಲ್ಲಿ ಕತೆ ಅಂತ್ಯವಾಗುತ್ತದೆ.

'ಯಾಕೆಂದರೆ' ಕಥೆಯಲ್ಲಿ ಬರುವ ಉಮಾ ಒಬ್ಬ ಭಗ್ನ ಪ್ರೇಮಿಯಲ್ಲ, ಅವಳದು ಭಗ್ನ ಪ್ರೇಮವೂ ಅಲ್ಲ. ತನ್ನ ಕೈ ಹಿಡಿಯುವ ಸರದಾರನ ನಿರೀಕ್ಷೆಯಲ್ಲಿರುವ ಉಮಾ ಬ್ರಾಹ್ಮಣ ಸಮುದಾಯದ ಹೆಣ್ಣು ಮಕ್ಕಳ ದಯನೀಯವಾದ ಶೋಚನೀಯ ಸ್ಥಿತಿಯ ಸಂಕೇತವಾಗುತ್ತಾಳೆ. ಬ್ರಾಹ್ಮಣ ಸಮುದಾಯದ ಮಧ್ಯಮ ವರ್ಗದ ಹೆಣ್ಣು ಮಕ್ಕಳಿಗೆ ಮದುವೆಯಾಗುವುದು ನಿಧಾನ ಎಂಬುದು ಸಂಪ್ರದಾಯಕ ಕಟ್ಟಳೆಗಳೊಂದಿಗೆ ಬದುಕುತ್ತಾ ತವರಿನ ಕೊಂಡಿ ಕಳಚಿಕೊಂಡು ಬದುಕಲು ತನ್ನ ಕೈ ಹಿಡಿಯುವ ಮೂಲಕ ತವರಿನ ಕೊನೆಯ ಅಂಕಕ್ಕಾಗಿ ಕಾದಿರುವಾಗ ಇಲ್ಲಿ ಬರುವ ಕಥಾನಾಯಕನ ಅಸಹಾಯಕತೆ, ಏನೆಂದರೆ 'ನೀವೆ ಏಕೆ ಅವಳ ಕಥೆಗೆ ಕಥಾನಾಯಕನಾಗಿ, ಅವಳ ವ್ಯಥೆಗೆ ಪೂರ್ಣ ವಿರಾಮವಾಗಬಾರದು? ಎಂದು ಕೇಳಿದಾಗ ಆತ ಕೊಡುವ ಉತ್ತರ 'ನನಗೇನೋ ಇಷ್ಟವೇ? ಆದರೆ ನನ್ನ ಅಪ್ಪ ಅಮ್ಮ ಒಪ್ಪುವುದಿಲ್ಲ. ಯಾಕೆಂದರೆ ಉಮಾ ಬ್ರಾಹ್ಮಣಳೇ ಆದರೂ ನಮ್ಮ ಒಳಪಂಗಡಕ್ಕೆ ಸೇರಿದವಳಲ್ಲ. ಜೊತೆಗೆ ಅವಳ ತಂದೆ ಅಂಥ ಸ್ಥಿತಿವಂತರೂ ಅಲ್ಲ, ಅದೂ ಅಲ್ಲದೆ ನನಗೂ ತಂಗಿಯರಿದ್ದಾರೆ, ಅವರಿಗೂ ಮದುವೆಯಾಗಬೇಕಲ್ಲ, (ನಿರಂತರ ; ೨೦೦೫ ; ಪುಟ ; ೨೯) ಎನ್ನುವ ಮೂಲಕ ತನ್ನ ಅಸಹಾಯಕತೆಯ ಜೊತೆಗೆ ಒಂದು ಸಮುದಾಯದ ಕ್ರೂರ ವ್ಯವಸ್ಥೆಯನ್ನು ಕುರಿತ ವ್ಯಂಗ್ಯ ಇಲ್ಲಿ ಸಂಯಮಪೂರ್ಣವಾದ ರೀತಿಯಲ್ಲಿಯೇ ವ್ಯಕ್ತವಾಗಿರುವುದನ್ನು ಕಾಣಬಹುದು.

ಕೆಲವೊಮ್ಮೆ ವಿವೇಕಯುತವಾದ ನಡವಳಿಕೆ, ಪ್ರಜ್ಞಾಪೂರ್ವಕವಾದ ಹೆಜ್ಜೆಗಳ ಮೂಲಕ ಪ್ರೇಮ ಮುರಿದು ಹೋಗುವ ಬದಲು ಅರಳುತ್ತವೆ ಎಂಬುದನ್ನು ಒಂದು ಪ್ರೇಮದ ಕಥೆ'ಯ ಲಕ್ಷ್ಮಿಯ ಪ್ರೇಮದ ವಿಷಯದಲ್ಲಿ ಕಾಣಬಹುದಾಗಿದೆ. ಇದರಲ್ಲಿ ಬರುವ ಲಕ್ಷ್ಮಿ ಪ್ರೀತಿಸಿ ಮದುವೆಯಾಗಿ ಒಂದು ಮಗುವಿನ ತಾಯಿಯಾಗಿರುತ್ತಾಳೆ. ಅವರಿಬ್ಬರಲ್ಲಿ ಪ್ರೀತಿಯ ಕಾವು ಕಾಲಾನಂತರದಲ್ಲಿ ಕಡಿಮೆಯಾಗುತ್ತದೆ. ತಾನು ಪ್ರೀತಿಸಿ ಮದುವೆಯಾದ ಅನ್ಯಜಾತಿಯ ಶಂಕರ್ ನಾಯರ್ ಖಿನ್ನನಾಗಿ ಅಂತರ್ಮುಖಿಯಾಗಿದ್ದ. 'ಹತ್ತು ವರ್ಷಗಳ ಅವರ ದಾಂಪತ್ಯ ಜೀವನದ ನಂತರ ಪ್ರೀತಿ ಒಂದು ಸವಕಲು ನಾಣ್ಯವಾಗಿದೆ. ಕಾಲದ ಈ ಕ್ರೂರ ಪ್ರವಾಹದಲ್ಲಿ ಎಂಥೆಂಥ ಸುಮಧುರ ಭಾವನೆಗಳೂ ಹೇಗೆ ಗೊಡ್ಡಾಗಿ ಬಿಡುತ್ತವೆ ನೋಡು. (ನಿರಂತರ : ೨೦೦೫ : ಪುಟ : ೪೪) ಎನ್ನುವ ಮೂಲಕ ತನ್ನ ಗಂಡ ತನ್ನಿಂದ ದೂರವಾಗಲು ಕಾರಣವಾದ ಎಲ್ಲಾ ಕಥೆಯನ್ನು ಸಹಪಾಠಿಯೊಬ್ಬನ ಬಳಿ ತೋಡಿಕೊಳ್ಳುವಲ್ಲಿ ವ್ಯಕ್ತವಾಗುತ್ತವೆ. ಮಾರ್ಗಿ ಎಂಬ ಹುಡುಗಿ ಮತ್ತು ನಾಯರ್‌ನ ಆಪ್ತವಾದ ನಡವಳಿಕೆ ಮಾರ್ಗಿ ಸಹಪಾಠಿಯಿಂದಲೇ ಅತ್ಯಾಚಾರಕ್ಕೊಳಗಾಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಅದರಿಂದ ನಾಯರ್ ಆರೋಪಿಯಾಗುತ್ತಾನೆ. ಮಾರ್ಗಿಯ ಹೇಳಿಕೆಯಿಂದಾಗಿ ಆರೋಪದಿಂದ ಮುಕ್ತನಾದರೂ ಮಾನಸಿಕವಾಗಿ ಖಿನ್ನವಾಗಿ ಹೆಂಡತಿಯಿಂದ ದೂರಾಗುವ ಮೂಲಕ ಲಕ್ಷ್ಮಿ ಬದುಕಿನ ದಾರಿ ಹಳಿ ತಪ್ಪುತ್ತದೆ. ಕೊನೆಗೆ ಆತ್ಮೀಯವಾದ ಸಹಪಾಠಿಯ ವಿವೇಕಾಯುತವಾದ ಮಾತುಗಳೆಂದರೆ 'ನೋಡು ಲಕ್ಷ್ಮಿ ನನ್ನ ನಿನ್ನ ಸಂಬಂಧ ಮಾರ್ಗಿ ನಾಯರ್ ಸಂಬಂಧದಂತೆ ದುರಂತವಾಗುವುದು ನನಗಿಷ್ಟವಿಲ್ಲ'. ಏಕೆಂದರೆ ಅದರಿಂದ ಕೊನೆಗೆ ನೋವು, ನಿರಾಸೆ, ಅಪಮಾನವೇ ಹೆಚ್ಚು' (ನಿರಂತರ ;  ಪು ; ೫೨) ಎಂದು ಹೇಳುವ ಮಾತುಗಳು ಅವರಿಬ್ಬರ ಸಂಬಂಧದ ಬಗೆಗಿನ ಗುಮಾನಿಗೆ ತೆರೆ ಎಳೆಯುತ್ತದೆ. 'ನಿನ್ನ ಹೃದಯದ ತುಂಬ ಇನ್ನೂ ಬೇಕಾದಷ್ಟು ಪ್ರೀತಿಯಿದೆ ಆಸೆಗಳಿವೆ, ಅವು ಅಡ್ಡ ದಾರಿ ಹಿಡಿಯವುದು ಬೇಡ, ನಿನ್ನ ಮಗನನ್ನು ವಾಪಸ್ ನಿನ್ನ ಬಳಿಗೆ ಕರೆಸಿಕೋ' ನಾಯರ್ ಜೊತೆ ಹೊಸ ಬದುಕು ಪ್ರಾರಂಭಿಸು ಎಂದು ಹೇಳುವ ಮೂಲಕ ಪ್ರೇಮದ ಕಥೆ ಎಡವದೇ ಎಚ್ಚೆತ್ತುಕೊಂಡು ಸರಿ ದಾರಿಯಲ್ಲಿ ಸಾಗುವಂತೆ ಅಂತ್ಯ ತರುತ್ತಾರೆ. ವಿವೇಕ ಕಳೆದುಕೊಂಡು ದುಡುಕಿ ದುರಂತದ ಕಡೆಗೆ ಸಾಗುವ ಇಂಥ ಹೆಣ್ಣುಗಳ ಹೃದಯಕ್ಕೆ ಹತ್ತಿರವಾಗುವ, ವಿವೇಚಾನಯುತ ಮನಸ್ಸುಗಳ ಅವಶ್ಯಕತೆಯನ್ನು ಒತ್ತಿ ಹೇಳುವ ಈ ಕಥೆ ಲಕ್ಷ್ಮಿಯ ಪ್ರೇಮ ಭಗ್ನ ಪ್ರೇಮವಾಗದೆ, ಸುಖಾಂತ ಕಾಣುವಲ್ಲಿ ಅರ್ಥ ಪಡೆದಿದೆ ಎಂದು ಹೇಳಬಹುದು.

'ಚಂದನದ ಗೊಂಬೆ' 'ಘಾತ' 'ವಿಹಾರ' ಬೆಳ್ಳಿ ಹಿಡಿಕೆ' ಈ ಕಥನಗಳಲ್ಲಿ ಪ್ರೀತಿಯ ಜೊತೆಗೆ ದಾಂಪತ್ಯ ಬದುಕು, ಇವುಗಳ ಜೊತೆಗೆ ಬದುಕಿನ ಆಘಾತಗಳ ಬಗ್ಗೆಯು ಅವರ ಚಿಂತನೆ ಸಾಗಿದೆ ಎಂಬುದು ವ್ಯಕ್ತವಾಗುತ್ತದೆ. ಮುರಿದು ಹೋದ ದಾಂಪತ್ಯ ಬದುಕಿನ ಸಂಕೇತವಾಗಿ ಬರುವ ಕೈ ಮುರುಕ ಚಂದನದ ಗೊಂಬೆ ಸರೋಜಳನ್ನು ಅಣಕಿಸುವಂತೆ ಕಾಣುವುದು. ತನ್ನ ಹಿಂದಿನ ಬದುಕಿನ ನೆನಪುಗಳೊಂದಿಗೆ ತಾಳೆ ಹಾಕುತ್ತಾ ಇಂದಿನ ಬದುಕನ್ನು ಪ್ರತಿನಿಧಿಸುವ ಗೊಂಬೆಯ ಚಿತ್ರಣ ಕಥೆಯ

ಹೊಳಪಿಗೆ ಕಾರಣವಾಗುತ್ತದೆ. 'ಬೆಳ್ಳಿ ಓಡಿಕೆ' ಘಾತದಲ್ಲಿ ಬರುವ ಕಥೆಯ ವಿವರಗಳು ಮಾನಸಿಕ ಸಿದ್ದತೆ, ಮನುಷ್ಯನ ಮೇಲೆ ಮನಸ್ಸಿನ ಹಿಡಿತಗಳನ್ನು ಕುರಿತ ಚಿಂತನೆಯನ್ನು ತರುತ್ತದೆ.

'ಒಬ್ಬಂಟಿಗಳು' ಕಥೆ ಮನುಷ್ಯನ ಒಂಟಿತನದ ಕರಾಳತೆಯನ್ನು ಚಿತ್ರಿಸುತ್ತಾ ಒಂಟಿತನ ಎಂಥ ಕರಾಳ ಕ್ರೂರ ಕಾರ್ಯಕ್ಕೂ ಒತ್ತಾಸೆಯಾಗುತ್ತದೆಂಬುದನ್ನು ವಿವರಿಸುವಲ್ಲಿ ಕಥೆಗಾರರ ನೇರ ನಿರೂಪಣೆಯ ಬದಲಿಗೆ ಸಂಕೇತಗಳಿಂದ ಕೂಡಿದ್ದ ಈ ಕಥೆ ಓದುಗರನ್ನು ತಲುಪಲು ಸ್ವಲ್ಪಮಟ್ಟಿಗೆ ಅಸಮರ್ಥವಾಗಿದೆ ಎಂದು ಹೇಳಬಹುದು. ಕಥೆಗಾರರ ನಿರೂಪಣಾ ಶೈಲಿಯೇ ಇದಕ್ಕೆ ಕಾರಣವಾಗಿದೆ.

'ಹೀಗೊಂದು ಪ್ರೇಮ ಕಥೆ' ಕಾದಂಬರಿಯಲ್ಲಿ ಬರುವ ಕಥೆ ವಸ್ತು ವಿಷಯ, ಅವರ ನಿರೂಪಣಾ ಶೈಲಿ, ಕಾದಂಬರಿಯ ನಾಯಕನ ಪ್ರೇಮ ಕಥೆ, ಅದಕ್ಕಾಗಿ ಆತ ಎದುರಿಸಬೇಕಾದ ಅಡ್ಡಿ ಆತಂಕಗಳು, ಇವರ ಪ್ರೇಮವನ್ನು ತಡೆಯುವ ಸಾಮಾಜಿಕ ವ್ಯವಸ್ಥೆ, ಕೌಟುಂಬಿಕ ಒತ್ತಡಗಳು, ಅಲ್ಲಿ ಬರುವ ನಾಯಕನ ತಂದೆ, ತಾಯಿ, ಅಣ್ಣ, ಊರಿನ ಜನರು, ಇವರೆಲ್ಲರ ವರ್ತನೆಗಳು, ನಾಯಕ ರವಿಯ ಪ್ರೀತಿಗೆ ಅವನ ಚಿಂತನೆಗೆ ಒತ್ತಾಸೆಯಾಗಿ ನಿಲ್ಲುವ ಶೇಖರನ ಪಾತ್ರ ಇವುಗಳೆಲ್ಲದರ ಚಿತ್ರಣದಲ್ಲಿ ಕಾದಂಬರಿಕಾರರ ನಿಲುವು, ಧೋರಣೆಗಳು ಮಾನವ ಸಂಬಂಧಗಳ ಜೊತೆಯಲ್ಲಿ ಸಂಯಮಪೂರ್ಣವಾದ ಆಲೋಚನೆಗಳಲ್ಲಿ ಸಾಗುವ ಮೂಲಕ ನಾಯಕನ ಹೋರಾಟ ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳುವಲ್ಲಿ ಯಶಸ್ಸು ಕಾಣುವಂತೆ ಮಾಡಿದ್ದಾರೆ.

ಈ ರೀತಿಯಲ್ಲಿ ಲಕ್ಷ್ಮಣರಾವ್ ಅವರ ಒಟ್ಟು ಕಥನ ಸಾಹಿತ್ಯದ ವಿಶೇಷತೆಗಳನ್ನು ಗುರುತಿಸುವ ಮೂಲಕ ಅವರ ಕಥೆ ಕಾದಂಬರಿಗಳು ಹೇಗೆ ಜನಪ್ರಿಯತೆ ಗಳಿಸಿವೆ ಎಂಬುದನ್ನು ವಿಶ್ಲೇಷಿಸಲಾಗಿದೆ. ಜನಪ್ರಿಯ ಸಾಹಿತ್ಯದ ಪರಿಕಲ್ಪನೆಗಳು ಇವರ ಕಥನ ಸಾಹಿತ್ಯಕ್ಕೆ ಹೇಗೆ ಅನ್ವಯವಾಗುತ್ತದೆ ಎಂಬುದು ವಿಶ್ಲೇಷಣೆಯ ಮೂಲಕ ಕಂಡುಕೊಂಡಾಗ ಕೆಲವು ವಿಷಯಗಳು ಸ್ಪಷ್ಟವಾಗುತ್ತವೆ.

ಬಿ.ಆರ್.ಲಕ್ಷ್ಮಣರಾವ್ ಅವರು ಕಾವ್ಯದಲ್ಲಿ ಹೇಗೂ ಹಾಗೆಯೇ ಅವರ ಕಥನ ಸಾಹಿತ್ಯದಲ್ಲಿ ಯಾವುದೇ ಪಂಥಗಳಿಗೆ ಒಳಪಡುವುದಿಲ್ಲ. ಅವರ ಕಥನ ಸಾಹಿತ್ಯದಲ್ಲಿ ನವ್ಯ, ಬಂಡಾಯಗಳ ಸುಳಿವು ದಕ್ಕುವುದಿಲ್ಲ. ಸಾಮಾಜಿಕ ಸಮಸ್ಯೆಗಳು, ಕ್ರೂರ ವ್ಯವಸ್ಥೆ ಮೌಢ್ಯತೆಯ ಸಂಪ್ರದಾಯ ಇವುಗಳ ಒತ್ತಡದಲ್ಲಿ ಅವುಗಳಲ್ಲಿನ ದಮನಕಾರಿ ಧೋರಣೆ ಮತ್ತು ತಾಳುವ ನಿಲುವುಗಳಿಂದಾಗಿ ಮನುಷ್ಯ ಸಂಬಂಧಗಳು, ಪ್ರೀತಿ ವಿಶ್ವಾಸ ನಂಬಿಕೆಗಳುಮುರುಟಿ ಹೋಗುತ್ತಿರುವುದನ್ನು ಕುರಿತ ಕಾಳಜಿಯನ್ನು ಲಕ್ಷ್ಮಣರಾವ್ ಅವರ ಕಥನ ಸಾಹಿತ್ಯದಲ್ಲಿ ಗುರುತಿಸಬಹುದು. ಮಾನವೀಯ ಮೌಲ್ಯಗಳು ಮನುಷ್ಯ ಸಂಬಂಧಗಳ ಬಗ್ಗೆ ಪ್ರೀತಿ, ಪ್ರೇಮದ ಬಗೆಗಿನ ಮಾನವೀಯ ದನಿಯನ್ನು ಅವರ ಕಥೆಗಳ ಮೂಲಕ ವ್ಯಕ್ತ ಪಡಿಸಿದ್ದಾರೆ. ಪ್ರೀತಿ ಗಂಡು ಹೆಣ್ಣಿನ ಪ್ರೀತಿ, ಜೀವನದ ಬಗೆಗಿನ ಪ್ರೀತಿ ಒಲವು, ಅಕ್ಕರೆಗಳು, ವ್ಯವಸ್ಥೆಯ ಹಿಡಿತಕ್ಕೆ ಸಿಲುಕಿ ನಲುಗಿ ಹೋಗಬಾರದು. ಮನುಷ್ಯ ಸಂಬಂಧಗಳು ಪ್ರಕೃತಿ ಸಹಜವಾಗಿಯೇ ವಿಕಾಸ ಹೊಂದಬೇಕು. ಅರ್ಥ, ಕಾಮ, ಆಸೆ, ಆಕಾಂಕ್ಷೆಗಳು, ಯಾವುದೇ ಆಗಲೀ ಮನುಷ್ಯ ಸಂಬಂಧಗಳನ್ನು ಅರಳಿಸಲು

ಸಹಕಾರಿಯಾಗೇ ಬೇಕೇ ಹೊರತು ದಮನ ಮಾಡುವ ಶಕ್ತಿಗಳಾಗಿಬಾರದು. ಅಂತಹ ಪ್ರವೃತ್ತಿ ಸಾಮಾಜಿಕ ಆರೋಗ್ಯಕ್ಕೆ ಕೌಟುಂಬಿಕ ಸ್ವಾಸ್ಥ್ಯಕ್ಕೆ ಒಳಿತಲ್ಲ ಎಂಬುದನ್ನು ಕಥೆಗಳ ಮೂಲಕ ನಿರೂಪಿಸುತ್ತಾರೆ.

ಬಿ.ಆರ್.ಲಕ್ಷ್ಮಣರಾವ್ ಅವರ ಕಥೆ, ಕಾದಂಬರಿಗಳಲ್ಲಿ ವ್ಯಕ್ತವಾಗುವ ಬಹು ಮುಖ್ಯವಾದ ಧೋರಣೆಗಳೆಂದರೆ, ಗಂಡು, ಹೆಣ್ಣಿನ ಸಂಬಂಧಗಳು ಜಾತಿ ಧರ್ಮಗಳು ಕ್ರೂರ ವ್ಯವಸ್ಥೆಯಿಂದಾಗಿ ನರಳಬಾರದು ಎಂಬುದರಲ್ಲಿ ಅವು ನೀತಿಯ ಚೌಕಟ್ಟಿನಲ್ಲೇ ಸಾಗಬೇಕು. ಅನೀತಿ ಅಶ್ಲೀಲವಾಗಬಾರದು ಎಂಬ ಎಚ್ಚರಿಕೆಯನ್ನು ತಾಳುತ್ತಾರೆ. ಪ್ರೀತಿ, ಪ್ರೇಮ, ಪ್ರಣಯ ಸ್ವಚ್ಛಂದವಾಗದೇ ಸಾಮಾಜಿಕ ಸ್ವಾಸ್ಥದ ಮಿತಿಯೊಳಗೆ ಸಾಗಬೇಕು ಎನ್ನುವುದನ್ನು ಸ್ಪಷ್ಟ ಪಡಿಸುತ್ತಾರೆ. ಯಾವುದೇ ಬಗೆಯ ಸಮಸ್ಯೆಗಳು ಪ್ರೀತಿ, ಪ್ರೇಮ, ಪ್ರಣಯಕ್ಕೆ ಸಂಬಂಧಿಸಿದ ಸಮಸ್ಯೆಗಳೇ ಆದರೂ ಅವುಗಳಿಗೆ ಪರಿಹಾರವನ್ನು ಈ ಪರಿಮಿತಿಯೊಳಗೆ ಕಂಡುಕೊಳ್ಳುವ ಪ್ರಯತ್ನವನ್ನು ಮಾಡಿರುವುದು ಅವರ ಕಥೆಗಳಲ್ಲಿ ಬರುವ ನಾಯಕಿಯರಾದ ರಮಾ, ಲಕ್ಷ್ಮಿ, ಜಾನಕಿ, ಮಾಲಿನಿಯರು ಸಮಾಜದ ನೀತಿ ನಿಯಮದ ಚೌಕಟ್ಟಿನಲ್ಲಿ ಪರಿಹಾರ ಕಂಡುಕೊಳ್ಳುತ್ತಾರೆ ಎಂಬುದರ ಮೂಲಕ ಸ್ಪಷ್ಟ ಪಡಿಸುತ್ತಾರೆ. ಅವರ ಎಲ್ಲಾ ಭಾವನೆಗಳು, ಆಲೋಚನೆಗಳು, ಮಾನವೀಯತೆ ಮೂಲಕವೇ ವ್ಯಕ್ತವಾಗುತ್ತವೆ.

ಬಿ.ಆರ್.ಲಕ್ಷ್ಮಣರಾವ್ ಅವರ ಕಥನ ಸಾಹಿತ್ಯದಲ್ಲಿ ವ್ಯಕ್ತವಾಗುವ ಮುಖ್ಯ ಅಂಶಗಳೆಂದರೆ ಸ್ನೇಹ, ಸ್ನೇಹಿತರು, ಸಹ ಜೀವದ ಬಗ್ಗೆ, ಪ್ರೀತಿ, ಬಾಂಧವ್ಯ, ಇವುಗಳ ಬಗ್ಗೆ ವ್ಯಕ್ತವಾಗುವ ಒಲವು, ಗೌರವ, ಪ್ರೀತಿಯ ತುಡಿತ–ಮಿಡಿತಗಳು, ಅಕ್ಕ, ತಮ್ಮ, ಗಂಡ, ಹೆಂಡತಿ, ಪ್ರೇಮಿಗಳು ಇವರಲ್ಲಿ ಕಾಣುವ ಪ್ರೀತಿಯ ಪ್ರಾಮಾಣಿಕತೆ, ಶುದ್ಧವಾದ ಗೆಳೆತನ, ವಿಶ್ವಾಸ, ಹೃದಯವಂತಿಕೆಗಳನ್ನೊಳಗೊಂಡ ಅಂಶಗಳು ಹಲವು ಹತ್ತಾರು ಮುಖಗಳಲ್ಲಿ ಅವರ ಕಥೆಗಳಲ್ಲಿನ ಪಾತ್ರಗಳಲ್ಲಿ ಹೊರ ಹೊಮ್ಮುವುದನ್ನು ಕಾಣಬಹುದು. ಪ್ರೀತಿಯ ಬಗೆಗಿನ ನಂಬಿಕೆಯೇ ಅವರ ಕಥೆಗಳ ಬೆಳವಣಿಗೆಗೆ ದಾರಿಯಾಗಿದೆ. ಪ್ರೀತಿ ಸಹನೆಯ ಮೂಲಕ ಹಸನಾದ ಬದುಕು ಕಟ್ಟಿಕೊಳ್ಳುವ ಸಂಯಮಪೂರ್ಣವಾದ ಅವರ ಬರವಣಿಗೆಯಿಂದಾಗಿ ಅವು ನಮ್ಮ ಕಥೆಗಳೇ ಎನ್ನುವಂತೆ ಆಗಿಬಿಡುತ್ತವೆ. ಇವರ ಪ್ರತಿ ಕಥೆಗಳು ನೈಜತೆಯಿಂದ ಕೂಡಿರುತ್ತವೆ. ಹಾಗಾಗಿಯೇ ಅವು ನಮ್ಮ ಸುತ್ತ ಮುತ್ತ ಅಕ್ಕ ಪಕ್ಕದಲ್ಲಿಯೇ ನಡೆಯುತ್ತಿವೆಯೇನೋ ಎಂಬ ರೀತಿಯಲ್ಲಿ ನಿರೂಪಣೆಗೊಂಡಿರುವ ಕಾರಣ ಓದಿಸಿಕೊಂಡು ಹೋಗುತ್ತವೆ. ಅವರ ಕಥೆಗಳಲ್ಲಿ ವ್ಯಕ್ತವಾಗುವ ಘಟನೆಗಳು ಸನ್ನಿವೇಶಗಳು, ಪಾತ್ರಗಳು, ಅವುಗಳ ನಡವಳಿಕೆ, ಸಾಮಾಜಿಕ ವ್ಯವಸ್ಥೆ ಈ ಎಲ್ಲಾ ವಿಷಯಗಳು ಮಧ್ಯಮ ವರ್ಗದ ಜನರ ಸಾಮಾನ್ಯ ಬದುಕನ್ನು ಪ್ರತಿನಿಧಿಸುತ್ತವೆ. ಹಾಗಾಗಿಯೇ ಅವರ ಕಥೆಗಳು ಸರಳವಾಗಿದ್ದು, ಸುಲಭವಾಗಿ ಓದಿಸಿಕೊಂಡು ಹೋಗುತ್ತವೆ. ಪ್ರೀತಿಯ ಹಂಬಲವಿದ್ದರೂ ಪ್ರೀತಿ ದಕ್ಕದೆ ಹೋದರೂ ಅದಕ್ಕಾಗಿ ಸಟೆದು ನಿಲ್ಲುವ ಆಕ್ರೋಶ, ಹತಾಶೆಗಳು ವ್ಯಕ್ತವಾಗುವುದಿಲ್ಲ. ಪ್ರೀತಿಯ ಅನುಭವ ಮತ್ತು ಪ್ರೇಮವನ್ನು ಆರಾಧಿಸುವಿಕೆ ಇದೆಯೇ ಹೊರತು ಪ್ರತಿರೋಧದ ಹೋರಾಟದ ಧ್ವನಿ

ಅವರ ಕತೆಗಳಲ್ಲಿ ವ್ಯಕ್ತವಾಗುವುದಿಲ್ಲ. ಅದು ವ್ಯಕ್ತಿಗತ ಚಿಂತನೆಯಾಗಿ ಉಳಿಯದೆ ಸಾಮಾಜಿಕತೆಯ ಕಡೆಗೆ ಹೊರಳುವುದನ್ನು ಕಾಣಬಹುದು.

ಹೀಗೆ ಬಿ.ಆರ್.ಲಕ್ಷ್ಮಣರಾವ್ ಅವರ ಕಥೆ ಕಾದಂಬರಿಗಳಲ್ಲಿ ಪ್ರತಿಪಾದಿತವಾಗಿರುವ ಅಂಶಗಳು, ಅವುಗಳನ್ನು ನಿರೂಪಿಸುವ ರೀತಿ, ಸರಳವಾದ ಭಾಷಾ ಬಳಕೆ, ದ್ವಂದ್ವ, ಗೊಂದಲ, ತಾರ್ಕಿತವಾದ ಜಿಜ್ಞಾಸೆಗಳಿಂದ ಹೊರತಾಗಿರುವ, ಆಕರ್ಷಕವಾದ ಶೈಲಿಯೇ ಅವರ ಸಾಹಿತ್ಯವನ್ನು ಎಲ್ಲರೂ ಓದುವಂತೆ ಮಾಡಿದೆ. ಅದೇ ಮುಖ್ಯ ಹೇಗೆಂದರೆ, 'ರಾಮಚಂದ್ರ ಶರ್ಮರು' ಹೇಳುವ ಮಾತು 'ನಕ್ಕು ನಗಿಸುವ ಪ್ರಪಂಚದ ನಿಗೂಢಗಳಿಗೆ ಮುಳ್ಳಿನ ದಾರಿಯ ಹಾಗೆ ಹೂವಿನ ಹಾದಿಯು ಕರೆದೊಯ್ಯಬಹುದು ಎನ್ನುವುದಕ್ಕೆ ಲಕ್ಷ್ಮಣರಾವ್ ಕಥೆಗಳು (ಚಿಂತಾಮಣಿ ; ೨೦೦೬ ಪು ; ೧೫೬) ಎನ್ನುವ ಮಾತಿನಲ್ಲಿ ಸರಳ ಸುಲಭವಾಗಿ ಹೇಳುವುದು ಒಂದು ಕಲೆ, ಸಾಹಿತ್ಯ ಜನರಿಗೆ ಹತ್ತಿರವಾಗುವುದು ಮುಖ್ಯ ಎಂಬ ಧೋರಣೆಗೆ ಲಕ್ಷ್ಮಣರಾವ್ ಅವರ ಬರಹ ಸಾಕ್ಷಿಯಾಗುತ್ತದೆ. ತಿಳಿಯಾದ ಭಾಷೆ, ಸರಳವಾದ ಶೈಲಿ ನೇರವಾದ ವಿಚಾರ ಮಂಡನೆ, ಆಕರ್ಷಕವಾಗಿ ಓದುಗರನ್ನು ತಮ್ಮತ್ತ ಸೆಳೆದುಕೊಳ್ಳುತ್ತದೆ ಎಂಬುದು ಗಮನಿಸಬೇಕಾದ ವಿಷಯ.

ಮಧ್ಯಮ ವರ್ಗದ ಒಟ್ಟು ಬದುಕಿನ, ಆಪ್ತವಾದ ಸಾಮಾಜಿಕ ಮೌಲ್ಯಗಳು, ರೋಗಗ್ರಸ್ತ ವ್ಯವಸ್ಥೆ, ಕಥೆಗಳಲ್ಲಿ ವ್ಯಕ್ತವಾಗುವ ಜೀವನದೃಷ್ಟಿ ಮುಖ್ಯವಾದುದು. ಅವರ ಬರಹದಲ್ಲಿ ವ್ಯಕ್ತವಾಗುವ ಮಾನವೀಯ ಮೌಲ್ಯಗಳಾವುವು ಎಂದರೆ ಸಹನೆ ಪ್ರಾಮಾಣಿಕತೆ, ಪ್ರೀತಿ, ಗೆಳೆತನಗಳ ಸಂವೇದನೆಗಳು ಇವುಗಳೆಲ್ಲ ಜೀವನದ ಮೌಲ್ಯಗಳಾಗಿ ಬಿಂಬಿತವಾಗುವುದು. ಪ್ರೀತಿಯ ಬಗ್ಗೆ ನಂಬಿಕೆ ಅಪಾರವಾಗಿದ್ದು ಅದನ್ನು ಆರಾಧಿಸುವುದು. ಬರಹದಲ್ಲೇ ವ್ಯಕ್ತವಾಗುತ್ತದೆ. ಅವರ ಕಥೆಗಳಲ್ಲಿ ವ್ಯಕ್ತವಾಗುವ ವಿಷಯಗಳು ಸಾಮಾನ್ಯ ಎನ್ನಬಹುದಾದ ಇಲ್ಲವೆ ಅತಿಯಾದ ಭಾವುಕತೆಗಳಿಂದಾಗಿ ಕುಸಿಯುವಂತಾದರೂ ಕವಿ ಸಹಜ ಮಾನವೀಯ ಮಿಡಿತದ ಮೂಲಕ ಓದುಗರನ್ನು ಆಕರ್ಷಿಸುವುದು ವಿಶಿಷ್ಟವೆಂದೆ ಹೇಳಬಹುದು.

ಬಿ.ಆರ್.ಲಕ್ಷ್ಮಣರಾವ್ ಅವರು ಯಾವುದೇ ಪಂಥ ಸಮಕಾಲೀನ ಸಾಹಿತ್ಯಕ ಚಳುವಳಿಗಳಿಂದ ದೂರವಾಗುಳಿದವರು, ತಮ್ಮನ್ನು ಯಾವುದೆ ಪಥದ ಜೊತೆಯು ಗುರುತಿಸಿಕೊಳ್ಳದೆ ತಮ್ಮದೇ ದಾರಿಯಲ್ಲಿ ಸಾಗಿದವರು, ಅನುಭವವನ್ನು ಮುಕ್ತವಾಗಿ, ವಸ್ತು ನಿಷ್ಠವಾಗಿ ನೋಡುವ ದೃಷ್ಟಿ ಅವರದು. ಅವರ ಕಥೆಗಳಲ್ಲಿ ಸಾಮಾಜಿಕ ಕಳಕಳಿ ಇದೆ. ಬಂಡಾಯದ ಧೋರಣೆಯಿಂದ ಭಿನ್ನರಾದವರು. ಚಿಂತಾಮಣಿ ಕೂಡ್ಲೆಕೆರೆಯವರು ಗುರುತಿಸುವಂತೆ ಲಕ್ಷ್ಮಣರಾವ್ ಅವರ ಕಥೆ ಕವಿತೆಗಳ ಮೂಲಕ ವ್ಯಕ್ತವಾಗುವ ಜೀವನ ದೃಷ್ಟಿ ಅಬೇಧವಾದುದು. "ಅಲ್ಲಿ ಒಬ್ಬ ಹೊಸಕಾಲದ ಯುವಕನಿದ್ದಾನೆ, ಮಧ್ಯಮ ವರ್ಗದವನು ಅವನಿಗೆ ಹಳೆಯ ಕಂದಾಚಾರಗಳ ಬಗೆಗೆ ಬೇಸರವಿದೆ. ಆದರೆ ಹೊತ್ತುರಿಯುವ ಕ್ರೋಧವಿಲ್ಲ, ಅವನು ಬದಲಾವಣೆಯನ್ನು ಬಯಸುವವನು, ಆದರೆ ಬಂಡುಕೋರನಲ್ಲ, ತನ್ನ ಜೀವನದ ಅನೇಕ ಮುಖ್ಯ ಘಟ್ಟಗಳಲ್ಲಿ ವ್ಯವಸ್ಥೆಯ ಹಿಡಿತಕ್ಕೆ ಒಳಪಡುತ್ತಾನೆ, ಆದರೆ ತನ್ನ ಆ ನಿರ್ಧಾರದ ಕುರಿತು ವಿಷಾದ

ಪೂರ್ವಕವಾದ ಎಚ್ಚರವನ್ನು ಉಳಿಸಿಕೊಂಡಿರುವವನು. ಲಘು ಹೃದಯ, ಪ್ರಸನ್ನ ಮನೋಭಾವದ ಈ ತರುಣನು ಮಾನವೀಯತೆಯನ್ನು ಪರಮಾರ್ಥವೆಂದು ತಿಳಿಯುತ್ತಾನೆ. ಅದಕ್ಕೆ ಮಿಗಿಲಾದ ಆಸ್ಥೆ ಶೋಧಗಳು ಅವನ ಪಾಲಿಗಿಲ್ಲ. ಮಡಿವಂತಿಕೆಯನ್ನು ವಿರೋಧಿಸುವಾಗಲೂ ಸಭ್ಯತೆಯನ್ನು ಕಾಯ್ದುಕೊಳ್ಳುವ ನಾಯಕ. ನಮ್ಮ ಬಹುಪಾಲು ಮಧ್ಯಮವರ್ಗದ ಸುಶಿಕ್ಷಿತ, ಸುರಕ್ಷಿತ ತರುಣರನ್ನು ಸಂಕೇತಿಸುತ್ತಾನೆ. (ಚಿಂತಾಮಣಿ ; ೨೦೦೬ ; ಪು ; ೨೭೫-೨೭೬) ಸಣ್ಣ ಪುಟ್ಟ ಒತ್ತಡಗಳಿಗೂ ಮಣಿದು, ಎಷ್ಟೇ ವಿರೋಧವಿದ್ದರೂ ಅಂತಿಮವಾಗಿ ಸಾಮಾಜಿಕ ಕಟ್ಟುಪಾಡುಗಳನ್ನು ಅನಿವಾರ್ಯವಾಗಿ ಒಪ್ಪಿಕೊಳ್ಳುತ್ತಾನೆ". ಇದು ಅವರ ಕಥನ ಸಾಹಿತ್ಯದ ಗುಣವೆನ್ನಬಹುದು. ಬಹುತೇಕ ಎಲ್ಲಾ ಕಥೆಗಳಲ್ಲಿ ಕಾದಂಬರಿಯಲ್ಲಿ ಬರುವ ಪಾತ್ರಗಳಲ್ಲಿ, ಘಟನೆಗಳು, ಎದುರಾಗುವ ಸನ್ನಿವೇಶಗಳು ಮಧ್ಯಮ ವರ್ಗದವರನ್ನು ಪ್ರತಿನಿಧಿಸುತ್ತವೆ. ಹಾಗಾಗಿಯೇ ಅವರ ಕಥೆಗಳು, ನಮ್ಮಲ್ಲೇ ನಡೆಯುವ ರೀತಿಯಲ್ಲಿ ಆಪ್ತತೆಯನ್ನು ಪಡೆಯುತ್ತವೆ. ಅದಕ್ಕಾಗಿಯೇ ಲಕ್ಷ್ಮಣರಾವ್ ಅವರು ನಮ್ಮೆಲ್ಲರ ಪ್ರತಿನಿಧಿಯಾಗುತ್ತಾರೆ. ಪ್ರೀತಿ, ಪ್ರೇಮ, ಪ್ರಣಯಕ್ಕೆ ಸಂಬಂಧಿಸಿದ ವಿಷಯಗಳನ್ನು ಕುರಿತು ಬರೆಯುವಾಗ ಸಾಮಾನ್ಯವಾದ ಸರಳ ಮಾರ್ಗದ ಮೂಲಕ ನಿತ್ಯದ ಭಾಷೆಯ ಮೂಲಕವೇ ಮನ ಮುಟ್ಟಲು ಪ್ರಯತ್ನಿಸಿರುವ ಅವರ ಶೈಲಿಯೇ ಇಲ್ಲಿ ಪ್ರಮುಖವೆನಿಸುತ್ತವೆ. ಉಪಮೆ, ರೂಪಕಗಳಿಲ್ಲದ ದ್ವಂದ್ವ ಗೊಂದಲಗಳಿಗೆ ಆಸ್ಪದ ನೀಡದ ಅವರ ಸರಳ ಶೈಲಿಯೇ ಜನಪ್ರಿಯತೆಗೆ ಕಾರಣವಾಗಿದ್ದರೂ ಸರಳವಾಗಿ ಹೇಳುವುದು ದೋಷ ಎಂದು ಪರಿಗಣಿಸುವುದು ಸೂಕ್ತವಲ್ಲ. ಏಕೆಂದರೆ ಸಿ.ಎನ್. ರಾಮಚಂದ್ರನ್‌ರವರು ಹೇಳುವಂತೆ ಓದುವವರ ಸಂಖ್ಯೆಯೇ ವಿರಳವಾಗುತ್ತಿರುವ ಇಂದಿನ ದಿನಗಳಲ್ಲಿ ಓದುವಂತೆ ಓದುಗರನ್ನು ಸೆಳೆಯುವುದು ಮುಖ್ಯವೆನಿಸುತ್ತದೆ ಎಂಬ ಮಾತನ್ನು ಲಕ್ಷ್ಮಣರಾವ್ ಅವರ ಜನಪ್ರಿಯತೆಗೆ ಆರೋಪಿಸಿದಾಗ ಅಪಾರ ಸಂಖ್ಯೆಯ ಓದುಗರನ್ನು ಹೊಂದುವುದು ಸಾಹಿತ್ಯದ ನೆಲೆಯಲ್ಲಿ ಪ್ರಮುಖವಾಗುತ್ತದೆ.

ಬಿ.ಆರ್.ಲಕ್ಷ್ಮಣರಾವ್ ಅವರು ಯಾವುದೇ ಪಥ ಪಂಥಗಳಲ್ಲಿ ಮಾರುಹೋಗದೆ ಮುಕ್ತವಾಗಿ ಮನಸಾಕ್ಷಿ ಮೆಚ್ಚುವಂತೆ ತಮ್ಮದೇ ದಾರಿಯಲ್ಲಿ ಸಾಗುವ ಧೋರಣೆಯೆ. ಜನಮೆಚ್ಚುಗೆ ಗಳಿಸಿದೆ ಎಂದು ಹೇಳಲಾಗಿದೆ. ನಿತ್ಯ ಬದುಕಿನ ಕಣ್ಣ ಮುಂದಿನ ಘಟನೆಗಳನ್ನು ವಸ್ತುವಾಗಿಸಿ, ಹದಿಹರೆಯದವರ ಪ್ರೀತಿ, ಪ್ರೇಮ, ಪ್ರಣಯಕ್ಕೆ ಸಂಬಂಧಿಸಿದ ವಸ್ತು ವಿಷಯಗಳನ್ನು ಯಾವುದೇ ಬಗೆಯ ಆಟ ಕಟ್ಟದೆ, ವೇಷ ಹೂಡದೆ ತಮ್ಮ ಅನುಭವ ಜನ್ಯವಾದ ಮಾತುಗಳಲ್ಲೇ ಹೇಳುವ ಅವರ ಶೈಲಿ ಸರಳವಾದರೂ ವಿಶಿಷ್ಟವಾದುದು ಎಂದು ಗುರುತಿಸಬಹುದು. ಇಷ್ಟಾದರೂ ಅವರ ಕಥೆ, ಕಾದಂಬರಿಗಳಲ್ಲಿ ಅರೆಕೊರೆಗಳಿಲ್ಲ, ಎನ್ನುವಂತಿಲ್ಲ ಅಂದರೆ ಸರಳವಾಗಿ ಹೇಳುವುದು ಒಂದು ಕಲೆಯಾದರೂ ತೀರ ಸರಳವಾದರೂ ಅದು ಜಾಳಾಗಿ ಬಿಡುತ್ತವೆನ್ನುವುದನ್ನು ಹೊರತು ಪಡಿಸಿ ನೋಡಿದಾಗ ಲಕ್ಷ್ಮಣರಾವ್ ಅವರ ಕಥೆ, ಕಾದಂಬರಿಗಳು ಸರಳತೆಯಿಂದಾಗಿಯೇ ಹೆಚ್ಚಿನ ಓದುಗರನ್ನು ಪಡೆಯಲು ಸಾಧ್ಯವಾಗಿದೆ ಎಂಬುದನ್ನು ಮರೆಯುವಂತಿಲ್ಲ. ಆಧುನಿಕ ಜಗತ್ತಿನ ಒತ್ತಡ, ಜಂಜಾಟದ ಬದುಕಿನಲ್ಲಿ ಓದುವವರೇ

ಇಲ್ಲವಾಗುತ್ತಿರುವಾಗ, ಅವರಿಗಿಷ್ಟವಾದ ವಸ್ತು ವಿಷಯಗಳ ಮೂಲಕ ಅವರಿಗೆ ಆಪ್ತವಾಗುವ ರೀತಿಯಲ್ಲಿ ಹೇಳುವುದರ ಮೂಲಕ ಸಾಮಾಜಿಕ ಕಳಕಳಿ ಬೆಳೆಸುವುದು ಸಾಧ್ಯವಾಗುತ್ತದೆ ಎನ್ನುವುದಾದರೆ, ಗಂಭೀರ ವಿಷಯವನ್ನು ಸರಳವಾಗಿ ಆಕರ್ಷಕವಾಗಿ ಹೇಳುವುದು ಆ ಮೂಲಕ ಸಾಹಿತ್ಯ ಜನಪ್ರಿಯವಾಗುವುದು ಸೂಕ್ತವಾದ ಮಾರ್ಗವೆನಿಸಬಹುದಲ್ಲವೆ? ಅದಕ್ಕಾಗಿಯೇ ಅವರು ಬದುಕಿಗೆ ಹತ್ತಿರವಾಗುವ, ಪ್ರಸ್ತುತ ಸಾಮಾಜಿಕ ಬದುಕಿಗೆ ಅಗತ್ಯವಾದ ವಿಷಯಗಳನ್ನು ಮಧ್ಯಮ ವರ್ಗದ ಬದುಕಿನ ಚಿತ್ರಣವನ್ನು ಪ್ರೇಮ, ಪ್ರೀತಿಯ ವಿಷಯಗಳು, ಎದುರಿಸುವ ಸಮಸ್ಯೆಗಳು, ಸಂಪ್ರದಾಯಬದ್ಧ ವ್ಯವಸ್ಥೆಯ ಹಿಡಿತ ಈ ಎಲ್ಲಾ ವಿಷಯಗಳು ಅವರ ಕಥೆಗಳಲ್ಲಿ ಚರ್ಚಿತವಾಗುವ ಮೂಲಕ ಜನಪ್ರೀತಿ ಗಳಿಸುವುದು, ಜನಸಾಮಾನ್ಯರ ಬಳಿಗೆ ತಮ್ಮ ಕಾವ್ಯವನ್ನು ಒಯ್ದು ಮುಟ್ಟಿಸುವುದು, ಯಾವುದೇ ಸಾಮಾನ್ಯ ಓದುಗ ಸುಲಭವಾಗಿ ಗ್ರಹಿಸಬಲ್ಲ ರೀತಿಯಲ್ಲಿ ಕಥೆ ಹೇಳುವ ಧಾಟಿ, ಸೂಕ್ಷ್ಮ ಸಂವೇದನಾಶೀಲವಾದ ಅವರ ಪ್ರಾಮಾಣಿಕ ಅಭಿವ್ಯಕ್ತಿಯೇ ಓದುಗರನ್ನು ತಮ್ಮತ್ತ ಸೆಳೆಯುತ್ತದೆ. ಸಾಮಾಜಿಕ, ಆಧ್ಯಾತ್ಮಿಕ ವಿಚಾರಗಳನ್ನು ಕುರಿತು ಗಂಭೀರವಾಗಿ ಬರೆಯದೇ ಹೋದರೂ ಇವರ ಬರಹ ಗಂಭೀರ, ಲಘುತ್ವ, ಎರಡೂ ಅಲ್ಲದ ಜೀವಂತಿಕೆಯಿಂದ ಕೂಡಿದ್ದು ಯಾವುದೇ ಅನುಭವವನ್ನು ತಮ್ಮ ಸ್ವಂತ ಸಂವೇದನೆಯಾಗಿ ಬರುವುದೇ ನಿಜವಾದ ಗಂಭೀರತೆ ಎಂಬ ನಿಲುವಿನಲ್ಲಿ ಬರೆಯುವ ಲಕ್ಷ್ಮಣರಾವ್ ಅವರ ಬರಹ ಆ ದಿಕ್ಕಿನಲ್ಲಿ ನೋಡಿದಾಗ ಪ್ರಮುಖವಾಗಿ ಉಳಿಯುತ್ತದೆ.

ಜನಪ್ರಿಯ ಸಾಹಿತ್ಯದ ಪರಿಕಲ್ಪನೆ, ವಿಮರ್ಶಕರು ಪರಿಭಾವಿಸುವ ನೆಲೆಯಲ್ಲಿ ಲಕ್ಷ್ಮಣರಾವ್ ಅವರ ಕಥನ ಸಾಹಿತ್ಯವನ್ನು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡದೆ ಆಸ್ವಾದನೆಯ ನೆಲೆಯಿಂದ ಅಧ್ಯಯನ ಮಾಡಿದಾಗ ಕಥೆ ಕಾದಂಬರಿಗಳ ವೈಶಿಷ್ಟ್ಯಗಳು ಸ್ಪಷ್ಟವಾಗುವುದರ ಮೂಲಕ ಕಥನ ಸಾಹಿತ್ಯಕ್ಕೂ ಮಹತ್ವದ ಸ್ಥಾನ ಲಭಿಸುತ್ತವೆಂದು ಹೇಳಬಹುದು. ಇಷ್ಟಾಗಿಯೂ ಸ್ವತ: ಲಕ್ಷ್ಮಣರಾವ್ ಅವರೇ ಕ್ಯಾಮರಾ ಕಣ್ಣು ಸಮಗ್ರ ಕಾವ್ಯದ 'ನನ್ನ ಮಾತು' ಭಾಗದಲ್ಲಿ ಹೇಳುವುದು "ಇಷ್ಟಾಗಿ ನಾನು ಸಂತುಷ್ಟನೇನಲ್ಲ, ಆಳದಲ್ಲಿ ತೀವ್ರವಾದ ಕಾವ್ಯವನ್ನು ಸೃಷ್ಟಿಸಬೇಕೆಂಬ ಹಂಬಲ ನನಗಿದೆ. ಇದಕ್ಕಾಗಿ ನನ್ನ ಪ್ರಯತ್ನ ಮತ್ತು ಪರಿಶ್ರಮ ನನ್ನ ಪರಿಮಿತಿಗಳಲ್ಲಿ ಮುಂದುವರೆಯುತ್ತಿದೆ. ಆದರೆ ಇಂಥ ಸಿದ್ಧಿ ಕೇವಲ ಹಠ ಹಿಡಿದು ಕೂತು ಸಾಧಿಸಿದರೆ ವಶವಾಗುವಂಥದಲ್ಲ; ಸಾಧಕನಿಗೆ ಅದು ಬಾಹ್ಯದ ಚಾರಿತ್ರಿಕ ಒತ್ತಡ ಮತ್ತು ಅಂತರ್ಯದ ಸ್ವಯಂ ಸ್ಫೂರ್ತಿಯಿಂದ ತಾನಾಗಿ ಒದಗಿ ಬರುವಂಥದು" ಎಂದು ಕಾವ್ಯವನ್ನು ಕುರಿತು ಹೇಳುವ ಮಾತನ್ನು ಅವರ ಕಥೆಗಳಿಗೂ ನಾವು ಅನ್ವಯಿಸಿಕೊಂಡು ನೊಡಬಹುದಾಗಿದೆ. ಅದು ಎಲ್ಲಾ ಬರಹಗಾರರನ್ನು ಕಾಡುವ ಸಹಜ ಭಾವನೆಯಾಗಿರುತ್ತದೆ. ಅವರು ಕಥೆಗಳ ಮೂಲಕ ಪ್ರೀತಿ ಸಹನೆಗಳ ಮೂಲಕವೇ ಬದುಕು ಹಸನಾಗಬಲ್ಲದು ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಇದು ಇಂದಿನ ಬದುಕಿಗೆ ಅತ್ಯವಶ್ಯಕವಾಗಿ ಬೇಕಾಗಿರುವಂಥದು ಅದನ್ನು ಸಾದ್ಯವಾದ ಮಟ್ಟಿಗೆ ಅವರು ತಮ್ಮ ಕಥೆಗಳ ಮೂಲಕ ಸಾಧಿಸಿ ಓದುಗರಿಗೆ ತಲುಪಿಸುವಲ್ಲಿ ಯಶಸ್ಸು ಕಂಡಿದ್ದಾರೆಂದು ಹೇಳಬಹುದು.

ಆಧುನಿಕ ಕನ್ನಡ ವಿಮರ್ಶೆಯು ಸಾಹಿತ್ಯವನ್ನು ಎರಡು ರೀತಿಯಲ್ಲಿ ಪರಿಗಣಿಸಿದೆ. ಗಂಭೀರ ಸಾಹಿತ್ಯ ಮತ್ತು ಜನಪ್ರಿಯ ಸಾಹಿತ್ಯ ಎಂದು ವಿಭಜಿಸಿಕೊಂಡಿದೆ. ಗಂಭೀರ ಓದಿಗೆ ಎಟುಕದ ಗಂಭೀರ ಅಧ್ಯಯನಕ್ಕೆ ಅರ್ಹವಲ್ಲದ ಎರಡನೇ ದರ್ಜೆಯ ಸಾಹಿತ್ಯವೆಂದು ಜನಪ್ರಿಯ ಸಾಹಿತ್ಯವನ್ನು ವಿಮರ್ಶೆ ಗುರುತಿಸುತ್ತದೆ. ಜನಪ್ರಿಯ ಸಾಹಿತ್ಯವೆಂದು ಕಾದಂಬರಿ ಪ್ರಕಾರಕ್ಕೆ ಅನ್ವಯಿಸಿ ಈ ಚರ್ಚೆಯನ್ನು ಮುಂದುವರಿಸಿದೆ. ವಿಮರ್ಶೆಯ ಪರಿಕಲ್ಪನೆಯಿಂದಾಗಿ ಜನಪ್ರಿಯ ಸಾಹಿತ್ಯ ಇಂದು ಅವಜ್ಞೆಗೆ ಒಳಪಡುತ್ತದೆ.

ಜನಪ್ರಿಯ ಕವಿಗಳೆಂದು ಸಾಹಿತ್ಯ ವಲಯದ ಮೂಲಕ ಗುರುತಿಸಿಕೊಂಡಿರುವ ಬಿ.ಆರ್.ಲಕ್ಷ್ಮಣರಾವ್ ಅವರ ಒಟ್ಟು ಸಾಹಿತ್ಯವನ್ನು ಅವಲೋಕಿಸುವುದು ಚರ್ಚಿಸುವುದು ಈ ಭಾಗದ ಅಧ್ಯಯನವಾಗಿದೆ. ಅಂದರೆ ಬಿ.ಆರ್.ಲಕ್ಷ್ಮಣರಾವ್ ಅವರ ಕಥೆ, ಕಾದಂಬರಿ, ಕಾವ್ಯ ಇವುಗಳಲ್ಲಿ ವ್ಯಕ್ತವಗಿರುವ ಜನಪ್ರಿಯತೆಯ ಅಂಶಗಳಾವುವು, ಅವುಗಳು ಅವರ ಕಾವ್ಯ, ಕಥನ, ಸಾಹಿತ್ಯದಲ್ಲಿ ಹೇಗೆ ನಿರೂಪಿತವಾಗಿವೆ ಎಂಬುದನ್ನು ವಿಶ್ಲೇಷಣೆಯ ಮೂಲಕ ಚರ್ಚಿಸಲಾಗಿದೆ. ಆ ಮೂಲಕ ಅವರ ಸಾಹಿತ್ಯದಲ್ಲಿ ಜನಪ್ರಿಯತೆಯ ಮೂಲಕವೇ ಗಂಭೀರ ಅಂಶಗಳು ಹೇಗೆ ವ್ಯಕ್ತವಾಗುತ್ತದೆ ಎಂಬುದನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ. ಬಿ.ಆರ್. ಲಕ್ಷ್ಮಣರಾವ್ ಅವರ ಸಾಹಿತ್ಯವು ಜನಪ್ರಿಯ ಮತ್ತು ಗಂಭೀರ ವಿಷಯಗಳನ್ನು ಒಳಗೊಳ್ಳುವ ಮೂಲಕ ಗಂಭೀರ ಮತ್ತು ಜನಪ್ರಿಯ ಎರಡರ ಸಮನ್ವಯ ಹೇಗೆ ಸಾಧಿತವಾಗಿದೆ ಎಂಬುದನ್ನು ಅವರ ಕವಿತೆಗಳು, ಕಥೆಗಳು, ಕಾದಂಬರಿಯ ಬಗೆಗಿನ ವಿಶ್ಲೇಷಣೆಯ ಮೂಲಕ, ವಿಮರ್ಶೆಯ ಪರಿಕಲ್ಪನೆಗೆ ಬದಲಾಗಿ ಭಿನ್ನವಾದ ನೆಲೆಯಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ. ಅದರಿಂದಾಗಿ ಬಿ.ಆರ್. ಲಕ್ಷ್ಮಣರಾವ್ ಅವರ ಸಾಹಿತ್ಯದಲ್ಲಿನ ವಿಶಿಷ್ಟತೆಗಳನ್ನು ಗುರುತಿಸುವುದು ಅದರೊಂದಿಗೆ ಅವುಗಳ ಆ ಮೂಲಕವೇ ಹೇಗೆ ಗಂಭೀರ ಚಿಂತನೆಗೆ ಅರ್ಹವಾಗಿವೆ ಎಂಬುದನ್ನು ಕಂಡುಕೊಳ್ಳಲಾಗಿದೆ. ಇದರಿಂದಾಗಿ ಬಿ.ಆರ್. ಲಕ್ಷ್ಮಣರಾವ್ ಅವರ ಸಾಹಿತ್ಯದ ಮಹತ್ವವೇನೆಂಬುದು ಸ್ಪಷ್ಟವಾಗುತ್ತದೆ. ಅವರ ಒಟ್ಟಾರೆ ಸಾಹಿತ್ಯ ಚಿಂತನೆಯನ್ನು ಗಂಭೀರ ಮತ್ತು ಜನಪ್ರಿಯ ಎರಡು ನೆಲೆಯಲ್ಲೂ ನೋಡಲಾಗುವುದು. ಅಂದರೆ ಯಾವುದೇ ಒಬ್ಬ ಕವಿಯ ಇಲ್ಲವೇ ಸಾಹಿತ್ಯವನ್ನು ನಿರ್ಧಿಷ್ಟವಾದ ಒಂದೇ ವರ್ಗದಲ್ಲಿ ಗುರುತಿಸಲಾಗದು. ಹೇಗೆಂದರೆ ಅವರಲ್ಲಿ

ನಿರೂಪಿತವಾಗಿರುವ ಅಂಶಗಳು ಇಂಥದೇ ನೆಲೆಗೆ ಮಾತ್ರ ಸೀಮಿತವಾಗಿದೆ ಎಂದು ಹೇಳಲಾಗದು. ಜನಪ್ರಿಯ ಅಂಶಗಳು ಕೇವಲ ಜನಪ್ರಿಯ ಅಂಶದಲ್ಲಿ ಮಾತ್ರ ಕಂಡು ಬರುವುದಿಲ್ಲ. ಹಾಗೆಯೇ ಗಂಭೀರವೆಂದು ವಿಮರ್ಶೆ ಗುರುತಿಸುವ ಸಾಹಿತ್ಯದಲ್ಲಿ ಜನಪ್ರಿಯ ಅಂಶಗಳು ಇಲ್ಲವೆಂದು ಹೇಳಲಾಗದು. ಜನಪ್ರಿಯತೆ ಎಂಬುದು ಯಾವುದೇ ಬಗೆಯ ಸಾಹಿತ್ಯದ ಸಾಮಾನ್ಯವಾದ ಅಂಶವಾಗಿದೆ ಎಂಬುದು ಸ್ಪಷ್ಟವಾಗಿದೆ. ಹಾಗಾಗಿ ಬಿ.ಆರ್. ಲಕ್ಷ್ಮಣರಾವ್ ಅವರ ಸಾಹಿತ್ಯವನ್ನು ಏಕಮುಖವಾದ ರೀತಿಯಲ್ಲಿ ಪರಿಭಾವಿಸದೆ ಅವರ ಸಾಹಿತ್ಯದಲ್ಲಿ ಪ್ರತಿಪಾದಿತವಾಗಿರುವ ಅಂಶಗಳು ಜನಪ್ರಿಯ ಮತ್ತು ಗಂಭೀರ ಎಂಬ ಎರಡರ ಸಮನ್ವಯತೆಯಿಂದ ಕೂಡಿವೆ ಎಂದು ಗುರುತಿಸಿಕೊಳ್ಳುವುದಕ್ಕೆ ಹೆಚ್ಚಿನ ಒತ್ತು ನೀಡಲಾಗಿದೆ. ಸರಳ ಮಾರ್ಗದ ಮೂಲಕವೇ ಗಂಭೀರ ಚಿಂತನೆಯನ್ನು ಹೇಗೆ ಪ್ರತಿಪಾದಿಸುತ್ತದೆ ಎಂಬುದನ್ನು ವಿವೇಚಿಸಲಾಗಿದೆ.

ಮಧ್ಯಮ ವರ್ಗದ ಕುಟುಂಬದಲ್ಲಿ ಸಹಜವಾಗಿ ನಡೆಯುವ ಘಟನೆಗಳನ್ನು ಆಧರಿಸಿ ಬರೆಯುವ ಇವರ ಕಥೆಗಳ ವಸ್ತು ವಿಷಯವು ಓದುಗರಿಗೆ ಮೆಚ್ಚುಗೆಯಾಗುತ್ತದೆ. 'ನಿರಂತರ' ಕಥಾ ಸಂಕಲನದ ಬಹುತೇಕ ಕಥೆಗಳು ಪ್ರೀತಿಯ ವಸ್ತುವನ್ನುಳ್ಳ ಕಥೆಗಳು, ಈ ಕಥೆಗಳಲ್ಲಿ ಬರುವ ಪ್ರೇಮ ಮತ್ತು ಕಾಮದ ವಿಷಯವು ಆರೋಗ್ಯ ಪೂರ್ಣವಾದ ಹಾಗೂ ಪ್ರಬುದ್ಧವಾದ ನಿಲುವುಗಳೇ ಆಗಿರುವುದು ಗಮನಾರ್ಹವಾದ ವಿಷಯವೇ ಆಗಿವೆ. ಇಲ್ಲಿ ಬರುವ ವಸ್ತು ವಿಷಯಗಳು ಸಮಾಜದ ಕಟ್ಟು ಕಟ್ಟಳೆಗಳು, ಜಾತಿ ಮತ, ಧರ್ಮದ ಅಡ್ಡಗೋಡೆಗಳು, ಮಧ್ಯಮವರ್ಗದ ತೊಳಲಾಟಗಳು, ಪ್ರೀತಿಯ ಹಾದಿಯಲ್ಲಿ ಎದುರಾಗುವ ಕಂಟಕಗಳು ಹಲವು ಬಗೆಯಲ್ಲಿ ಬರುವಂತಹವು. ಪ್ರಜ್ಞಾವಂತ, ಮನಸ್ಸುಗಳನ್ನು ಕಾಡುವ ನೈತಿಕತೆಯ ಪ್ರಜ್ಞೆ, ಪಾಪ ಪ್ರಜ್ಞೆ ಅವರಿಂದ ಹೊರಬರಲಾಗದ, ಅದರೊಂದಿಗೆ ರಾಜಿಯಾಗಿಬಿಡುವ ಅಂಶ. ಇವೆಲ್ಲವುಗಳು ಬಿ.ಆರ್.ಲಕ್ಷ್ಮಣರಾವ್ ಅವರ ಕಥೆಗಳಲ್ಲಿ ವ್ಯಕ್ತವಾಗಿದೆ. ಅವರ ಕಥೆಗಳಲ್ಲಿ ಬರುವ ಪ್ರೇಮ ಹಲವು ಮುಖಗಳಲ್ಲಿ ವ್ಯಕ್ತವಾಗುತ್ತದೆ. ಒಮ್ಮೆ ಕ್ರೂರ ವ್ಯವಸ್ಥೆಯ ವಿರುದ್ಧ ಸೆಟೆದು ನಿಲ್ಲುವ ಪ್ರೇಮ ಕಂಡು ಬಂದರೆ, ಹಲವು ದಾರಿಗಳನ್ನು ತೆರೆದುಕೊಳ್ಳುವ ಪ್ರೇಮವು ಇದೆ. ಹಾಗೆಯೇ ಪ್ರೇಮದ ಗೆಲುವು ಇದೆ, ಜೊತೆಗೆ ವಿಫಲ ಪ್ರೇಮದ ವಿಷಾದವನ್ನು ಇವರ ಕಥೆಗಳಲ್ಲಿ ಕಾಣಬಹುದಾಗಿದೆ. ಇವರ ಕಥೆಗಳಲ್ಲಿ ಕಂಡುಬರುವ ಪ್ರಮುಖವಾದ ಅಂಶಗಳೆಂದರೆ, ಗಂಡು ಹೆಣ್ಣುಗಳ ಸೆಳೆತ, ಕಾಮದ ತುಡಿತ, ಈ ಕ್ರೂರ ವ್ಯವಸ್ಥೆಯ ತುಳಿತ, ಅಸಹಾಯಕತೆ, ಇವೆಲ್ಲವುಗಳು ಇವರ ಕಥೆಗಳಲ್ಲಿ ಮುಖಾ ಮುಖಿಯಾಗುತ್ತದೆ. ಮನುಷ್ಯ ಸಂಬಂಧದಲ್ಲಿ ಅದರಲ್ಲೂ ವಿಶೇಷವಾಗಿ ಗಂಡು ಹೆಣ್ಣುಗಳ ಸಂಬಂಧಗಳಲ್ಲಿ ಪ್ರೀತಿ ಪ್ರಣಯಗಳ ಆಳ, ವಿಸ್ತಾರ, ಹೊಳಪುಗಳ ನೈಜತೆ ಅವರವರ ಮನೋಧರ್ಮದ ಅಳತೆಗಳಿಗೆ ನಿಲುಕಿದ್ದು, ' ನಿರಂತರ' ಕಥಾ ಸಂಕಲನದ ಕಥೆಗಳು ಪ್ರಮುಖವಾಗಿ ಈ ಎಲ್ಲಾ ನೆಲೆಗಳನ್ನುಒಳಗೊಂಡ ಚಿಂತನೆಯ ಜೊತೆಗೆ ರಚಿತವಾಗಿವೆ ಎಂದು ಗುರುತಿಸಬಹುದು.

ಜಿ.ಆರ್.ಲಕ್ಷ್ಮಣರಾವ್ ಅವರ ಕಥೆಗಳಲ್ಲಿ ಬಹಳ ಮುಖ್ಯವಾಗಿ ನಿರೂಪಿತವಾಗುವ ಅಂಶಗಳೆಂದರೆ ಸಹನೆ, ಪ್ರಮಾಣಿಕತೆ, ಪ್ರೀತಿ, ಗೆಳೆತನಗಳ ಸಂವೇದನೆ, ಸಹಜೀವಿಗಳನ್ನು ಕುರಿತು, ಸ್ನೇಹ, ಪ್ರೀತಿ, ಬಾಂಧವ್ಯಗಳ ಬಗೆಗಿರುವ ಗೌರವ, ಆದರ ಪ್ರೀತಿ, ವಿಶ್ವಾಸ, ಅವರ ಕಥೆಗಳಲ್ಲಿ ವ್ಯಕ್ತವಾಗುವ ಜೀವನ ಮೌಲ್ಯಗಳೆಂದು ಗುರುತಿಸಬಹುದು, ಅಕ್ಕ ತಮ್ಮ, ಗಂಡ ಹೆಂಡತಿ, ಪ್ರೇಯಸಿ, ಪ್ರಿಯಕರ ನಡುವೆ ವ್ಯಕ್ತವಾಗುವ ಶುದ್ಧವಾದ, ಮುಗ್ಧವಾದ, ಪ್ರೀತಿ ವಿಶ್ವಾಸಗಳು, ಪರಿಶುದ್ಧವಾದ ಹೃದಯವಂತಿಕೆ, ಇವುಗಳೇ ಜನರನ್ನು ತಮ್ಮತ್ತ ಆಕರ್ಷಿಸುತ್ತವೆ.

'ಜೆಸ್ಟರ್' ಕಥೆ ಸರಳವಾದ ಪ್ರೀತಿ ಪ್ರೇಮದ ಕಥಾ ವಸ್ತುವನ್ನುಳ್ಳ ಸಾಮಾನ್ಯವಾದ ಕಥೆ ಪ್ರೀತಿಯ ಬಲೆಯಲ್ಲಿ ಬಿದ್ದ ನಾಯಕಿ, ರವಿಯನ್ನು ತುಂಬಾ ಪ್ರೀತಿಸಿದ್ದು, ಜಾತಿಯ ಕಾರಣದಿಂದ ಅವರಿಬ್ಬರೂ ದೂರಾಗುವುದು, ತಂದೆ ತಾಯಿಯ ಆಸೆಯಂತೆ ವಿದ್ಯಾವಂತ, ಹಣವಂತ, ಒಳ್ಳೆಯ ಅಧಿಕಾರದಲ್ಲಿರುವ ಶೇಖರ್‌ನನ್ನು ಮದುವೆಯಾದರೂ ಆಕೆ ಅಸುಖಿಯಾಗಿರುವುದು, ಆಕೆಯಮಾತಿನಲ್ಲೇ ಹೇಳವುವುದಾದರೆ ಒಂದು ಹೆಣ್ಣು ಬಯಸಬಹುದಾದ ಎಲ್ಲ ಸುಖವಿದೆ. " ಎಲ್ಲ ಐಶ್ವರ್ಯ, ವೈಭವ, ಆನಂದ, ಗಂಡ ಇನ್‌ಕಮ್ ಟ್ಯಾಕ್ಸ್ ಆಫೀಸರ್, ಇದಕ್ಕಿಂತ ಅಂತಸ್ತು ಬೇಕೆ?, ಅತ್ತೆ, ಮಾವ, ನಾದಿನಿ, ಯಾರ ಕಾಟವು ಇಲ್ಲದೆ, ಸುಖವಾಗಿ, ಮಜವಾಗಿ ಇತರರ ಕಣ್ಣು ಕುಕ್ಕುವಂತೆ, ಈ ಎಲ್ಲ ವೈಭವಕ್ಕೂ ನಾನೊಬ್ಬಳೆ ಒಡತಿಯಾಗಿ ಈ ಇಡೀ ಮಹಲಿನಲ್ಲಿ ನಾನೊಬ್ಬಳೇ ದೆವ್ವವಂತೆ ಒಡಾಡಿಕೊಂಡಿದ್ದೇನೆ" (ನಿರಂತರ ; ಪುಟ ; ೧೪) ಎನ್ನುವಲ್ಲಿ ನಾಯಕಿಯ ಬದುಕಿನ ಅತೃಪ್ತಿಯನ್ನು ಅವಳ ಮುಖವಾಡದ ಬದುಕನ್ನು ಪರಿಚಯಿಸುವ ಮಾತುಗಳು ಸರಳವೆನಿಸಿದರೂ ವಾಸ್ತವಕತೆಯನ್ನು ತೆರೆದಿಡುವ ಕಥೆಗಾರರ ಶೈಲಿ ಜನ ಮೆಚ್ಚುಗೆಗೆ ಕಾರಣವಾಗಿದೆ ಎಂದು ಹೇಳಬಹುದು. ಹಾಗೆಯೇ ಕಥೆಯಲ್ಲಿ ಬರುವ ಇನ್ನಿತರ ವಿಷಯಗಳೆಂದರೆ, ನಾಯಕಿ ತನ್ನ ಗಂಡನೊಂದಿಗೆ ಬಾಳುವ ಬದುಕು ಕೇವಲ ಮೇಲು ನೋಟಕ್ಕೆ ಸಮಾಜದ ದೃಷ್ಟಿಗೆ ಮಾತ್ರ ಅದರೆ ಆಳದಲ್ಲಿರುವುದೇ ಬೇರೆಯದು ಎಂಬುದು ನಾಯಕಿಯ ಮಾತಿನಿಂದ ದೃಢವಾಗುತ್ತದೆ. ತಂದೆ ತಾಯಿಯ ಮುಂದೆ ತನ್ನ ಪ್ರೀತಿಯ ಬಗ್ಗೆ ಹೇಳಿಕೊಳ್ಳಲಾಗದ ಅಸಹಾಕತೆ, ಪ್ರೇಮವನ್ನು ಮರೆಯಲಾರದ ಮನಸ್ಸು, ಈ ತಾಕಲಾ ಟಗಳಲ್ಲಿ ಗಂಡನೊಂದಿಗಿನ ಆಕೆಯ ಬಾಳು ಕೃತಕವಾದುದು, ಮುಖವಾಡದಿಂದ ಕೂಡಿದುದಾಗಿದೆ. ಇದಕ್ಕೆ ಕಾರಣ ನಮ್ಮ ಸಮಾಜ, ಮತ್ತು ಸಂಸ್ಕೃತಿ, ಸಂಪ್ರದಾಯವೆಂಬುದು ಸ್ಪಷ್ಟ, "ಯೌವನ ಸಹಜ ವಯಸ್ಸಿನಲ್ಲಿನ ನಮ್ಮ ಮಾತುಗಳು ಕೇವಲ ಪುಸ್ತಕ ಪಾಂಡಿತ್ಯದಿಂದ ಕೂಡಿದ ಭಾವಾವೇಶದ ಮಾತುಗಳು, ದೇಶದ ಬಡತನದ ಬಗ್ಗೆ ಅಜ್ಞಾನದ ಬಗ್ಗೆ, ಭ್ರಷ್ಟಾಚಾರದ ಬಗ್ಗೆ, ಲಂಚಗುಳಿತನದ ಬಗ್ಗೆ, ನಮ್ಮ ಜಿಡ್ಡುಗಟ್ಟುವ ಕಂದಾಚಾರದ ಬಗ್ಗೆ ಜಾತಿ ಪದ್ಧತಿಯ ಅನಿಷ್ಟಗಳ ಬಗೆಗಿನ ನಮ್ಮ ಮಾತು ಕೇವಲ ಪುಸ್ತಕ ಪಾಂಡಿತ್ಯದ ಪ್ರತೀಕವೇ ಹೊರತು ವಾಸ್ತವ ಬದುಕಿಗೆ ಅಲ್ಲವೆಂದು ಒಪ್ಪಿಕೊಳ್ಳುವ (ನಿರಂತರ ; ೦೪ ; ಪುಟ ೪೩-೪೮) ಆಕೆಯ ಮಾತುಗಳು ಇಂದಿನ ಎಲ್ಲಾ ಯುವ ಜನರ ಅವೇಶದ ನುಡಿಗಳಿಗೆ ಪ್ರತೀಕವಾಗಿವೆ. ವಾಸ್ತವತೆಯ ಅರಿವಿಲ್ಲದ ಆ ಮಾತುಗಳಲ್ಲಿ,

ಇಂದಿನ ಈ ಬದುಕು ಹೇಗೆ ಎನ್ನುವ ಬಗ್ಗೆ ಆಕೆಯಾಡುವ ಮಾತುಗಳು "ನನ್ನ ಗಂಡನ ಈ "ಎಲ್ಲ ಐಶ್ವರ್ಯ, ವೈಭವ, ಅಂತಸ್ತು ನಿಂತಿರುವುದು ಲಂಚದ, ಭ್ರಷ್ಟಾಚಾರದ ಆಸ್ತಿಭಾರದ ಮೇಲೆ, ಎಂದು ಆದರೆ ನಾನೇನು ತಾನೇ ಮಾಡಬಲ್ಲೆ? ಇದನ್ನೆಲ್ಲಾ ತಾತ್ಸಾರದಿಂದ ನೋಡುತ್ತೇನೆ. ಅಷ್ಟೇ. ನನ್ನ ಒಡವೆಗಳಾಗಲಿ, ವಸ್ತ್ರಗಳಾಗಲಿ, ನಾನಾಗಿ ಬಯಸಿ ಕೊಂಡದ್ದಲ್ಲ ಅವರೇ ತಂದು ಜಿಟ್ಟಿರುವುದು. ನಾನು ಪ್ರದರ್ಶನದ ಬೊಂಬೆಯಂತೆ ಇವನ್ನೆಲ್ಲಾ ತೊಟ್ಟು ಪಾನಕೂಟಗಳಿಗೆ ಹೋಗಬೇಕಾಗುತ್ತೆ, ಹೋಗುತ್ತೇನೆ. ಹೆಂಡತಿಯಾಗಿ ನನ್ನ ಕರ್ತವ್ಯಗಳನ್ನು ಸಹ ನಾನು ನಮ್ಮ ಶ್ರೇಷ್ಠ ಸಂಸ್ಕೃತಿಗೆ ಅನುಸಾರವಾಗಿ ನಿರ್ವಹಿಸುತ್ತಿದ್ದೇನೆ". (ಅದೇ ಪು : ೧೮) ಎನ್ನುವ ಅವಳ ಮಾತುಗಳಲ್ಲಿನ ವ್ಯಂಗ್ಯದಿಂದ ಕೂಡಿದ ಹರಿತವಾದ ಮಾತುಗಳು ನಮ್ಮ ವ್ಯವಸ್ಥೆಯನ್ನು ಕುರಿತು ವಿಡಂಬನೆಯ ಮಾತುಗಳಾಗಿವೆ ಎಂದು ಗುರುತಿಸಬಹುದು.

ಕಥಾನಾಯಕಿಯು ತನ್ನ ಮನಸ್ಸನ್ನು ಎಷ್ಟು ಪ್ರಾಮಾಣಿಕತೆಯಿಂದ ತೆರೆದಿದ್ದಾಳೆ ಎನ್ನುವುದಕ್ಕೆ " ಮನವೊಲ್ಲದ ಗಂಡನ ಸನಿಹ ಒಡನಾಟ ಪ್ರಾಯದ ಹೆಣ್ಣಿನ ಮನಸ್ಸಿಗೆ ಅಸಹ್ಯವೆನಿಸಬಹುದೇ ಹೊರತು, ಅವಳ ದೇಹಕ್ಕಲ್ಲ" (ಅದೇ ಪುಟ ; ೧೮) ಎನ್ನುವಲ್ಲಿ ಆಕೆ ಎಂದೆಂದಿಗೂ ಮನಪೂರ್ವಕವಾಗಿ ಮನಸಾರೆ ತನ್ನ ಗಂಡನಿಗೆ ಅರ್ಪಿಸಿಕೊಳ್ಳಲಾರೆ ಎಂಬ ಸತ್ಯವನ್ನು ನಿರ್ಭಿಡೆಯಿಂದ ಒಪ್ಪಿಕೊಳ್ಳುವುದು ನೈಜತೆಯಿಂದ ಕೂಡಿದೆ.

ಆ ಕಥೆಯಲ್ಲಿ ವ್ಯಕ್ತವಾಗುವ ಮತ್ತೊಂದು ಬಹಳ ಮುಖ್ಯವಾದ ಅಂಶವೇನೆಂದರೆ ಇಂದಿನ ವಿದ್ಯಾವಂತ ಜಾಣ ಸಭ್ಯರ ಮುಖವಾಡದ ಹಿಂದಿನ ಬದುಕಿನ ಬಗ್ಗೆ ನಾಯಕಿ ಹೇಳುವ ನಿಗೂಢತೆಗಳು ಏನೆಂದರೆ, ಸಮಾಜದಲ್ಲಿ ಅಧಿಕಾರ ಹಣ, ಅಂತಸ್ತಿನ ಹಿಂದೆ ಬಿದ್ದಿರುವವರು ಸ್ವಂತ ಬದುಕಿನಲ್ಲಿ ತ್ಯಾಗಕ್ಕೂ ಸಿದ್ಧರಾಗುತ್ತಾರೆ. ಸಮಾಜಕ್ಕೆ ಹೆದರಿ ಸಭ್ಯರಂತೆ ಮುಖವಾಡ ಹಾಕಿಕೊಳ್ಳುವರು, "ನಮ್ಮ ವಿದ್ಯೆ ಘನತೆ ವೈಭವಗಳು ನಮಗೆ ಏನು ಕಲಿಸಿಲ್ಲದಿದ್ದರೂ ಸಭ್ಯರಂತೆ, ಸೋಗಿನ ಕಪಟದ, ಟೊಳ್ಳು ಜೀವನ ನಡೆಸಲು ಬೇಕಾದ ತಾಳ್ಮೆ, ಕೃತ್ರಿಮಗಳನ್ನು ಖಂಡಿತ ಕಲಿಸಿಕೊಟ್ಟಿವೆ" ( ಅದೇ ಪುಟ ; ೧೪) ಎನ್ನುವಲ್ಲಿ ವಿಷಾದದಿಂದ ಕೂಡಿದ ವ್ಯಂಗ್ಯದ ಮಾತುಗಳು, ಸೋಗಿನ ಮುಖವಾಡದ ಬದುಕು ಸಾಗಿಸುವ ವಿದ್ಯಾವಂತ ಜನತೆಯ ಬದುಕಿನ ರೀತಿಗೆ ಉದಾಹರಣೆ ಎಂದು ಹೇಳಬಹುದು. ಹಾಗೆಯೇ ಮುಂದುವರಿದು "ಭಾವಾವೇಶ ಸಾಧ್ಯವಾಗುವುದು ಮುಗ್ಧ, ನೇರ ಸರಳ ವ್ಯಕ್ತಿಗಳಿಗೆ ಮಾತ್ರ. ಕೊಳಕು ಮನಸ್ಸಿನ ಕೊಳೆತ ಹೃದಯದ, ಜಾಣ ಸಭ್ಯ, ವಿದ್ಯಾವಂತ ವಂಚಕರಿಗೆ ಅಲ್ಲ, ಆತ್ಮ ಸತ್ತರೂ ತೋರಿಕೆಗೆ ಬದುಕಿರುವ 'ಮಮ್ಮಿ' ಗಳು ಹೆಣ ಕೊಳೆಯದಂತೆ ಎಚ್ಚರಿಕೆ ವಹಿಸಿದ್ದೇವೆ ಎಷ್ಟೊಂದು ಸುಗಂಧ ದ್ರವ್ಯಗಳನ್ನು ನಮ್ಮೊಳಗೆಲ್ಲ ತುಂಬಿಕೊಂಡಿದ್ದೇವೆ" (ಅದೇ ಪುಟ ; ೧೪) ಎಂದು ಹೇಳುವ ಮೂಲಕ ಇಡೀ ವ್ಯವಸ್ಥೆಯ ಬಗ್ಗೆ ಒಂದು ವರ್ಗದ ಜನರ ಕೃತ್ರಿಮವಾದ ಬದುಕಿನ ಮುಖವಾಡವನ್ನು ಎಷ್ಟು ಪ್ರಮಾಣಿಕವಾಗಿ ಹೊರತೆಗೆಯುತ್ತಾರೆ ಎಂಬುದು ಮುಖ್ಯವೆನಿಸುತ್ತದೆ.

ಇಲ್ಲಿ ನಾಯಕಿ ಕಥೆಯ ಕೊನೆಯಲ್ಲಿ ತಾನು ಕಳೆದುಕೊಂಡ ಪ್ರೇಮ ತನ್ನ ಮನೆಯಾಳುಗಳ ಮೂಲಕ ಪರಿಪೂರ್ಣವಾಗಲು ಸಹಕರಿಸುತ್ತಾಳೆ. ಮಲ್ಲಿ, ಜಾನಿಯರ ಮದುವೆಯಾಗಲು ತಾನು ಸಹಾಯ ಮಾಡುತ್ತಾಳೆ, ಹಾಗೆಯೇ ಮಲ್ಲಿ ಜಾನಿಯಂತ ಸರಳ, ಮುಗ್ಧವಾದ ಅವರಿಬ್ಬರ ಪ್ರೀತಿ, ಮತ್ತು ಅವರು ತೆಗೆದುಕೊಳ್ಳುವ ನಿರ್ಧಾರದ ಹಿಂದಿನ ಆತ್ಮಸ್ಥೈರ್ಯ ತನ್ನಲ್ಲಿಲ್ಲವೆಂಬ ಅರಿವು ಕೆಲವೊಮ್ಮೆ ಸಮಾಜದಲ್ಲಿ ಒಂದು ವರ್ಗಕ್ಕೆ ಮಾತ್ರ ಆ ರೀತಿಯ ನಿರ್ಧಾರ ಕೈಗೊಳ್ಳುವ ಸ್ಥೈರ್ಯ ಬರುತ್ತದೆಂದು ಹೇಳುವ ಆಕೆಯ ಮಾತುಗಳು, ಸರಳ ವ್ಯಕ್ತಿಗಳ, ಧೈರ್ಯ, ನಿರ್ಧಾರ, ಪ್ರಾಮಾಣಿಕತೆ, ಎಲ್ಲರಲ್ಲಿ ಬರಲು ಸಾಧ್ಯವಾಗದೆಂಬ ಸತ್ಯದ ಸ್ಪಷ್ಟನೆಯಾಗಿದೆ. ಮಲ್ಲಿ, ಜಾನಿಯಂಥ ಸಾಮಾನ್ಯ ಸರಳ ವ್ಯಕ್ತಿಗಳು ಜೀವನದ ಸಮಸ್ಯೆ ಸಂಧಿಗ್ದತೆಗಳನ್ನು ನೇರವಾಗಿ ನಿರ್ಭಯವಾಗಿ, ಪ್ರಾಮಾಣಿಕವಾಗಿ ಎದುರಿಸುತ್ತಾರೆ. ಪ್ರತಿಕ್ರಿಯಿಸುತ್ತಾರೆ. ಜೀವನಕ್ಕೆ ತಮ್ಮನ್ನು ತಾವು ಸಂಪೂರ್ಣವಾಗಿ ಒಪ್ಪಿಸಿಕೊಳ್ಳುತ್ತಾರೆ, ಇವರೇ ಮೇಲು ಯಾಕೆಂದರೆ ನಾವು ಸಂಕೀರ್ಣವೆಂದು ಭ್ರಮಿಸಿರುವ, ನಮ್ಮ ವ್ಯಕ್ತಿತ್ವಗಳ ವಿಕಾರಗಳು ವಂಚಕ ಸೋಗುಗಳಲ್ಲವೇ? ಎಂದು ಕೊರಗುತ್ತಲೇ ಸಾಯುತ್ತೇವೆ " (ಅದೇ ಪುಟ ; ೨೨)

ಈ ಕಥೆಯಲ್ಲಿ ಸಾಮಾಜಿಕ ಬದುಕಿನ ತೆರೆ ಮರೆಯಲ್ಲಿ ಅಧಿಕಾರ ಅಂತಸ್ತು ಎಂಬ ಪರದೆ ಕಟ್ಟಿ ಅದರ ಹಿಂದೆ ಸೋಗಿನ ಮುಖವಾಡ ಹಾಕಿಕೊಂಡು ಬದುಕುತ್ತಿರುವ ನಾನಾ ಮುಖಿಗಳ ಪ್ರತಿನಿಧಿಯಾಗಿ ಬರುವ ನಾಯಕಿಯ ಬದುಕಿನ ಸಾಂಕೇತಿಕತೆಯೊಂದಿಗೆ ಇಂದಿನ ವಿದ್ಯಾವಂತ ಸಭ್ಯರೆನಿಸಿಕೊಂಡಿರುವ ಎಷ್ಟೋ ಮಂದಿಯ ಬದುಕಿನ ವಾಸ್ತವ ಸತ್ಯವನ್ನು ತಿಳಿಸುತ್ತಾ ಶೇಖರ್‌ನಂತಹ ಮೇಲುವರ್ಗದ ಮತ್ತು ಮಲ್ಲಿ, ಜಾನಿಯಂತ ಕೆಳಸ್ತರದ ಬದುಕು ಪರಸ್ಪರ ಮುಖಾಮುಖಿಯಾಗುವುದರೊಂದಿಗೆ ಸಾಮಾಜಿಕ ಬದುಕಿನ ಕಟು ವಾಸ್ತವವನ್ನು ತೆರೆದಿಡುವ ಬಗೆ, ಸರಳ ಸಾಮಾನ್ಯ ವಿಷಯದ ಮೂಲಕ ಆಕರ್ಷಕವಾಗಿ ನಿರೂಪಿಸುವ ಶೈಲಿ ಓದುಗರನ್ನು ಆಕರ್ಷಿಸುತ್ತದೆ ಎಂದು ಹೇಳಬಹುದು.

' ನಿರಂತರ' ಕಥೆಯು ಪ್ರೇಮದ ಕತೆಯಾಗಿದೆ. ಕಥಾನಾಯಕ ಪ್ರೇಮದ ಬಗ್ಗೆ ನೂರೆಂಟು ಕನಸ್ಸು ಹೊತ್ತವನು, ಭಾಗ್ಯಳನ್ನು ಪ್ರೀತಿಸುತ್ತಾನೆ. ಆದರೆ ಅವರ ಪ್ರೇಮಕ್ಕೆ ಸಂಪ್ರದಾಯಬದ್ಧ ಕುಟುಂಬದ ವಿರೋಧ, ಹಲವಾರು ಸಹಜ ಅಡೆತಡೆಗಳಿಂದ ಸಾಕಷ್ಟು ನೋವು ಅವಮಾನ ಅನುಭಿಸಿದ ನಾಯಕ ಉದ್ಯೋಗ ಕಳೆದುಕೊಂಡು ಊರು ಬಿಡಬೇಕಾಯಿತು. ಕೊನೆಗೆ ತಾನು ಪ್ರೀತಿಸುತ್ತಿದ್ದ ಪ್ರೇಮಿಯನ್ನು ಬಿಟ್ಟಂತೆ, ತಾನು ಗೌರವಸುತ್ತಿದ್ದ, ಪ್ರೀತಿಸುತ್ತಿದ್ದ, ಶಿಕ್ಷಕ ವೃತ್ತಿಯು ದೊರೆಯದೆ ಬ್ಯಾಂಕ್ ಉದ್ಯೋಗಿಯಾಗಿ ಮದುವೆಯು ಆಗುತ್ತದೆ. ಒಬ್ಬ ಮಗನನ್ನು ಪಡೆದಿರುತ್ತಾನೆ. ತಾನು ಪ್ರೇಮದಲ್ಲಿ ಸೋತರು ತಂಗಿಯ ಪ್ರೇಮವಾದರೂ ಸಫಲವಾಗಲೆಂದು ಅವಳಿಗೆ ಸಹಾಯಕನಾಗಿ ನಿಲ್ಲುತ್ತಾನೆ. ತಂಗಿ ' ಸುಮ' ಮತ್ತು ರಾಜರೆಡ್ಡಿ' ಯ ಪ್ರೀತಿಯು ಸಹಜವಾದ ಅಡೆತಡೆಗಳಲ್ಲೇ ಸಾಗಿದರು ತಂದೆ ತಾಯಿ ಅಣ್ಣನ ವಿರೋಧ, ರಾಜಾರೆಡ್ಡಿಯ ಮನೆಯಲ್ಲಿನ ವಾತಾವರಣ, ಸುಮಳನ್ನು ಮದುವೆ ಮಾಡಿಕೊಳ್ಳುವುದಕ್ಕೆ ಹಿಂಜರಿಯುವ ರಾಜರೆಡ್ಡಿ ಮನೆಯವರಲ್ಲಿನ ಸಹಜವಾದ ಆಸೆ ಹಣದ ಮೇಲಿನ ವ್ಯಾಮೋಹ ಜೊತೆಗೆ ಮಗಳ ಮದುವೆ

ಆಗುವುದನ್ನು ಕಳೆದುಕೊಳ್ಳುವ ಇರಾದೆ ತಿಳಿದ ಸುಮಾ ಅಣ್ಣನ ಬಳಿ ನೋವುಗಳನ್ನೆಲ್ಲಾ ತೋಡಿಕೊಂಡು ಅತ್ತು ಸಮಾಧಾನಗೊಂಡು ಸುಮ ಸಂಯಮದಿಂದ ಕಾಯುತ್ತಾ ಕಾಲಕ್ಕೆ ಬಿಟ್ಟು ಸುಮ್ಮನಾಗುತ್ತಾಳೆ. ಇಲ್ಲಿಯು ಪ್ರೀತಿ ಸಾಕಾರಗೊಳ್ಳುವುದು ಅನುಮಾನವೇ ಆಗುತ್ತದೆ ಎನ್ನುವಲ್ಲಿ ಕಥೆಯ ಮುಕ್ತಾಯವಿದೆ.

ಕಥೆಯ ಶೀರ್ಷಿಕೆಯೇ ಹೇಳುವಂತೆ ' ನಿರಂತರ ' ಈ ಸಮಾಜದಲ್ಲಿ ಪ್ರೇಮ ಪ್ರೇಮಿಗಳ ಈ ಕಥೆ, ನಿತ್ಯ ನಿರಂತರ ಎಂಬುದನ್ನು ಪ್ರೇಮಿಗಳಿಗೆ ಎದುರಾಗುವ ಅಡೆ ತಡೆಗಳು, ಸಹಜವಾದ ರೀತಿಯಲ್ಲಿ ಚಿತ್ರಣಗೊಂಡಿವೆ. ಜೊತೆಗೆ ಹೆಣ್ಣಿನ ಬಗ್ಗೆ ಸಮಾಜ ತಾಳುವ ಧೋರಣೆಯ ಪ್ರಶ್ನೆಯನ್ನು ಕಥೆಗಾರರು ಮಾರ್ಮಿಕವಾಗಿ ಎತ್ತುತ್ತಾರೆ ಜೊತೆಗೆ ಗಂಡಿನ ಬಗೆಗಿನ ಮೃದು ಧೋರಣೆಯನ್ನು ನಿರೂಪಿಸುತ್ತಾರೆ. ಪ್ರೀತಿಯಲ್ಲಿ ಬಿದ್ದವರು ತಪ್ಪು ಯಾರದಾದರೂ ಶಿಕ್ಷೆ ಅನುಭವಿಸಬೇಕಾದುದು ಹೆಣ್ಣೆ ಎನ್ನುವಂತಹ ಅಂಶ ಇಲ್ಲಿ ವ್ಯಕ್ತವಾಗಿದೆ.

ಪ್ರೇಮಿಗಳಿಗೆ ಹೇಳುವ ಬುದ್ಧಿ ಮಾತುಗಳು ಸಹಜವೇ ಪ್ರೇಮವಷ್ಟೆ ಅಲ್ಲ ಬದುಕು, ಅದರಾಚೆಗಿನ ಬದುಕಿನಲ್ಲಿ ಸಮಾಜದೊಟ್ಟಿಗೆ ಬಾಳಬೇಕಾದಾಗ ಎದುರಾಗುವ, ಎದುರಿಸಬೇಕಾದ ಸಮಸ್ಯೆಗಳನ್ನುತಿಳಿಸುತ್ತ ಲೇಖಕರು ಹೇಳುವ ಮಾತು " ಅವನೋ ಗಂಡಸು ನಮ್ಮ ದರಿದ್ರ ಸಮಾಜದಲ್ಲಿ ಹೇಗೋ ಬಚಾವಾಗಿ ಬಿಡುತ್ತಾರೆ, ನೀನೇನು ಮಾಡ್ತೀಯಾ. ನಿನ್ನ ಭವಿಷ್ಯದ ಬಗ್ಗೆ ಯೋಚಿಸಬೇಕಾದುದು ನಮ್ಮ ಕರ್ತವ್ಯ ವೆಂದು ಹೇಳುತ್ತಾರೆ. ಬದುಕಿನಲ್ಲಿ ಒಂದು ನೆಲೆಗೆ ತಲುಪಿದಾಗ ಪ್ರೀತಿ ಪ್ರೇಮ ಎನ್ನುವ ಮಾತು ಗಮನಾರ್ಹವೆ.

ಇಲ್ಲಿ ಬಹಳ ಮುಖ್ಯವಾದ ಅಂಶವೆಂದರೆ ಸಾಮಾನ್ಯವಾದ ಪ್ರೀತಿ ಪ್ರೇಮಿಗಳು ಪಡುವ ಅವಸ್ಥೆಗಳು, ಕೊನೆಗೆ ಪರಿಸ್ಥಿತಿಯ ಜೊತೆಗೆ ರಾಜಿಯಾಗಿ ಬಿಡುವುದು. ಆದರೂ ಸಂಪ್ರದಾಯ ಬದ್ಧ ಸಾಮಾಜಿಕ ವ್ಯವಸ್ಥೆಯ ಬಗ್ಗೆ ಆಕ್ರೋಶವಿದೆ. ಸಿಡಿದೇಳುವ ಮನೋಭಾವ ಕಂಡು ಬರುವುದಿಲ್ಲ. ಕಥಾನಾಯಕ ತಂಗಿಯ ಪ್ರೀತಿಗೆ ಒತ್ತಾಸೆಯಾಗಿ ನಿಂತರೂ ಧೈರ್ಯವಾಗಿ ಎಲ್ಲವನ್ನು ಎದುರಿಸಿ ಪ್ರೇಮವನ್ನು ಪಡೆಯಬಲ್ಲ ಆತ್ಮಸ್ಥೈರ್ಯ ಕಾಣುವುದಿಲ್ಲ. ತನ್ನ ಅಸಹಾಯಕತೆಯಿಂದಾಗಿ ವ್ಯವಸ್ಥೆಯನ್ನು ದೂರಬಲ್ಲಷ್ಟು ಪ್ರಬುದ್ಧ ಮನಸ್ಸು ಅವನಿಗಿದೆ. ತಂಗಿಯನ್ನು ಕುರಿತು ಅವನಾಡುವ ಮಾತುಗಳು "ಇಂದೇನೋ ನೀನು ಬೇಕಾಬಿಟ್ಟಿ ಆ ಹುಡುಗನೊಟ್ಟಿಗೆ ಎಲ್ಲೆಂದರಲ್ಲಿ ಓಡಾಡಿ ಬಿಡಬುದು. ನಾಳೆ ಪರಿಸ್ಥಿತಿಗಳ ಒತ್ತಡಕ್ಕೆ ಮಣಿದು ಅವನೇನಾದರೂ ನಿನ್ನನ್ನು ಮದುವೆಯಾಗಲು ನಿರಾಕರಿಸಿದರೆ, ಆಗ ನಿನ್ನ ಪೂರ್ವಇತಿಹಾಸ ಬಲ್ಲ ಯಾವ ಯುವಕ ತಾನೇ ನಿನ್ನನ್ನು ಮದುವೆಯಾಗಲು ಮುಂದೆ ಬಂದಾನು? ಈ ವ್ಯವಸ್ಥೆ ತುಂಬಾ ಕ್ರೂರಿ, ಹೃದಯ ಹೀನ. (ನಿರಂತರ ; ಪುಟ ; ೮೯) ಹತಾಶಳಾಗಿ ಕೊನೆಗೆ ಭಗ್ನಪ್ರೇಮಿಯಾಗಿ ಇಲ್ಲವೆ ಆತ್ಮಹತ್ಯೆಗೆ ಶರಣಾಗಬೇಕಾಗುತ್ತದೆ" ಎನ್ನುವಲ್ಲಿ ವ್ಯವಸ್ಥೆಯ ಬಗೆಗಿನ ಆಕ್ರೋಶ ವ್ಯಕ್ತವಾಗುತ್ತದೆ. ಹಾಗೆಯೇ ಪ್ರೇಮಿಗಳಿಗೆ ಹೇಳುವ ಸಮಾಧಾನ, ಸಾಂತ್ವನ ಬುದ್ಧಿಮಾತುಗಳು ಸರ್ವೆ ಸಾಮಾನ್ಯವೆನಿಸಿದರು. ಕಥೆಯ ನಿರೂಪಣಾ ಶೈಲಿ ಮೆಚ್ಚುಗೆಯಾಗುತ್ತದೆ. ಪ್ರೇಮಿಗಳನ್ನು ದೂರ

ಮಾಡಿದರು, ಪ್ರೇಮದ ಅನುಭವದಿಂದ ದೂರ ಮಾಡಲು ಈ ಸಮಾಜಕ್ಕೆ ಸಾಧ್ಯವೇ? ಎನ್ನುವಲ್ಲಿ " ನಮ್ಮ ಅಂತರಂಗದಾಳದಲ್ಲಿ ನಿರಾಳ ಅಡಗಿ ಕುಳಿತ ನಮ್ಮ ಖಾಸಗಿ ಒಲವು ನಿಲುವುಗಳನ್ನು ಬಡಿದು ಬಗ್ಗಿಸಿ ತಿರುಚಿ ಬದಲಿಸಬಲ್ಲ ಭ್ರಷ್ಟ ಶಕ್ತಿ ಸಮಾಜಕ್ಕಿನ್ನು ದಕ್ಕಿಲ್ಲವಲ್ಲ " (ಅದೇ ; ಪುಟ ; ೮೭) ಎನ್ನುವಲ್ಲಿ ನಾಯಕನಲ್ಲಿ ಪ್ರೀತಿಯ ಅನುಭವದ ಆರಾಧನೆ ಇನ್ನು ಜೀವಂತವಾಗಿಯೇ ಉಳಿದಿದೆ ಎನ್ನುವುದು ಸ್ಪಷ್ಟವಾಗುತ್ತದೆ.

ಪ್ರೇಮಿಸುವುದು ಪ್ರೇಮಿಸಲ್ಪಡುವುದು, ಎಂಥ ಸುಖದ ಸಾರ್ಥಕ ದಿವ್ಯ ಅನುಭವ ಎಂಬ ಸಾರ್ವಕಾಲಿಕ ಸತ್ಯದ ವೈಯುಕ್ತಿಕ ಅರಿವು ನಾಯಕನಿಗಿದ್ದರೂ ಅವನ್ನು ಸಾಕಾರ ಮಾಡಿಕೊಳ್ಳಲು ಅಸಹಾಯಕರಾಗುವಲ್ಲಿನ ಸಂದರ್ಭ, ಸನ್ನಿವೇಶ, ಪರಿಸ್ಥಿತಿಯ ಒತ್ತಡಗಳಿಂದ ದೂರವಾಗಲಾರದೆ ತಮ್ಮ ದುರ್ಬಲತೆಯ ಬಗೆಗಿನ ಕೋಪ, ಆವೇಶಗಳು ಸಹಜವಾಗಿ ಮೂಡಿ ಬಂದು ಮತ್ತೊಂದು ಪ್ರೇಮಕ್ಕೆ ಈ ಅನುಭವಗಳೇ ಆಧಾರವಾಗಿ ಇಲ್ಲಿ ಪ್ರೇಮವನ್ನು ಒಗ್ಗೂಡಿಸಲು ಕಾಯುವಂತೆ ಮಾಡುತ್ತದೆ. ತಂಗಿ ಸುಮಾಳಿಗೆ ಶುಭ ಹಾರೈಸುತ್ತಾ " ನಾನು ಅವಳೊಂದಿಗೆ ಆಸೆಯಿಂದ ಅನುಮಾನದಿಂದ, ಆತಂಕದಿಂದ , ಸಂಯಮದಿಂದ ಕಾಯತೊಡಗಿದೆ" ಎನ್ನುವ ಮೂಲಕ ಕಥೆ ಅಂತ್ಯಗೊಂಡಿದೆ. ಪ್ರೇಮದ ಹಪಹಪಿಸುವಿಕೆ ಪ್ರೇಮಿಯ ತಳಮಳ, ತಲ್ಲಣಗಳು ಸಂಯಮಕ್ಕೆ ಶರಣಾಗುವಮೂಲಕ ಪ್ರೇಮದ ಆರಾಧನೆ ನಡೆಯುವುದು ಕಥೆಯ ಮೆಚ್ಚುಗೆಗೆ ಕಾರಣವಾಗಿದೆ.

ಕೆಲವೊಮ್ಮೆ ಪ್ರೇಮ ಸಫಲವಾಗುವುದು ಪ್ರೇಮಿಗಳ ವಿವೇಚನಾ ಪೂರ್ವಕವಾದ ನಡೆಯ ಮೂಲಕ, ಪ್ರೇಮಿಗಳು ಬುದ್ಧಿವಂತಿಕೆಯಿಂದ ಹೆಜ್ಜೆ ಹಾಕಿದರೆ ಪ್ರೇಮ ಒಂದಾಗುತ್ತದೆ ಎಂಬುದನ್ನು ತಿಳಿಸುವ ' ಹೀಗೋ ಆಗುವುದುಂಟು' ಕಥೆಯ ವಸ್ತು ವಿಷಯ ನಿರೂಪಣಾ ಶೈಲಿ ಓದುಗರ ಮೆಚ್ಚುಗೆಗೆ ಅರ್ಹವೆನಿಸುತ್ತದೆ.

ಉಪನ್ಯಾಸಕ ಶಂಕರ ತನ್ನ ವಿದ್ಯಾರ್ಥಿ ರಾಧೆಯನ್ನು ಪ್ರೀತಿಸುವುದು. ಪರಸ್ಪರ ಪ್ರೀತಿಯನ್ನು ಹೇಳಿಕೊಳ್ಳಲಾರದೆ ಹೋದರೂ ಪ್ರೀತಿ ಪ್ರಾಮಾಣಿಕವಾಗಿತ್ತು, ಪರಿಸ್ಥಿತಿ ಸಂಪ್ರದಾಯಗಳ ಅಡ್ಡಗೋಡೆಗಳಿಂದ ಹೆಣ್ಣು ಮಕ್ಕಳ ಪ್ರೀತಿ ನಿರಾಕರಿಸಲು ಸಿದ್ಧರಾಗಲು ಕಾರಣ, ತಂದೆ ತಾಯಿಯ ಪ್ರೀತಿಯು ಅವರನ್ನು ಕಟ್ಟಿ ಹಾಕುತ್ತದೆ. ಇಲ್ಲಿಯೂ ರಾಧ ತಂದೆ ತಾಯಿಗಾಗಿ ಪ್ರೀತಿಯನ್ನು ನಿರಾಕರಿಸಲು ಸಾಧ್ಯವಾದಾಗ ಉಪನ್ಯಾಸಕನ ವಿವೇಚನಾ ಪೂರ್ಣ ಸಕಾಲಿಕ ಬುದ್ಧಿವಂತಿಕೆಯಿಂದ ಸುಖಾಂತ್ಯವಾಗಿ ಪ್ರೇಮ ಗೆಲ್ಲುತ್ತದೆ. ಪ್ರೇಮಿಗಳಿಗೆ ಎದುರಾಗುವ ಸಹಜ ಅಡ್ಡಿ ಆತಂಕಗಳಿದ್ದರೂ ಕೂಡ ಪ್ರೇಮಿಯ ಬುದ್ಧಿವಂತಿಕೆ, ಪ್ರೇಮವನ್ನು ಉಳಿಸುತ್ತದೆ. ರಾಧೆಯ ಮನಸ್ಥಿತಿ ಮಧ್ಯಮ ವರ್ಗದ ಸಂಪ್ರದಾಯ ಶರಣತೆಗೆ ಒಪ್ಪುವಂತದು, ಅದರಾಚೆ ಬರಲಾಗದ, ಒಳಿತನ್ನು ಬಯಸುವ, ಪ್ರೇಮವನ್ನು ಒಪ್ಪಿ ಸಮಾಜವನ್ನು ಎದುರಿಸಲಾರದ ದುರ್ಬಲತೆ, ಸಹಜವೆನ್ನುವ ರೀತಿಯ ಚಿತ್ರಣವೇ ಆದರೂ ಶಂಕರನ ವಿವೇಚನಾಯುತ ಪ್ರಬುದ್ಧ ಹೆಜ್ಜೆ ಪ್ರೌಢವಾದುದು. ಸಕಾಲಕ್ಕೆ ಸೂಕ್ತ ತಿಳುವಳಿಕೆ ನೀಡುವುದು,

ಮತ್ತು ಸಂಯಮಪೂರ್ಣವಾದ ಅವನ ನಡತೆಯ ಮೂಲಕ ಪ್ರೇಮವನ್ನು ಉಳಿಸಿಕೊಳ್ಳುವುದು ಗಮನಾರ್ಹವೆನಿಸಿದರೂ ಕಥೆಯ ಅಂತ್ಯದ ವಿಷಯ ರಾಧೆಯ ತಂದೆ, ತಾಯಿ ಅಸಹಾಯಕತೆಯು ಇದಕ್ಕೆ ಕಾರಣ ಎನ್ನುವುದು ಗಮನಿಸಬೇಕಾದ ಅಂಶವಾಗಿದೆ. ಕಥೆಯಲ್ಲಿನ ಈ ಬಗೆಯ ಸರಳತೆ. ಸಾಮಾನ್ಯ ವಸ್ತು ವಿಷಯದ ಆಕರ್ಷಕವಾದ ಶೈಲಿಯೇ ಜನಪ್ರಿಯತೆಗೆ ಕಾರಣವೆಂದು ಹೇಳಬಹುದು.

ಲಕ್ಷ್ಮಣರಾವ್ ರವರ ಕಥೆಗಳಲ್ಲಿ ಪ್ರೀತಿ, ಪ್ರೇಮ ಪ್ರಣಯದಂತ ವಸ್ತುಗಳನ್ನೊಳಗೊಂಡ ಈ ಕಥೆಗಳ ನಿರೂಪಣೆ, ಆಕರ್ಷಕವಾಗಿದೆ. ಸರಳವಾದ ಸುಲಭವಾಗಿ ಅರ್ಥವಾಗುವ ನೇರವಾದ ವಿಷಯ ನಿರೂಪಣೆ ಶೈಲಿ ಉಪಮೆ ರೂಪಕಗಳಿಲ್ಲದ, ದ್ವಂದ್ವ ಕ್ಲಿಷ್ಟತೆಗಳಲ್ಲಿನ ಕಥೆಯ ಬೆಳವಣಿಗೆ, ಸರಳ ಸಂಭವವಾದ ಶೈಲಿಯೇ ಜನಪ್ರಿಯತೆ ಗಳಿಸಲು ಕಾರಣವಾಗುವ ಅಂಶಗಳೆಂದು ಗುರುತಿಸಬಹುದು.

ಪ್ರೇಮ ಪ್ರೀತಿ, ಇವುಗಳಿಂದ ಹೊರತಾದ ಕಥೆಗಳು ಅವರ ಕಥಾ ಸಂಕಲನದಲ್ಲಿವೆ. ಅವುಗಳ ವಿಶಿಷ್ಟತೆಗಳಿಂದಾಗಿ ಅವು ಪ್ರಮುಖವೆನಿಸುತ್ತವೆ. ' ಒಬ್ಬಂಟಿಗಳು ' ಕಥೆ ವಸ್ತು ವಿಷಯ ಪ್ರೇಮದ ಸುತ್ತ ಸುತ್ತುವುದು ಆದರೂ ಕೂಡ ಕಥೆಯ ಒಳ ಅರ್ಥ ವಿಶಿಷ್ಟವೆನಿಸುತ್ತದೆ. ಅಂದರೆ ಮನುಷ್ಯನ ಒಂಟಿತನದ ಬಗ್ಗೆ ಕಥೆಗಾರರು ವಿಶಿಷ್ಟವಾದ ರೀತಿಯಲ್ಲಿ ಅದನ್ನು ತಿಳಿಸಿರುವುದು ಮುಖ್ಯ. ಪ್ರತಿಯೊಬ್ಬರು ಒಂಟಿಯೇ ಎಂಬುದಕ್ಕೆ ಚಂದ್ರು ವಿದ್ಯಾಳನ್ನು ಪ್ರೀತಿಸುತ್ತಾನೆ. ಆದರೆ ವಿದ್ಯಾಳ ನಡೆ ಸಮಯೋಚಿತವಾದುದು ಅಂದರೆ ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡ ವಿದ್ಯಾ ತನ್ನ ಅಣ್ಣನ ತ್ಯಾಗವನ್ನು ಅರಿತುಕೊಂಡು ತಾನು ಸ್ವಾರ್ಥಿಯಾಗಲು ಒಪ್ಪದೇ, ಅಣ್ಣನ ಭಾರ ಕಡಿಮೆ ಮಾಡಲು ನಿರ್ಧರಿಸುವುದು ಪ್ರಬುದ್ಧ ನಡತೆಯಾಗಿದೆ. ಬದುಕಿನ ವಾಸ್ತವತೆಗೆ ತನ್ನನ್ನು ತಾನು ತೆರೆದು ಕೊಳ್ಳುವ ಮಟ್ಟಿಗೆ ಪ್ರಬುದ್ಧಳಾಗಿದ್ದಾಳೆ. ನೀನಿಲ್ಲದ ನಾನು ಒಂಟಿಯಾಗಿ ಸಾಯುತ್ತೇನೆಂದಾಗ, ಶುದ್ಧ ಸುಳ್ಳು, ಒಬ್ಬಂಟಿತನ ನಮ್ಮ ಜನ್ಮಕ್ಕೆ ಅಂಟಿ ಬಂದ ಶಾಪ, ಅದನ್ನು ಅರಗಿಸಿಕೊಂಡೇ ನಾವೆಲ್ಲ ಬಾಳಬೇಕು ತಾನೇ? (ನಿರಂತರ ; ಪುಟ ; ೮) ಎನ್ನುವಲ್ಲಿ ಎಲ್ಲರೂ ಒಂದಲ್ಲ ಒಂದು ಬಗೆಯಲ್ಲಿ ಒಬ್ಬಂಟಿಗಳೇ ಎನ್ನುವುದನ್ನು ಅರ್ಥ ಮಾಡಿಸಿದ್ದಾರೆ. ಆ ಒಂಟಿತನ ದೀರ್ಘ ಏಕಾಂತ, ತೀವ್ರ ನಿರಾಶೆ, ಎಂಥ ಘೋರ ಕ್ರೂರ ಕೃತ್ಯಕ್ಕೂ ತೊಡಗಿಸಬಹುದು ಎನ್ನುವುದನ್ನು ಕಥೆಯ ಮುಂದಿನ ಭಾಗದಲ್ಲಿ ನಿರೂಪಿಸಿದ್ದಾರೆ. ಒಂಟಿ ಮನೆಯ ಮಾಂತ್ರಿಕನ ಇಬ್ಬರು ಹೆಣ್ಣು ಮಕ್ಕಳಲ್ಲಿ ದೇವಿ ಒಬ್ಬಳು, ದೊಡ್ಡ ಮಗಳ ವರ್ತನೆಯಿಂದಾಗಿ ದೇವಿಗೆ ಒಂಟಿತನದ ಶಿಕ್ಷೆ, ಆಕೆ ಒಬ್ಬಂಟಿಯಾಗಿದ್ದು, ಓಡಿ ಹೋದ ಅಕ್ಕನಿಂದಾಗಿ ದೇವಿಗೆ ಗೃಹಬಂಧನ, ಈ ಬಂಧನಗಳನ್ನೆಲ್ಲಾ ಬಿಡಿಸಿ ತನ್ನನ್ನು ಆ ಕೋಟೆಯಿಂದ ಹೊರ ತರುವ ರಾಜಕುಮಾರನ ನಿರೀಕ್ಷೆಯನ್ನು ಜಾನಪದ ಕಥೆಯಲ್ಲಿ ಬರುವಂತೆ ಬರಬಹುದೆನ್ನುವ ಅದಕ್ಕಾಗಿಯೇ ಕಾದಿರುವ ಒಂಟಿ ಹೆಣ್ಣು.

ಪಕ್ಕದ ಹಳ್ಳಿಯ ಬೈರ ಕುರಿ, ಮೇಕೆ, ಮೇಯುಸುವವನ ಪರಿಚಯ, ಸ್ನೇಹ, ತನ್ನ ನೋವು ಕನಸುಗಳನ್ನು ತೋಡಿಕೊಳ್ಳಲು ಒಬ್ಬ ಸ್ನೇಹಿತ ಸಿಕ್ಕನೆಂದು, ತಾನು ಹೇಳಿದ್ದನ್ನು ಕೇಳುವ , ಮಾಡು ಮುಟ್ಟು ಎಂದಿದ್ದನ್ನು ಮುಟ್ಟುವ , ಅಷ್ಟಕ್ಕೆ ಸೀಮಿತವಾಗಿರಬೇಕು. ಮಿತಿ ಮೀರಿದರೆ ಕಪಾಳಮೋಕ್ಷ

ಕೊನೆಗೆ ಬೈರ ತನ್ನ ವಯೋ ಸಹಜ ಆಸೆಯಿಂದ ದೇವಿಯನ್ನು ಬಲತ್ಕಾರವಾಗಿ ಪಡೆದುಕೊಂಡಾಗ ಶೀಲ ಕಳೆದುಕೊಂಡ ದೇವಿ ಬೈರನನ್ನು ಕಲ್ಲಿನಿಂದ ಹೊಡೆದು ಸಾಯಿಸುವುದು, ನಿರೂಪಕರಾದ ಆನಂದ್ ಅವಳಿಗೆ ಸಹಾಯಕನಾಗಿ ಆ ಹೆಣವನ್ನು ಹೊತ್ತು ಪ್ರಪಾತಕ್ಕೆ ನೂಕಿ ದೇಪಿಯನ್ನು ಅಪ್ಪಿಕೊಳ್ಳುವುದು.

ತಂದೆಯ ವರ್ತನೆ, ಭೈರನ ವರ್ತನೆ, ಓಡಿಹೋದ ಅಕ್ಕನಿಂದಾಗಿ ತನಗೆ ನೀಡಿದ ಒಂಟಿತನದ ಶಿಕ್ಷೆ, ಈ ಎಲ್ಲವೂ ದೇವಿಯಿಂದ ಈ ಕೊಲೆ ಮಾಡಿಸುತ್ತದೆ ಎಂದಾದರೂ, ಸಹಜವಾದ ಹೆಣ್ತನದ ಹರಣ, ತಂದೆಯ ಮಾಂತ್ರಿಕ ವರ್ತನೆಯ ಮನೆಯ ವಾತಾವರಣ, ಇವುಗಳ ನಿರೂಪಣೆಗಿಂತ ಬಹಳ ಮುಖ್ಯವಾದ ಅಂಶ ಒಬ್ಬಂಟಿತನ ಎಂಥ ಘೋರ, ಕ್ರೂರ, ಕೆಲಸಕ್ಕೂ ಹೇಸುವುದಿಲ್ಲ ಎಂಬುದು ದೇವಿಯ ಈ ಕ್ರೂರ ಕ್ರೌರ್ಯದಿಂದ ಸ್ಪಷ್ಟವಾದರೂ, ಪ್ರೀತಿಯಿಂದ ನಿರಾಕರಿಸಲ್ಪಟ್ಟ ಆನಂದನ ಒಂಟಿತನ, ಮತ್ತೆ ಪ್ರೀತಿಯ ಕಡೆಗೆ ಹರಿಯುವುದು. ದೇಪಿಗೆ ಸಹಾಯ ಮಾಡುವ ಮೂಲಕ ಅದನ್ನು ಸಾಕಾರಗೊಳಿಸುವಲ್ಲಿ ಕತೆಗಾರರು ಒಂಟಿತನದ ಕರಾಳತೆಯ ಪರಿಚಯ ಮಾಡುವುದು ಆ ಮೂಲಕ ಪ್ರೀತಯೊಂದಿಗೆ ಒಗ್ಗೂಡಿಸುವುದು, ಜೀವಕ್ಕೆ ಪ್ರೀತಿಯ ಮಹತ್ವವೆಷ್ಟಂಬುದನ್ನು ಸ್ಪಷ್ಟ ಪಡಿಸಿದ್ದಾರೆ..

ಮತ್ತೊಂದು ಪ್ರಮುಖ ಕಥೆ ಎಂದು ಗುರುತಿಸುವುದು ' ಒಂದು ರಾತ್ರಿ' ಇದು ಇಂದಿನ ಸಾಮಾಜಿಕ ವ್ಯವಸ್ಥೆಯ ವಿವಿಧ ಮುಖಗಳ ಪರಿಚಯದ ಒಟ್ಟು ನೋಟವನ್ನು ತರುತ್ತಾರೆ. ತರಬೇತಿ ಶಿಬಿರಕ್ಕೆಂದು ಬೆಂಗಳೂರಿಗೆ ಬಂದಿದ್ದು ಒಂದೇ ಕೊಠಡಿಯಲ್ಲಿ ಸಹವಾಸಿಗಳಾಗಿದ್ದ, ನಾಲ್ವರು ವಿಭಿನ್ನ ವ್ಯಕ್ತಿಗಳ ಸ್ವಂತ ಬದುಕಿನ ಮುಖವಾಡವನ್ನು ತೆರೆದು ತೋರಿಸುವ ಕಥೆ ಅದರೊಟ್ಟಿಗೆ ಅವರ ಮಾತುಗಳ ಮೂಲಕ ಇಂದಿನ ಸಾಮಾಜಿಕ ವ್ಯವಸ್ಥೆಯನ್ನು ಕುರಿತು ವಿಡಂಬನಾತ್ಮಕವಾದ ರೀತಿಯಲ್ಲಿ ಕಥೆಯನ್ನು ನಿರೂಪಿಸುತ್ತಾರೆ.

ನಾಲ್ವರು ಬೇರೆ ಬೇರೆ ಊರುಗಳಿಂದ ಬಂದಿದ್ದು ವಿಭಿನ್ನ ಗುಣಗಳನ್ನು ಹೊಂದಿದ್ದು ಇವರು ಶಿಭಿರಾರ್ಥಿಗಳಾಗಿ ತರಬೇತಿಗೆ ಬಂದಾಗ ಅವರಾಡುವ ಮಾತುಗಳ ಕತೆಯ ಪ್ರಾರಂಭದಲ್ಲೇ ಇದನ್ನು ಕಥೆಗಾರರು ವ್ಯಂಗ್ಯದ ಮೂಲಕ ಹೇಳುತ್ತಾರೆ " ರಾಷ್ಟ್ರವು ಚಲಿಸುತ್ತಿರುವ ದಿನಗಳು ಮಾತು ಕಡಿಮೆ, ಹೆಚ್ಚು ದುಡಿಮೆ ಎಂದು ಪ್ರತಿಯೊಬ್ಬನು ಪ್ರತಿ ಇನ್ನೊಬ್ಬನಿಗೆ ಕಲಿಸುತ್ತಿದ್ದ ಅಥವಾ ಬಿಕ್ಕಳಿಸುತ್ತಿದ್ದ ದಿನಗಳು, ರಾಷ್ಟ್ರದ ಸುಖ, ಶಾಂತಿ, ಸಮೃದ್ಧಿ ತುಂಬಿ ತುಳುಕುತ್ತಿದ್ದವು. ಫಲಕಗಳ ಮೇಲೆ, ಭಿತ್ತಿಗಳ ನೆಲೆಗಳಲ್ಲಿ" ಎನ್ನುವಲ್ಲಿ ಕಥೆಗಾರರ ವ್ಯಂಗ್ಯವಾದ ಮಾತುಗಳು ಸ್ಪಷ್ಟವಾಗುತ್ತವೆ.

ಜಾತಿ, ಸಂಪ್ರದಾಯ, ಆಚಾರ, ಮಡಿವಂತಿಕೆಯಿಂದ ದೂರಾದ ಶಿವಪ್ಪ ವಯಸ್ಸಿನಲ್ಲಿ ಹಿರಿಯನಾದರೂ ಕಿರಿಯರ ಪೋಲಿ ವಿಚಾರದಲ್ಲಿ ಭಾಗಿಯಗುತ್ತಿದ್ದ ಚಂದ್ರಶೇಖರ ಜೋಯಿಸ್, ಓದಿದ ಬುದ್ಧಿವಂತ, ಆದರೆ ನಿರುತ್ಸಾಹ, ವಿಷಾದವನ್ನು ತುಂಬಿಕೊಂಡಿದ್ದ ವಿಶ್ವ, ನಿರೂಪಕ, ಇವರೆಲ್ಲ ಪಾನಕೂಟದಲ್ಲಿ ಸೇರಿದಾಗ ನಡೆಯುವ ಸಂಭಾಷಣೆ ಕಥೆಯ ವಸ್ತು ವಿಷಯ. ಪರೀಕ್ಷಾ ವ್ಯವಸ್ಥೆ, ಶಿಕ್ಷಣ ಕ್ರಮ, ಶಿಕ್ಷಕರ ಗುಣ ನಡತೆ, ಅದರಲ್ಲಿ ತಲೆ ಹಾಕುವ ರಾಜಕೀಯ, ಅವಕಾಶ ಬಳಸಿಕೊಂಡು ಮುಂದೆ

ಸಾಗುವ ಅವಕಾಶವಾದಿಗಳು. ಹಳ್ಳಿಯ ರಾಜಕೀಯದಲ್ಲೂ ಕೆಸರು ತುಂಬಿರುವುದು, ಎಲ್ಲಾ ವಿಷಯಗಳ ಚರ್ಚೆಯೊಂದಿಗೆ ಪ್ರತಿಯೊಬ್ಬರೂ ತಮ್ಮ ಜೀವನದ ಬಹು ಮುಖ್ಯ ವಿಷಯವನ್ನು ಹಂಚಿಕೊಳ್ಳುವುದು ಅದರಲ್ಲಿ ಇಡೀ ವ್ಯವಸ್ಥೆಯ ವಿಭಿನ್ನ ಕರಾಳ ಮುಖದ ಪರಿಚಯದೊಂದಿಗೆ ತಮ್ಮ ಬದುಕಿನ ವಾಸ್ತವ ಕಥೆಗಳನ್ನು ತೆರೆದಿಡುವ ಮೂಲಕ ಸಾಮಾಜಿಕ ಬದುಕಿನ, ಶೈಕ್ಷಣಿಕ ವ್ಯವಸ್ಥೆಯ ಬಗ್ಗೆ ವ್ಯಂಗ್ಯ ವಿಡಂಬನೆ ವ್ಯಕ್ತವಾಗಿದೆ.

ಹಳ್ಳಿಯ ಶಾಲಾ ವ್ಯವಸ್ಥೆ ವಿದ್ಯಾರ್ಥಿಗಳ ವರ್ತನೆಗಳು, ಆಡಳಿತ ವರ್ಗ, ಅವರ ಕಾರ್ಯವೈಖರಿಯ ಬಗ್ಗೆ ಹಳ್ಳಿಗಾಡಿನ ಜನರ ರಾಜಕೀಯ, ಅಲ್ಲಿ ನಡೆಯುವ ಮೋಸ, ಅನ್ಯಾಯ, ವಂಚನೆಗಳ ಬಗ್ಗೆ ವಿದ್ಯಾವಂತರು, ಜೀವ ಉಳಿಸುವ ವೈದ್ಯರು, ಹಣದಾಸೆಗೆ ಬಲಿಯಾದಾಗ ಬಲಿಯಾಗುವ ಮುಗ್ಧ ಜೀವಗಳು ಹಲವು ಎಂಬುದನ್ನು ರಕ್ಷಿಸುವವರೇ ಭಕ್ಷಕರಾಗುವ, ಬುದ್ಧಿ ಹೇಳಿ ಬೆಳೆಸಬೇಕಾದ ಉತ್ತಮ ಪ್ರಜೆಗಳನ್ನು ರೂಪಿಸಬೇಕಾದವರೇ ಹೇಗೆ ಇಡೀ ವ್ಯವಸ್ಥೆಯನ್ನು ಹಾಳು ಮಾಡುತ್ತಾರೆ ಎಂಬುದನ್ನು, ಪ್ರೀತಿ ಉಳಿಸಿಕೊಳ್ಳಲು ಹೇಳುವ ಸುಳ್ಳು, ಸೋಗಿನ ಜೀವನ, ಬದುಕಿನಲ್ಲಿ ಘಟಿಸುವ ಆಕಸ್ಮಿಕಗಳು ಅದರಿಂದಾಗಿ ಬದುಕು ಪಡೆಯುವ ತಿರುವುಗಳು ಕೆಲವೊಮ್ಮೆ ವ್ಯಕ್ತಿಗಳು ಹೇಗೆ ಪರಿಸ್ಥಿತಿಯ ಕೈಗೊಂಬೆಗಳಾಗಿರುತ್ತಾರೆ. ಎಂದು ಎಲ್ಲಾ ವಿಷಯಗಳ ನಿರೂಪಣೆ ಕಥೆಯಲ್ಲಿ ಸರಳವಾಗಿ ಚಿತ್ರಣಗೊಂಡು ಕಥೆ ಆಕರ್ಷಕವಾಗುತ್ತದೆ. ಪ್ರೀತಿಯಿಂದ ವಂಚಿತನಾದ ವ್ಯಕ್ತಿ ಕ್ರಾಂತಿಕಾರಿಯಾಗುವುದು ಸಹಜವಾದುದು ಎಂಬುದು ಇಲ್ಲಿ ವ್ಯಕ್ತವಾಗಿದೆ.

'ಒಂದು ರಾತ್ರಿ' ಕಥೆ, ಪಾನಕೂಟಕ್ಕೆ ಹೋದ ರಾತ್ರಿ ಕುಡಿಯುವಾಗ ಚರ್ಚಿತವಾಗುವ ವಿಷಯಗಳು ಏನೆಲ್ಲಾ ಇರುತ್ತವೆಂಬುದಕ್ಕೆ ಇದು ಕೂಡ ಒಂದು ವಿಷಯವಾಗಿದೆ. ಅಲ್ಲಿನ ಚರ್ಚಿತ ವಿಷಯಗಳಡಿಯಲ್ಲಿ ಇಡೀ ಸಾಮಾಜಿಕ ವ್ಯವಸ್ಥೆಯ ಪೂರ್ಣ ಪರಿಚಯ ಅದರ ಅರೆ ಕೊರೆಗಳನ್ನು ಹೊರ ಹಾಕುವುದು. ಕೆಲವು ಅನಿವಾರ್ಯತೆಗೆ ಮನುಷ್ಯ ಒಳಗಾಗುವುದು, ಒಟ್ಟು ನೋವುವನ್ನು ಇಲ್ಲಿ ತರುವುದೇ ಕಥೆ ಹಾಸ್ಯದ ಮೂಲಕ ಗಂಭೀರ ಚಿಂತನೆಯೆಡೆಗೆ ಸಾಗುವುದು. ಇಡೀ ಕಥೆ ಒಬ್ಬೊಬ್ಬರ ಸ್ವಾನುಭವದ ನೆಲೆಯಲ್ಲಿ ಚಿತ್ರಿತವಾಗಿರುವುದು. ಪರಿಸ್ಥಿತಿಯ ವಿರುದ್ಧ ಸಟೆದು ನಿಲ್ಲುವ ಚಿತ್ರಣವಿಲ್ಲದ ಸಂಯಮ ಪೂರ್ಣ ನಡವಳಿಕೆ, ವಿಶ್ವನ ಪಾತ್ರದಲ್ಲಿ ಅದು ಕಂಡು ಬಂದರೂ ವ್ಯವಸ್ಥೆಯನ್ನು ವಿರೋಧಿಸುವುದನ್ನು ತೋರಿಸಿದರೂ ಹೊತ್ತಿ ಉರಿಯುವ ಕ್ರೋಧವಿಲ್ಲ. ವಿರೋಧವನ್ನು ವ್ಯಕ್ತಪಡಿಸಿದರೂ ಬಂಡಾಯಗಾರರಾಗುವುದಿಲ್ಲ. ಇದು ಲಕ್ಷ್ಮರಾವ್ ಅವರ ಕಥಾನಾಯಕನ ಚಿತ್ರಣ.

ಇದೇ ರೀತಿಯಲ್ಲಿ ಆಧುನಿಕ ನಾಗರೀಕ ಬದುಕಿನ ಚಿತ್ರಣ ಮಾಧ್ಯಮ ವರ್ಗದ ಸಾಮಾನ್ಯ ದಾಂಪತ್ಯ ಬದುಕನ್ನು ಕುರಿತು ಹೇಳುವ ಕಥೆ ' ನಾಗರೀಕ ' ಇದರಲ್ಲಿ ಹೆಂಡತಿಯೊಂದಿಗೆ ಸಿನಿಮಾ ನೋಡಲು ಹೋದ ಸಂದರ್ಭದಲ್ಲಿ ಇಡೀ ಬೆಂಗಳೂರಿನ ಜೀವನದ ಒತ್ತಡ ಜಂಜಾಟಗಳು ಎಲ್ಲವನ್ನು ಪರಿಚಯಿಸುತ್ತಾರೆ. ಸಾಮಾನ್ಯ ವರ್ಗದ ಯುವಕ ತಂದೆಯ ಮಾತಿನಂತೆ ಬದುಕು ಕಟ್ಟಿಕೊಳ್ಳುವ ಬಗೆ,

ಅಲ್ಲಿ ಹೆಂಡತಿಯ ಮಾತಿನಂತೆ ಬದುಕು ಸಾಗಿಸುತ್ತಿರುವಲ್ಲಿ ತಾನು ಮಾತ್ರ ತನ್ನಷ್ಟನಂತಾಗದೆ, ಮಗನನ್ನು ಅವನಿಗಿಷ್ಟವಾದ ರೀತಿಯಲ್ಲಿ ಬದುಕಲು. ಡಾಕ್ಟರ್ ಮಾಡಬೇಕೆಂಬ ಕನಸು ಕಂಡಿದ್ದ. ಹೇಗೋ ಕಷ್ಟಪಟ್ಟು ಬಿ.ಎಸ್ಸಿ, ಪದವೀಧರನಾಗಿ ಗುಮಾಸ್ತನಾಗಿ ತನ್ನ ತಂದೆ ತೋರಿದ ಹೆಣ್ಣನ್ನು ಮದುವೆಯಾಗಿ ಸಂಬಳಕ್ಕಿಂತ ಗಿಂಬಳವೇ ಹೆಚ್ಚಾಗಿ ಸಿಗುವ ನೌಕರಿ ಒಡಿದು ಮಗ, ಮಗಳು, ಹೆಂಡತಿಯೊಂದಿಗೆ ಅಮ್ಮಾವ್ರ ಗಂಡನಂತೆ ಬದುಕುವುದಕ್ಕೆ ಸಾಕ್ಷಿಯಾಗಿ ತಾನೇ ಕುಟುಂಬ ಕಲ್ಯಾಣ ಯೋಜನೆ ಶಸ್ತ್ರ ಚಿಕಿತ್ಸೆಗೆ ಒಳಗಲಾಗುವುದು ಕಥೆಯಲ್ಲಿನ ಮತ್ತೊಂದು ಗಮನಾರ್ಹ ಅಂಶವಾಗಿದೆ.

ಹೆಂಡತಿಯೊಂದಿಗೆ ಸಿನಿಮಾಮಕ್ಕೆ ಹೋದಾಗ ಬರುವ ಚಿತ್ರಣ ಇಡೀ ದಿನದ ಕಾರ್ಯಕ್ರಮಗಳಲ್ಲಿ ಎಲ್ಲ ಕಡೆ ಸರದಿ ಸಾಲಿನಲ್ಲಿ ನಿಂತು ಸಮಯ ಕಳೆಯುವುದರ ಬಗ್ಗೆ ಗಿಂಬಳದ ಹಣದಲ್ಲಿ ಹೆಂಡತಿಯ ಆಸೆಗಳನ್ನು ಪೂರೈಸುವ ಬಗ್ಗೆ, ಕೊನೆಗೆ ತನ್ನದೇ ಸಾವಿನ ಚಿತ್ರಣ ತನ್ನ ಕಣ್ಣ ಮುಂದೆ ನಡೆಯುವುದು. ತಾನಿದ್ದು ಇಲ್ಲದ ಸ್ಥಿತಿಯ ಬಗ್ಗೆ ವಿಡಂಬನೆಯ ಮೂಲಕ ಕತೆ ಅಂತ್ಯವಾಗುತ್ತದೆ.

ಈ ಕಥೆಯಲ್ಲಿ ಲೇಖಕರು ನಾಗರೀಕತೆ, ನಾಗರೀಕ ಬದುಕನ್ನು ಕುರಿತ ವಿಡಂಬನೆಯನ್ನು ಸಾಮಾನ್ಯ ವಿಷಯಗಳ ಮೂಲಕ ಸರಳವಾಗಿ ನಿರೂಪಿಸಿದ್ದಾರೆ. ನಗರ ಜೀವನದ ಬಗ್ಗೆ ಇಂದಿನ ಬೆಂಗಳೂರು ಜೀವನದ ಸಾಮಾನ್ಯ ಚಿತ್ರಣವನ್ನು ಯಥಾವತ್ತಾಗಿ ತಂದು ನಿಲ್ಲಿಸುತ್ತಾರೆ. ಆ ಮೂಲಕ ಪ್ರಶಾಂತವಾದ ಹಳ್ಳಿಯ ಹಸಿರಿನ ಸಮೃದ್ಧವಾದ ಪರಿಶುದ್ಧವಾದ ವಾತಾವರಣದ ಚಿತ್ರಣವನ್ನು ಕನಸಿನಲ್ಲಿ ತರುತ್ತಾರೆ. ಮಧ್ಯಮ ವರ್ಗದ ದಾಂಪತ್ಯ ಬದುಕು, ಸ್ಯೆಜವಾಗಿ ಮೂಡಿ ಬಂದಿದೆ. ಕಥೆಯ ಅಂತ್ಯದ ನಾಯಕನ ಸಾವಿನ ಚಿತ್ರಣ ವ್ಯಂಗ್ಯವನ್ನು ಸೂಚಿಸುತ್ತದೆ. ಅಂದರೆ ತನ್ನ ಮನೆಯ ಮುಂದೆ ತನ್ನದೇ ಸಾವಿನ ದೃಶ್ಯ ತಾನಿದ್ದು ತನ್ನ ಇರುವಿಕೆಯನ್ನು ಸಮರ್ಥಿಸಲು ಹೊರಟಾಗ ಅದನ್ನು ಒಪ್ಪದ ಸ್ಥಿತಿಯ ನಿರ್ಮಾಣ ಹಾಗೆ ಅಂತ್ಯವಾಗುವುದು ವಿಡಂಬನೆಯಿಂದ ಕೂಡಿದೆ. ಈ ಕಥೆ ಸರಳ ಸಾಮಾನ್ಯ ನಿರೂಪಣೆಯ ಗಂಭೀರ ಚಿಂತನೆಯ ಕಡೆಗೆ ಓದುಗರನ್ನು ತನ್ನತ್ತ ಸೆಳೆಯುವ ಅಂಶವೆಂದು ಗುರುತಿಸಬಹುದು.

ಇದೇ ಬಗೆಯ ಮತ್ತೊಂದು ಕಥೆ ' ದಾಖಲೆ ' ಇದು ಇಬ್ಬರು ಸ್ನೇಹಿತರು, ಅವರಲ್ಲಿ ವ್ಯವಸ್ಥೆಯೊಂದಿಗೆ ಹೊಂದಿಕೊಂಡು ಅವುಗಳನ್ನು ಬಳಸಿಕೊಂಡು ಜನಪ್ರಿಯ ಶಿಕ್ಷಕನಾಗಿ ಬದುಕುವ ಕಥೆಯನಿರೂಪಕ, ಒಂದು ಕಡೆಯಾದರೆ, ಮತ್ತೊಂದು ಕಡೆ ವೈಚಾರಿಕತೆ, ಲವಲವಿಕೆಯಿಂದ ಕೂಡಿ, ಗಾಂಬಿರ್ಯದ ಚಿಂತನೆಯ, ಆದ್ಯಾತ್ಮ, ವೈಭವ ನಿರಾಕರಣೆ ಎಲ್ಲಾ ವಿಷಯಗಳ ಬಗ್ಗೆ ಚಿಂತಿಸುತ್ತಾ ವಿರೋಧಿಸುತ್ತಾ, ವ್ಯವಸ್ಥೆಯನ್ನು ಖಂಡಿಸುತ್ತಾ, ಅನ್ಯಾಯಗಳ ವಿರುದ್ಧ ಧ್ವನಿಯೆತ್ತುವ ಕ್ರಾಂತಿಕಾರಿಯಂತೆ ಬದುಕು ಸಾಗಿಸುವ, ಸತ್ಯನ ಪಾತ್ರ, ವೈದ್ಯನಾಗಿ, ಮದುವೆ ಮಾಡಿಕೊಳ್ಳದೇ ಒಂದಾಗಿ ಬದುಕು ಸಾಗಿಸುವವರೆಗೆ ಅವನ ವೈಚಾರಿಕತೆ ಬೆಳೆದಿದ್ದರೂ ಅಂತ್ಯದಲ್ಲಿ ಕೊಲೆಯಾಗಿ ಹೋಗುತ್ತಾನೆ. ಅಂದರೆ

ವ್ಯವಸ್ಥೆಯ ಬದಲಾವಣೆಗೆ ಬಯಸಿದಾತನ ಬದುಕು ಹೇಗೆನ್ನುವಲ್ಲಿ ವ್ಯವಸ್ಥೆಯ ವರ್ತುಲದಲ್ಲಿ ಏನೆಲ್ಲಾ ಘಟನೆಗಳು ಘಟಿಸಿ ಹೋಗುತ್ತದೆ ಎಂಬುವುದಕ್ಕೆ ಸತ್ಯನ ಸಾವು ಸಾಕ್ಷಿಯಾಗುತ್ತದೆ. ಕಥೆಯಲ್ಲಿ ನಿರೂಪಿತವಾಗಿರುವ ಅಂಶವೇನೆಂದರೆ, ಸಾಮಾಜಿಕ ವ್ಯವಸ್ಥೆಯ ಜೊತೆ ಹೊಂದಾಣಿಕೆಯಾಗದೆ ವಿರುದ್ಧವಾಗಿ ನಿಂತಾಗ ಆಗುವ ಅವಸ್ಥೆ ಎದುರಿಸಬೇಕಾದ ಸಮಸ್ಯೆಗಳು ಅಂತಿಮವಾಗಿ ಬದುಕುವ ಪರಿಸ್ಥಿತಿ ಏನೆಂಬುದರ ಸರಳ ನಿರೂಪಣೆಯ ದಾಖಲೆಯಾಗಿ ಕಥೆ ಚಿತ್ರಣವಾಗಿರುವುದು ಪ್ರಮುಖವಾಗಿದೆ.

'ಮೊಲೆ ಬೆಂಕಿ ಮುದುಕ' ಕಥೆಯು ಸಾಮಾನ್ಯ ವಿಷಯಗಳಿಂದ ಕೂಡಿದ ಕಥೆಯಾಗಿವೆ. ಅದರಲ್ಲಿ ನಿರೂಪಿತವಾಗಿರುವ ಮೂರು ವಿಭಿನ್ನ ಬಗೆಯ ಘಟನೆಗಳು ಆ ಮೂಲಕ ಕಥೆಗಾರರು ಹಲವು ಸಾಮಾನ್ಯ ಪ್ರಶ್ನೆಗಳ ಮೂಲಕವೇ, ಹಲವರ ಮನಸ್ಸಿನ ಪ್ರಶ್ನೆಗಳನ್ನು ತರುವ ಚಿತ್ರಣವಿದೆ. ಈಕಥೆ ಸಾಮಾನ್ಯವಾದ ಮೂರು ವಿಷಯಗಳ ಮೂಲಕ ಸಾಗುತ್ತಾ ಅಂತ್ಯ ವಿಶಿಷ್ಟವಾದ ಗಂಭೀರತೆ ಕಡೆಗೆ ಸಾಗಿದೆ. ರಸ್ತೆ ಅಪಘಾತವಾದಾಗ ಜನ ಸ್ಪಂದಿಸುವ ರೀತಿ ಅದಕ್ಕಾಗಿ ಜನರ ಪ್ರತಿಕ್ರಿಯೆ ಇದು ಅವರವರ ಭಾವನೆಗಳಿಗೆ ತಕ್ಕಂತೆ ಗ್ರಾಸವಾಗುವುದು. ನಿರ್ಲಕ್ಷ್ಯಕ್ಕೊಳಗಾದ, ಉಪೇಕ್ಷಿತ ನಿವೃತ್ತ ಮಾಸ್ತರರೊಬ್ಬರೂ ಎಲ್ಲವು ಇದ್ದೂ ಒಂಟಿಯಾಗಿ ಬದುಕುವುದು. ಇದು ಇಂದು ಸಾಮಾನ್ಯವಾದ ವಿಷಯವಾಗಿದೆ. ಮತ್ತೊಂದು ವಿಷಯ ಕಥೆಗಾರನೇ ತನ್ನ ಅಂಗವಿಕಲ ತಂಗಿಯ ಬದುಕಿಗಾಗಿ, ತನ್ನ ಬದುಕನ್ನು ತ್ಯಾಗ ಮಾಡಿ ಇಷ್ಟವಿಲ್ಲದ ಹುಡುಗಿಯೊಂದಿಗೆ ಮದುವೆಯಾದರೂ ಅವಳನ್ನು ಸುಖವಾಗಿಡಲು ಪ್ರಮಾಣಿಕವಾಗಿ ಪ್ರಯತ್ನಿಸುವುದು. ಆಕೆ ಅಮ್ಮನನ್ನು ದ್ವೇಷಿಸುವುದು ಸರ್ವಸಾಮಾನ್ಯ ವಿಚಾರವಾಗಿದೆ. ಕೊನೆಗೆ ತಂಗಿ ಸುಮಾಳ ಬದುಕು ದುರಂತವಾಗುತ್ತದೆ. ಅದಕ್ಕಾಗಿ ಹೆಂಡತಿಯನ್ನು ದ್ವೇಷಿಸದೇ ಹೋದರೂ ಮನಸ್ಸು ಆಕೆಯೊಂದಿಗೆ ಸುಖವಾಗಿರಲು ಹಿಂದೆ ಸರಿದು ಬಿಡುತ್ತದೆ. ಅದನ್ನು ಕಥೆಯ ಪ್ರಾರಂಬದಲ್ಲೇ ಹೇಳುತ್ತಾರೆ. "ನಾವು ಒಳಗೊಳಗೆ ಪರಸ್ಪರ ಅಸಹ್ಯ ಪಡುತ್ತೇವೆ. ಆದರೆ ನಾವು ಎಂಥ ಸಭ್ಯ ಸಂಭಾವಿತ, ನಾಗರೀಕ ದಂಪತಿಗಳೆಂದರೆ, ನಮ್ಮ ಭಾವನೆಗಳನ್ನು ನಾವು ಮುಕ್ತವಾಗಿ, ಮೃಗೀಯವಾಗಿ, ಬಹಿರಂಗವಾಗಿ, ಪ್ರಕಟಿಸುವುದಿಲ್ಲ, ಹತ್ತಿಕ್ಕುತ್ತೇವೆ ತುಂಬ ನಯವಾಗಿ ಸೂಕ್ಷ್ಮವಾಗಿ, ಕಲಾತ್ಮಕವಾಗಿ ಆ ಭಾವನೆಗಳನ್ನು ನಮ್ಮ ಹಾವ- ಭಾವನೆಗಳಲ್ಲಿ ವ್ಯಂಜಿಸುತ್ತೇವೆ, ಧ್ವನಿಸುತ್ತೇವೆ. ಆದ್ದರಿಂದ ನಮ್ಮ ದಾಂಪತ್ಯ ಒಂದು ಅತ್ಯುತ್ತಮ ನವ್ಯ ಕವಿತೆ (ನಿರಂತರ ; ಪು ; ೨೦) ಎನ್ನುತ್ತಾರೆ. ಇಲ್ಲಿ ವಾಸ್ತವ ಸ್ಥಿತಿಯನ್ನು ಅಂತರಂಗವನ್ನು ಪ್ರಾಮಾಣಿಕವಾಗಿ ತೆರೆದಿಡುವ ಮೂಲಕ ಹಲವು ದಾಂಪತ್ಯ ಬದುಕಿನ ನಿಗೂಢ ಮುಖವನ್ನು ಬಹಿರಂಗಗೊಳಿಸಿದ್ದಾರೆನ್ನಬಹುದು. ಇಂಥ ಎಷ್ಟೋ ಬದುಕುಗಳು ಸಮಾಜದಲ್ಲಿ ಕಾಣುತ್ತದೆ. ಅದು ಹೊರಗೆ ಗೋಚರಿಸುವುದಿಲ್ಲ ಎಂಬುದನ್ನು ಈ ಮೂಲಕ ನಾವು ಗುರುತಿಸಬಹುದಾಗಿದೆ.

ಅಂತೆಯೇ ಕಥೆಗಾರರು ಆತ್ಮವಂಚನೆ ಮಾಡಿಕೊಂಡು ಇಷ್ಟವಿಲ್ಲದಿದ್ದರೂ ಈ ರೀತಿಯ ಬದುಕು ಸಾಗಿಸುವುದು ಯಾವ ಅರ್ಥದಲ್ಲಿ ಸಾರ್ಥಕವೆನ್ನುವುದನ್ನು ಚಿತ್ರಿಸಿದ್ದಾರೆ. ತಮ್ಮ ದಾಂಪತ್ಯ ಬದುಕನ್ನು ಪೂರ್ಣವಗಿ ತೆರೆದಿಡುವುದು. "ನಾನು ನನ್ನ ಹೆಂಡತಿಯಲ್ಲಿ ತೃಪ್ತನಾಗಿಲ್ಲ. ಅರೆ ಮಂಪರಿನಲ್ಲಿ ಅವಳನ್ನು ತಬ್ಬಿ ಮನಸ್ಸಿನಲ್ಲಿ ಮತ್ಯಾವುದೋ ಹೆಣ್ಣನ್ನು ಕಲ್ಪಿಸಿಕೊಂಡು ಕೂಡುವುದು ಮಾನಸಿಕ ವ್ಯಭಿಚಾರವಲ್ಲವೇ? ಇದಕ್ಕೆ ಬದಲು ಗುಟ್ಟಾಗಿಯಾದರೂ ನನಗೆ ಇಷ್ಟವಾದ, ನನ್ನನ್ನು ಇಷ್ಟಪಡುವ ಬೇರೆ ಹೆಣ್ಣಿನೊಂದಿಗೆ ನಾನೇಕೆ ಮಲಗಬಾರದು? ಮನಸ್ಸಿನಲ್ಲೇ ಹೀಗೆ ಕೊರಗುವುದಕ್ಕಿಂತ ಅದು ಹೆಚ್ಚು ಆರೋಗ್ಯಕರವಾದ ಮಾರ್ಗವಲ್ಲವೇ? ಎಂದು ಕೊಳ್ಳುತ್ತಾರೆ (ನಿರಂತರ : ಪುಟ ; ೨೫) ಇಲ್ಲಿ ಹೇಳುವಂತೆ ನಡೆದುಕೊಳ್ಳುವುದು ಕಷ್ಟ ಸಾಧ್ಯ. ಆತ್ಮ ಸಾಕ್ಷಿಯೊಡನೆ ಬಾಳುವವರು ಹೀಗೆ ಯೋಚಿಸಿದರೂ ಕಾರ್ಯಗತ ಮಾಡಲಾಗದು. ಸ್ವತಃ ಕಥೆಗಾರರೇ ಅಂಥ ಅವಕಾಶ ಬಂದಾಗ ಎಷ್ಟೆಲ್ಲಾ ಪ್ರಶ್ನೆಗಳು ಹುಟ್ಟಿಕೊಂಡು ಅದನ್ನು ಬಳಸಿಕೊಳ್ಳಲಾಗದೇ ಹೋಗುತ್ತಾರೆ ಎನ್ನುವುದು ಕಥೆಯಲ್ಲಿನ ಪ್ರಮುಖ ವಿಷಯವಾಗಿದೆ. ಅಲ್ಲಿ ಕಥೆಗಾರರು ತಮ್ಮನ್ನು ತಾವು ವಿಶ್ಲೇಷಣೆ ಮಾಡಿಕೊಳ್ಳುವಾಗ ಉದ್ಭವಿಸುವ ಪ್ರಶ್ನೆಗಳು ಇಂಥ ಬದುಕು ಸಾಗಿಸುವಾಗ, ಅಥವಾ ಅಂಥ ಅವಕಾಶಗಳು ಬಂದಾಗ ಎಲ್ಲರನ್ನು ಕಾಡಬಹುದಾದ ಪ್ರಶ್ನೆಗಳಾಗುತ್ತವೆ ಎನ್ನುವುದು ಸಾಮಾನ್ಯವಾದ ವಿಷಯವೇ ಆದರೂ ಕಥೆಯ ನಿರೂಪಣೆ, ಆಕರ್ಷಿತವಾಗಿ ಓದುಗರನ್ನು ಸೆಳೆಯುತ್ತದೆ ಎಂದು ಹೇಳಬಹುದು. 'ಒಂದು ಪ್ರೇಮದ ಕಥೆ' ಶೀರ್ಷಿಕೆಯೆ ಹೇಳುವಂತೆ ಪ್ರೇಮ ಕಥಾನಕ. ಇಲ್ಲಿ ಬರುವ ಲಕ್ಷ್ಮಿ ಮತ್ತು ಶಂಕರ್ ನಾಯರ್, ಅಂತರ್ ಜಾತಿ ವಿವಾಹವಾದ ಪ್ರೇಮಿಗಳು. ತಮ್ಮದೇ ಆದ ರೀತಿಯಲ್ಲಿ ಬದುಕು ಕಟ್ಟಿಕೊಂಡು ಸಂಸಾರ ಸಾಗಿಸುವಾಗ ಎದುರಾಗುವ ಅಡೆ-ತಡೆಗಳು, ಪ್ರೀತಿಯ ತೀವ್ರತೆ ಹೆಂಡತಿಯ ಬಳಿ ಕಡಿಮೆಯಾದಾಗ ಅನ್ಯ ದಾರಿಯಲ್ಲಿ, ಹೋಗುವುದು, ಅದರಿಂದಾಗಿ ಹಲವು ಸಮಸ್ಯೆಗಳಲ್ಲಿ ಸಿಕ್ಕಿಕೊಂಡಿರುವ ನಾಯರ್ ವೃತ್ತಿಗೆ ರಾಜೀನಾಮೆ ನೀಡುತ್ತಾನೆ. ಅದರಿಂದಾಗಿ ಲಕ್ಷ್ಮಿ ತೀವ್ರ ನೋವು, ನಿರಾಶೆ, ದುಃಖ ಅನುಭವಿಸಿ ಅದರಿಂದ ಬಿಡಿಸಿಕೊಳ್ಳಲು ಒದ್ದಾಡುವಾಗ ತರಬೇತಿ ಶಿಬಿರದಲ್ಲಿ ಪರಿಚಯವಾಗಿ ಗಾಢವಾದ ಸ್ನೇಹ ಹೊಂದಿದ್ದು ನಿರೂಪಕರ ಬಳಿ ತನ್ನ ಅಳಲನ್ನು ತೋಡಿಕೊಂಡಾಗ ಆತ ನೀಡುವ ಸಕಾಲಿಕವಾದ ಬುದ್ಧಿ ಮಾತುಗಳಿಂದ ಬೇರೆ ಬೇರೆಯಾಗಿದ್ದ ಸಂಸಾರ ಒಂದಾಗುವುದು ಕಥೆಯ ತಿರುಳು. ಇಲ್ಲಿ ಗುರುತಿಸುವ ಅಂಶವೇನೆಂದರೆ ಕಥೆಯ ವಸ್ತು ವಿಷಯ ಸಾಮಾನ್ಯವಾದುದು. ಪ್ರೀತಿ, ಪ್ರೇಮ, ಮದುವೆ, ಆನಂತರದ ಅವರ ನಡುವಿನ ವಿರಸ ಅಂತ್ಯದಲ್ಲಿನ ತಿರುವಿಗೆ ಕಾರಣವಾಗುವ ನಿರೂಪಕರ ಪಾತ್ರ ಇವೆಲ್ಲವೂ ಸಾಮಾನ್ಯವಾದ ವಿಷಯಗಳೇ ಓದುಗರಿಗೆ ಇವು ತಮ್ಮದೇ ಅನುಭವ ಎಂಬಂತೆ ಕಥೆ ಹೇಳುವ ರೀತಿ ಇಷ್ಟವಾಗುತ್ತದೆ ಎಂಬುದನ್ನು ಗುರುತಿಸಬಹುದು.

ಪ್ರೀತಿ ಪ್ರೇಮ, ಪ್ರಣಯ, ದಾಂಪತ್ಯ ಬದುಕು, ಇವುಗಳ ಚಿತ್ರಣದೊಂದಿಗೆ ಕಥೆಗಳು ಸಾಗುತ್ತಿರುವುದರ ಜೊತೆಗೆ ಬಿ.ಆರ್. ಲಕ್ಷ್ಮಣರಾವ್ ಅವರು ಒಂದು ವಿಶಿಷ್ಟ ಕಥಾವಸ್ತುವನ್ನುಳ್ಳ ಗಂಭೀರ

ಚಿಂತನೆ ಕಡೆಗೆ ಹಚ್ಚುವ ವಿಶಿಷ್ಟವೆನ್ನಬಹುದಾದ ಹೀಗೂ ಇರಬಹುದೇ ಎನ್ನುವಾಗಲೇ ಹೀಗೂ ಆಗುತ್ತದೆ. ಆದರೆ ಅದು ಯಾರಿಗೂ ಗೊತ್ತಾಗದ ಹಾಗೆ ಇರುತ್ತದೆ ಎಂಬುದನ್ನು ತಿಳಿಸುವ ಕಥೆ ಎಂದರೆ 'ಯಾರಿಗೂ ಹೇಳ್ಬೋಣು ಬ್ಯಾಡಾ" ಎಂಬುದು. ಕಥೆ ತುಂಬಾ ಗಂಭೀರವಾದ ವಿಷಯವನ್ನು ಒಳಗೊಂಡಿವೆ. ಮಧ್ಯಮ ವರ್ಗದ ದಾಂಪತ್ಯ ಬದುಕು. ಅದರೊಂದಿಗೆ ಹೀಗೂ ಉಂಟೇ ಎಂದು ಕೊಳ್ಳುವಾಗ ಇದೂ ಸಾಧ್ಯ ಎಂಬುದನ್ನು ಕಥೆಯು ನಿರೂಪಿಸುತ್ತವೆ. ದುರಂತ ಹೆಣ್ಣಿನ ಬದುಕಿನ ಅಂತ್ಯದಲ್ಲಿ ವಿಶಿಷ್ಟ ತಿರುವು ನೀಡುವುದೇ ಕಥೆಯ ವೈಶಿಷ್ಟ್ಯ ಎಂದು ಹೇಳಬಹುದು. ಇಲ್ಲಿ ನೈತಿಕತೆಯ ಬಗ್ಗೆ ಬೇರೊಂದು ಅರ್ಥ ಪಡೆದುಕೊಳ್ಳುವುದೇ ಪ್ರಮುಖ ವಿಷಯವಾಗಿದೆ. ಲಕ್ಷ್ಮಣರಾವ್ ಅವರ ಬಹುತೇಕ ಕಥೆಗಳಲ್ಲಿ ವ್ಯಕ್ತವಾಗಿರುವ ಅಂಶಗಳೆಂದರೆ ಮಧ್ಯಮ ವರ್ಗದ ಜನರ ಆಚಾರ-ವಿಚಾರ, ನೀತಿ-ನಿಯಮ, ಧರ್ಮ, ಸಂಪ್ರದಾಯಗಳು ಎಂದು ನಂಬಿ ಪಾಲಿಸುವ ಅವರ ಬದುಕಿನ ರೀತಿಯೇ ವ್ಯಕ್ತವಾದರೆ ಇದು ಒಂದು ಭಿನ್ನವಾದ ಕಥೆಯಾಗಿದೆ. ಕಥಾನಾಯಕಿ ಜಾನಕಿ ಸುಸಂಸ್ಕೃತ ಕುಟುಂಬದಿಂದ ಬಂದವಳು, ವಿಚಾರವಂತ ಅಣ್ಣಂದಿರ ವಿವೇಕಯುತವಾದ ನಡವಳಿಕೆಯಿಂದಾಗಿ ವಿಧವೆಯಾದರೂ, ಸ್ವತಂತ್ರವಾಗಿ ಬದುಕಲು ದಾರಿಯಾಗುತ್ತದೆ. ಶಿಕ್ಷಣ ನೀಡುವುದು ಜೊತೆಗೆ ಮರು ಮದುವೆಗೂ ಒಪ್ಪುತ್ತಾರೆ. ಇದು ಕಥೆಯ ಆಕರ್ಷಣೆ. ಎರಡನೇ ಹೆಂಡತಿಯಾಗಿ ಬದುಕಲು ಮುಂದಾಗುವುದು ಔಚಿತ್ಯವಲ್ಲ ಎನಿಸುತ್ತದೆ. ಆದರೂ ಅದನ್ನೇ ಒಪ್ಪಿ ಬಾಳನ್ನು ಎದುರಿಸುವ ಧೈರ್ಯ ಅದಕ್ಕೆ ಆಧಾರವಾದುದು ಶಿಕ್ಷಕ ವೃತ್ತಿ ಮತ್ತು ಆಕೆ ಕಲಿತಿದ್ದ ಸಂಗೀತ ಅವಳ ಬಾಳಿನ ದುರಂತ ಮರೆಸುವ ಸಾಧನವಾಗಿರುತ್ತದೆ. ಅನಂತರ ಕಥೆಯಲ್ಲಿನ ಘಟನೆಗಳು, ಹೆಣ್ಣಿನ ಅಸಹಾಯಕತೆಯನ್ನು ದುರ್ಬಳಕೆ ಮಾಡಿಕೊಳ್ಳದೆ ಅವಳ ಪ್ರತಿಭೆಯನ್ನು ಪ್ರೋತ್ಸಾಹಿಸುವುದರ ಮೂಲಕ ಆಕೆಯ ಬದುಕಿಗೆ ಒತ್ತಾಸೆಯಾಗುತ್ತದೆ. ಹಾಗೆಯೇ ಮುಂದಿನ ಅವಳ ಬದುಕಿನ ಘಟನೆಗಳು ಸಾಮಾನ್ಯವೆಂಬಂತೆ ಸಾಗುವುದು, ಜಾನಕಿ ಮತ್ತು ನಿರೂಪಕರ ಪರಸ್ಪರ ಒಪ್ಪಿಗೆಯ ಮಿಲನ, ಕತೆಯ ಅಂತ್ಯ ಸುಖಾಂತಗೊಳಿಸುವುದು.

ಇಲ್ಲಿನ ಬಹಳ ಪ್ರಮುಖ ಪ್ರಶ್ನೆಯನ್ನು ಕಥೆಗಾರರೂ ಅಷ್ಟೇ ಸಂಯಮದಿಂದ ನಾಜೂಕಾಗಿ ಬಗೆಹರಿಸಿ ಬಿಡುವುದು ಗಮನಾರ್ಹವಾಗಿವೆ. ಇಲ್ಲಿ ಏಳಬಹುದಾದ ಪ್ರಶ್ನೆಗಳಿಗೆ ಉತ್ತರ ಹುಡುಕುತ್ತಾ ಹೋದರೆ ಬದುಕು ಅಸ್ತ-ವ್ಯಸ್ತ, ಗೋಜಲಾಗುತ್ತದೆ. ಆದರೆ ಯಾರಿಗೂ ಗೊತ್ತಾಗದೆ ಹೋದಾಗ ಯಾವುದೇ ಪ್ರಶ್ನೆ ಉದ್ಭವಿಸಲಾರದೆಂದು ಕಥೆಗಾರರು ತಾಳುವ ಈ ನಿಲುವೇ ಕಥೆಯ ಸುಖಾಂತ್ಯಕ್ಕೆ ಕಾರಣವೆನಿಸಿದೆ. ಇಲ್ಲಿ ಯಾವುದೇ ತಾರ್ಕಿಕವಾದ ಆಲೋಚನೆಗಳನ್ನು ಎತ್ತದೆ ಪರಸ್ಪರರ ನಡುವಿನ ವಿವೇಚನಾಯುತ ನಡವಳಿಕೆಯಿಂದಾಗಿ ಕಥೆ ಯಾವುದೇ ಗೊಂದಲ ಗೋಜಲುಗಳಿಗೆ ಆಸ್ಪದ ನೀಡುವುದಿಲ್ಲ. ಇಲ್ಲಿ ಒಂದು ಗಂಭೀರವಾದ ಪ್ರಶ್ನೆ ಉದ್ಭವಿಸುತ್ತದೆ. ಅದೇನೆಂದರೆ ನೈತಿಕತೆಯ ಪ್ರಶ್ನೆ. ಕಥೆಗಾರರು ಅದರ ಗೊಡವೆಗೆ ಹೋಗುವುದಿಲ್ಲ. ಇದು ಕಥೆಗಾರರ ಸ್ವಾನುಭವದ ಮೂಲಕ, ತಾವು

ಕಂಡು, ಕೇಳಿದ ವಿಷಯಗಳೇ ಈ ಕಥೆಗೆ ವಸ್ತುವಾಗಿದೆ ಎಂದೆನಿಸುತ್ತದೆ. ಸಾಮಾಜಿಕ ವ್ಯವಸ್ಥೆಯೊಳಗೆ ತಮ್ಮ ತಮ್ಮ ವೃತ್ತಿ, ಗೌರವ, ಸ್ಥಾನಮಾನ, ಉಳಿಸಿಕೊಳ್ಳಲು ಕೆಲವೊಮ್ಮೆ ನಿಗೂಢವಾಗಿಯೇ ಕೆಲವು ವಿಷಯಗಳು ಉಳಿದು ಹೋಗುತ್ತವೆ. ಅದಲ್ಲದೆ ಹೋದಾಗ ಈ ಕಥೆಯ ವಿಷಯ ಹಲವು ಭಿನ್ನ ನೆಲೆಯ ಚರ್ಚೆಗೆ ಗ್ರಾಸವಾಗುತ್ತದೆ. ಆದರೆ ಕಥೆಗಾರರು ಅದ್ಯಾವುದಕ್ಕೂ ಆಸ್ಪದವೀಯದೆ 'ಯಾರಿಗೂ ಹೇಳೋಣು ಬ್ಯಾಡ' ಎಂದು ಎಲ್ಲವನ್ನು ಅವಲಬ್ಬರಲ್ಲೇ ಮುಚ್ಚಿಟ್ಟು ಬಿಡುವುದು ಕಥೆಯ ತಂತ್ರಗಾರಿಕೆಯಾಗಿದ್ದ ಇದು ಜನಪ್ರಿಯತೆಗೆ ಕಾರಣವಾಗುತ್ತದೆಂದು ಗುರುತಿಸಬಹುದು.

'ವಿಹಾರ' ಕಥೆಯ ಮೂಲಕ ವಿಭಿನ್ನ ಮನೋಭಾವದ ನಾಲ್ಕು ಸಂಸಾರಗಳ ಚಿತ್ರಣದ ಮೂಲಕ ಇಂದಿನ ಸಾಮಾಜಿಕ ಬದುಕಿನ ಒಟ್ಟು ನೋಟದ ಪರಿಚಯ ಮಾಡಿದ್ದಾರೆ. ಜೊತೆಗೆ ವಿದೇಶಿ ಜೋಡಿಯ ಮೂಲಕವೂ ಎರಡು ವಿಭಿನ್ನ ಸಂಸ್ಕೃತಿಗಳ ಮುಖಾಮುಖಿಯಾಗುವ ಮೂಲಕ ನಮ್ಮ ಬಾಳಿನ ರೀತಿಯನ್ನು ಸ್ಪಷ್ಟಪಡಿಸುತ್ತಾರೆ. ಮೂರ್ತಿ, ಲಲಿತಾ, ಗೀತಾ, ಕೃಷ್ಣಪ್ಪ, ಶೇಖರ, ಸಿದ್ದೇಗೌಡ, ಇವರಲ್ಲಿ ಪರಸ್ಪರ ಸ್ನೇಹಿತರಾದರೂ ವಿಭಿನ್ನ ಸ್ವಭಾವದವರು. ಸಂಪ್ರದಾಯಿಕ ಬದುಕನ್ನು ಸಾಗಿಸಿದ, ಭಾವನಾತ್ಮಕವಾಗಿ ಸಂಬಂಧಗಳಿಗೆ ಒತ್ತು ನೀಡಿ ಬೆಳೆದ ಮೂರ್ತಿ–ಲಲಿತಾ ದಂಪತಿಗಳು, ಅಣ್ಣ ತಂಗಿ, ಅತ್ತೆ, ಮಾವ, ಬಂಧು–ಬಳಗ ಎಂದು ಮನುಷ್ಯ ಸಂಬಂಧಗಳ ಜೊತೆ ಬಂಧಿತರಾಗಿ ಆ ವೃತ್ತದೊಳಗೆ ಬಾಳು ಸಾಗಿಸಿದ ಮೂರ್ತಿ ಲಲಿತಾ ದಂಪತಿಗಳು, ಆಧುನಿಕ ನಾಗರೀಕ ಬದುಕಿಗೆ ಒಳಪಡದೆ ಬಾಳಿದವರು ಹೆಚ್ಚು ಓದಿಲ್ಲದ ಮೂರ್ತಿ ಬಾಳಿನ ಸಾರ್ಥಕತೆ ಕಂಡುಕೊಳ್ಳುವುದು ಹಿರಿಯ ಮಗನಾಗಿ ತನ್ನೆಲ್ಲಾ ಜವಾಬ್ದಾರಿಗಳನ್ನು ನಿರ್ವಹಿಸುವ ಮೂಲಕ ಬಾಳಿಗೆ ಅರ್ಥ ಕಂಡುಕೊಳ್ಳುವುದು ಮೆಚ್ಚುವ ಅಂಶವಾಗಿದೆ. ಅದರಿಂದಾಗಿ ಬದುಕಿನ ಕೆಲವು ಆಡಂಬರ, ನಾಗರೀಕ ಬದುಕಿನಿಂದ ದೂರಾಗಿ ಉಳಿಯುವುದು ಕೆಲವರ ದೃಷ್ಟಿಯಲ್ಲಿ ಈತ ಒಬ್ಬ ಹಳ್ಳಿಯ ಗುಗ್ಗನಾಗಿ ಬಿಡುತ್ತಾನೆ. ವಿಹಾರಕ್ಕೆ ಹೋದಾಗ ಆತನ ಅನುಭವದಿಂದ ಅದರ ಸ್ಪಷ್ಟತೆ ಅವನಿಗಾಗುತ್ತದೆ. ಹಾಗೇ ಗೀತಾ ಕೃಷ್ಣಪ್ಪ ದಂಪತಿಗಳ ಸಾಂಸಾರಿಕ ಬದುಕು ಅರ್ಥಹೀನವಾಗಿರುವುದು ಸಂತೃಪ್ತನಾಗಿ ಉಳಿಯುವುದಿಲ್ಲ. ಅಲ್ಲಿಗೆ ಬಂದ ವಿದೇಶಿ ಜೋಡಿಗಳಿಂದ ವ್ಯಕ್ತವಾಗುವ ಅನಿಸಿಕೆಗಳು, ಅಂದರೆ ಜಗತ್ತು ತುಂಬಾ ಕಿರಿದು, ಎಲ್ಲಾ ಮನುಷ್ಯರಲ್ಲಿ ಪರಸ್ಪರ ಪ್ರೀತಿ–ಗೌರವ, ಸಮಾನತೆ, ಕರುಣೆ, ಸಹಾನುಭೂತಿ ಬೆಳೆಸಬಲ್ಲ ವಿಶ್ವಧರ್ಮ, ಮನುಷ್ಯ ಧರ್ಮದ ಅನನ್ಯತೆ ಬಗ್ಗೆ ತಿಳಿಸುವುದು. ಬದುಕಿನ ಸಾರ್ಥಕತೆ ಹೇಗೆ ಕಂಡುಕೊಳ್ಳಬೇಕೆನ್ನುವ ಅಂಶಗಳು. ಪ್ರೇಮಿಸಿ, ಮನೆಯವರ ವಿರೋಧದಿಂದಾಗಿ ಓಡಿ ಬಂದ ಯುವ ಜೋಡಿಯ ಕಥೆ. ಹೀಗೆ ಸಾಮಾಜಿಕ ವ್ಯವಸ್ಥೆಯ ಹಲವು ಮುಖಗಳ ಪರಿಚಯದೊಂದಿಗೆ ಸಾರ್ಥಕ ಬದುಕಿನ ಬಗೆಗಿನ ಭಾವನೆಗಳು. ಮನುಷ್ಯ ಪ್ರೀತಿಯ ಅಗತ್ಯತೆಯನ್ನು ಹೇಳುವ ಈ ಕಥೆ ಜೀವಪರ ಚಿಂತನೆಗಳಿಂದ ಕೂಡಿದ್ದು ಸಮಾಜಮುಖಿಯಾದ ಧೋರಣೆಗಳಿಂದಾಗಿ ಸಾಮೂಹಿಕ ಬದುಕಿನ ಸಾರ್ಥಕತೆ, ನಿಸ್ವಾರ್ಥ ಬಾಳು ಇವುಗಳು ಮಹತ್ವದ ವಿಷಯಗಳಾಗಿವೆ ಬದುಕು. ಬದುಕಿನ ಅರ್ಥ ಸಾರ್ಥಕ ಬದುಕು ಸುಖ ಯಾವ

ಬಗೆಯ ಅರ್ಥದಲ್ಲಿದೆ ಎಂಬುದನ್ನು ಸರಳ ಸಾಮಾನ್ಯವಾದ ಆಕರ್ಷಕ ಶೈಲಿಯಲ್ಲಿ ನಿರೂಪಿಸುವುದು ಜನಪ್ರಿಯತೆಗೆ ಕಾರಣವಾಗಿದೆ ಎಂದು ಹೇಳಬಹುದು.

ಕಬ್ಬೆಕ್ಕು ಕಥೆಯಲ್ಲಿ ಬಿ.ಆರ್.ಲಕ್ಷ್ಮಣರಾವ್ ಅವರು ತಮ್ಮ ಗುಣಧರ್ಮವನ್ನು ಎತ್ತಿ ಹಿಡಿದಿದ್ದಾರೆ ಎಂದು ಹೇಳಬಹುದು. ಅಂದರೆ ಭಿನ್ನ ಧರ್ಮಕ್ಕೆ ಸೇರಿದ ಇಬ್ಬರು ಸ್ನೇಹಿತರ ಪ್ರೀತಿಯ ಆಳ, ಪರಸ್ಪರ ಎರಡು ಕುಟುಂಬಗಳ ನಡುವಿನ ಸಾಮರಸ್ಯ ಪ್ರಶಂಸನಾರ್ಹ ಎನಿಸುತ್ತದೆ. ಸ್ನೇಹಿತನಿಗೆ ಹೆಣ್ಣು ನೋಡಲು ಹೋಗಿ, ಆ ವಧು ಈತನನ್ನು ಪ್ರೀತಿಸಿ ತನ್ನ ಪ್ರೀತಿಯನ್ನು ನಿವೇದಿಸಿಕೊಳ್ಳುವುದು, ವಾಸ್ತವಾಂಶ ಮುಚ್ಚಿಡದೆ ಅಲ್ಲಿ ಸತ್ಯ ಹೊರ ಹಾಕುವ ಮುನ್ನ ಈ ಬಗ್ಗೆ ಮಾಲಾಳ ಪ್ರೀತಿ ಪ್ರಾಮಾಣಿಕವಾದುದೆಂದು ಸಮರ್ಥಿಸಲು ಸಾಧ್ಯವಾಗುವುದು. ಆತ ಮುಸ್ಲಿಂ ಸಮುದಾಯಕ್ಕೆ ಸೇರಿದವನಾದರೂ ತನ್ನ ಪ್ರೀತಿ ಜಾತಿಯ ಕಾರಣಕ್ಕೆ ಅಲ್ಲ ಮನಸ್ಸಿನದು ಎಂಬುದನ್ನು ಸಮಷ್ಟಪಡಿಸುವ ಸಂಪ್ರದಾಯಬದ್ಧ ಕುಟುಂಬದ ಮಾಲಾಳ ಆತ್ಮಸ್ಥೈರ್ಯಕ್ಕೆ ಮೆಚ್ಚಿದ ಮುನ್ನ ಅವಳ ಪ್ರೀತಿಯನ್ನು ಸ್ವೀಕರಿಸುತ್ತಾನೆ. ಇದು ಒಂದು ಸಾಮಾನ್ಯ ಕಥಾವಸ್ತುವನ್ನುಳ್ಳ ಕಥೆಯಾದರೂ ಗಮನಿಸಬೇಕಾದ ಅಂಶವೆಂದರೆ ಹಿಂದೂ, ಮುಸ್ಲಿಂ ಧರ್ಮಕ್ಕೆ ಸೇರಿದ್ದರು. ಎರಡು ಕುಟುಂಬಗಳ ನಡುವಿನ ಬಾಂಧವ್ಯ, ಅನಂತರ ಮದುವೆಯು ಆಗುವ ಮಟ್ಟಕ್ಕೆ ಕಥೆಗಾರರು ಸಾಮರಸ್ಯ ಸಾಧಿಸಲು ಹೊರಟಿರುವುದು ಮೆಚ್ಚುಗೆಗೆ ಅರ್ಹವಾದ ವಿಷಯ. ಇದು ಇಂದಿನ ಸಮಾಜದಲ್ಲಿ ಆಗಬೇಕಾದ ಅವಶ್ಯಕವಾದ ವಿಚಾರವೆಂಬುದು ಸ್ಪಷ್ಟವಾಗುತ್ತದೆ.

ಬಿ.ಆರ್. ಲಕ್ಷ್ಮಣರಾವ್ ಅವರು ತುಂಬಾ ಸರಳವಾದ ಸಾಮಾನ್ಯ ವಿಷಯಗಳನ್ನು ಕಥೆಗೆ ವಸ್ತುವಾಗಿ ಆಯ್ಕೆ ಮಾಡಿಕೊಂಡಿರುವುದು ಅದನ್ನು ಅಷ್ಟೇ ಸುಲಭವಾದ, ಸುಭಗವಾದ ಶೈಲಿಯಲ್ಲಿ ನಿರೂಪಿಸಿರುವುದು ಕಥೆಯ ಆಕರ್ಷಣೆಗೆ ಕಾರಣವೆನ್ನಬಹುದು. 'ಯಾಕೆಂದರೆ' ಕಥೆ ತುಂಬಾ ಪುಟ್ಟದಾದ ಕಥೆ, ಬ್ರಾಹ್ಮಣ ಮನೆತನದ ಹೆಣ್ಣು ಮಕ್ಕಳ ಬದುಕನ್ನು ಕುರಿತಾದ ಈ ಕಥೆಯಲ್ಲಿ ಸಂಪ್ರದಾಯ, ಆಚಾರ-ವಿಚಾರಗಳ ಮಧ್ಯೆ ಸಿಲುಕಿದ ಹೆಣ್ಣು ಮಕ್ಕಳ ಮನಸ್ಸಿನ ಒಳಗನ್ನು ಸೂಕ್ಷ್ಮವಾಗಿ ತೆರೆದು ತೋರಿಸುತ್ತಾರೆ. ಜೊತೆಗೆ ಬ್ರಾಹ್ಮಣ ಮಧ್ಯಮ ವರ್ಗದ ಹೆಣ್ಣು ಮಕ್ಕಳಿಗೆ ಮದುವೆಯಾಗುವುದು ಎಷ್ಟು ಕಷ್ಟ ಎಂಬುದನ್ನು ತಿಳಿಸಿದ್ದಾರೆ. ಆದರೆ ಕಥೆಯ ಅಂತ್ಯದಲ್ಲಿ ಬ್ರಾಹ್ಮಣ ವರ್ಗಕ್ಕೆ ಸೇರಿದರೂ ಒಳಪಂಗಡ ಬೇರಾದ ಕಾರಣ ನಿರೂಪಕರಾದ ನೀವೇ ಯಾಕೆ ಮದುವೆಯಾಗಬಾರದು ಎಂಬುದಕ್ಕೆ ಕೊಡುವ ಜಾರಿಕೆಯ ಉತ್ತರ ಪ್ರಾಮಾಣಿಕವಾದುದು ಎಂದೆನಿಸಿದರೂ ಸಂಪ್ರದಾಯ ಮೀರಲಾರದ ಆತನ ಅಸಹಾಯಕತೆಯನ್ನು ಆತನ ನೀಡುವ ಉತ್ತರ ಸಮರ್ಥನೀಯವೆಂಬಂತೆ ತೋರಿದರೂ ವ್ಯವಸ್ಥೆಯನ್ನು ಬದಲಿಸಲು ಮನಸ್ಸಿಲ್ಲದ ಇಲ್ಲವೆ ಸಂಪ್ರದಾಯ ಮೀರಲಾರದ, ಹಾಗೆಯೇ ಆಚಾರ-ವಿಚಾರಗಳಿಂದ ಹೊರಬರಲಾಗದ ಅಸಹಾಯಕ ಸ್ಥಿತಿಯನ್ನು ಇಲ್ಲಿ ವಿಡಂಬಿಸುವ ಚಿತ್ರಣ ಸಹಜವೆಂಬಂತೆ ನಿರೂಪಣೆಗೊಂಡಿದೆ.

ಅದೇ ರೀತಿಯಲ್ಲಿ 'ಗಡಿಯಾರ' 'ಘಾತ' ಕವಿತಾ 'ಜೆಳ್ಳಿ ಹಿಡಿಕೆ' ಕಥೆಗಳಲ್ಲಿಯ ಕಥೆಗಾರರು ಸರಳತೆಯೊಂದಿಗೆ ಸಾಮಾಜಿಕ ಬದುಕನ್ನು ಕುರಿತ ವಿವೇಚನೆಯನ್ನು ಸರಳವಾದ ಘಟನೆಗಳ ಮೂಲಕ ನಿರೂಪಿಸಿದ್ದಾರೆ.

ಬಿ.ಆರ್. ಲಕ್ಷ್ಮಣರಾವ್ ಅವರ ಕಥೆಗಳಲ್ಲೆಲ್ಲಾ ಮುಖ್ಯವಾಗಿ ವ್ಯಕ್ತವಾಗುವುದು. ಅಲ್ಲಿ ಬರುವ ನಾಯಕ, ನಾಯಕಿಯರ ಚಿತ್ರಣದಲ್ಲಿ ಎಲ್ಲಿಯೂ ಹತಾಶೆಯಿಲ್ಲ, ಆಕ್ರೋಶವಿಲ್ಲ, ಸಿಟ್ಟು ಸೆಡವುಗಳಿಲ್ಲದ ಸಂಯಮ ಪೂರ್ಣ ನಡವಳಿಕೆಗಳಿಂದ ಕೂಡಿದವರಾಗಿದ್ದು, ಬದುಕಿನ ಪ್ರಮುಖ ಘಟ್ಟಗಳಲ್ಲೂ ಅವರ ಸೌಮ್ಯ ಗುಣ ಸ್ವಭಾವಗಳೇ ಮುಖ್ಯವಾಗಿರುವಾಗ ಅವರೆಲ್ಲಾ ಕಥೆಗಳಲ್ಲಿ ಎಲ್ಲಿಯೂ ದುರಂತ, ಸಾವು ಈ ಬಗೆಯ ಪ್ರಕರಣಗಳು ನಡೆದಿಲ್ಲ ಎಂಬುದು ಪ್ರಮುಖವಾಗಿ ಗಮನಿಸಬೇಕಾದ ವಿಷಯವಾಗಿದೆ. ಆದರೆ ಅವರ ಕಥೆಗಳೆಲ್ಲೆಲ್ಲಾ 'ನಾನು ಕೊಂದ ಯುವಕ' ಕಥೆಯ ನಾಯಕನಾದ 'ಚಂದ್ರು' ಒಬ್ಬನೇ ಕೊಂದ ನಾಯಕ ಎಂದು ಮುಖ್ಯವಾದರೂ ಅಲ್ಲಿಯ ಎರಡು ತಿರುವುಗಳನ್ನು ಕಥೆಯಲ್ಲಿಟ್ಟು ಆಯ್ಕೆಗೆ ಬಿಟ್ಟು ಬಿಡುವುದೇ ವಿಶಿಷ್ಟವಾಗಿದೆ.

'ನಾನು ಕೊಂದ ಯುವಕ' ಪ್ರಮುಖ ಕಥೆಯಾಗಿ ಪರಿಗಣಿಸಲು ಪ್ರಮುಖವಾದ ಕಾರಣವೆಂದರೆ ಒಂದು ಪ್ರೀತಿ-ಪ್ರೇಮ, ಪ್ರಣಯ, ಹಾಸ್ಯ ವಸ್ತು ವಿಷಯಗಳ ಸುತ್ತ ಸುತ್ತುತ್ತಿದ್ದ ಅವರ ಕಥಾನಾಯಕರಿಗಿಂತ ಭಿನ್ನವಾದವನು ಈ ಕಥೆಯ ನಾಯಕ. ಈತ ಒಬ್ಬ ದಲಿತ ವರ್ಗಕ್ಕೆ ಸೇರಿದವನಾಗಿರುವುದು ಮತ್ತು ಕಥೆಯಲ್ಲಿ ದಲಿತರ ಬದುಕು, ಅವರ ಮೇಲಾಗುತ್ತಿರುವ ದೌರ್ಜನ್ಯ, ಶೋಷಣೆ ಇವುಗಳು ಹಳ್ಳಿಗಾಡಿನ ಬದುಕಿನಲ್ಲಿ ಹೇಗೆ ನಿರಂತರವಾಗಿ ನಡೆಯುತ್ತಿದೆ ಎನ್ನುವುದನ್ನು ಇಲ್ಲಿ ಸ್ಪಷ್ಟಪಡಿಸುತ್ತಾರೆ. ದಲಿತ ಸುಂದರ ಹೆಣ್ಣುಗಳನ್ನು ಕದ್ದು ಭೋಗಿಸುವುದಕ್ಕೆ ಜಾತಿವಂತ ಶ್ರೀಮಂತ ಗಂಡುಗಳಿಗೆ ಯಾವ ಮೈಲಿಗೆಯೂ ಇಲ್ಲ. ಇದಕ್ಕೆ ದಲಿತರು ತಮ್ಮನ್ನು ಒಡ್ಡಿಕೊಂಡಿರುತ್ತಾರೆ. ಕಾರಣ ಅವರ ಸ್ಥಿತಿಗತಿ. ಇವೆಲ್ಲವನ್ನು ಮನಗಂಡ ಚಂದ್ರು ದಲಿತನಾಗಿ ಹುಟ್ಟಿದರೂ ದಲಿತನಲ್ಲದವನಾಗಿ ಬಾಳುವುದು, ಸತ್ಯ ತಿಳಿದಾಗ ತನ್ನವರ ಬದುಕಿನ ಸುಧಾರಣೆಗಾಗಿ ಪ್ರಯತ್ನಿಸಿದಾಗ ಎದುರಾಗುವ ಆತಂಕಗಳು. ಗ್ರಾಮೀಣ ಜನತೆ ಅಕ್ಷರ ಜ್ಞಾನವಿಲ್ಲದ ಅವರಲ್ಲಿ ಬದಲಾವಣೆ ತರುವುದು ಹೇಗೆ ಕಷ್ಟಸಾಧ್ಯ ಎಂಬೆಲ್ಲ ವಿಷಯಗಳ ನಿರೂಪಣೆ ಸಹಜವಾಗಿ ಮೂಡಿ ಬಂದಿದೆ. ಅಂತ್ಯದಲ್ಲಿ ಚಂದ್ರು ಸತ್ಯವನ್ನು ಹೊರ ಹಾಕಿ ಸಮಾಜವನ್ನು ಎದುರಿಸುವ ಮನಸ್ಥೈರ್ಯವಿಲ್ಲದೆ ಬದುಕುವುದು ಒಂದು ಕಡೆಯಾದರೆ ನಿಜವಾದ ಚಂದ್ರು ಸತ್ತ ಎನ್ನುವಲ್ಲಿ ಕಥೆಯ ಮಾರ್ಮಿಕ ಅಂತ್ಯವಾಗಿದ್ದು ಇದು ಗಮನಾರ್ಹವಾಗಿವೆ. ಕಥೆಯ ನಾಯಕನ ಸಾವಿಗೆ ಲೇಖಕರು ಕಾರಣವೆನ್ನುವಲ್ಲಿ ಅರ್ಥಪೂರ್ಣವೆನಿಸಿದೆ.

ಈ ಕಥೆಯಲ್ಲಿ ಗ್ರಾಮೀಣ ಜನರ ಮೌಢ್ಯತೆ, ಕಂದಾಚಾರ, ಅವರನ್ನು ಬದಲಿಸುವುದು ಸುಲಭವೇನಲ್ಲ, ಅದಕ್ಕಾಗಿ ಪ್ರಯತ್ನಿಸಿದ ಚಂದ್ರು ವಿಫಲನಾಗುವುದು. ಇಂದಿನ ವ್ಯವಸ್ಥೆಯನ್ನು ಕುರಿತ ವಿಡಂಬನೆಯನ್ನು ಕಾಣಬಹುದು. ಜೊತೆಗೆ ಇಂಥ ಸಮಾಜವನ್ನು ನೇರವಾಗಿ ಸತ್ಯದ ದಾರಿಯಲ್ಲಿ

ಎದುರಿಸಿ ಹೋರಾಡುವಾಗ ಎದುರಿಸಬೇಕಾದ ಸವಾಲುಗಳು, ಆಗುವ ಅನಾಹುತ ಎರಡನ್ನು ತಿಳಿಸುವ ಮೂಲಕ ಆಯ್ಕೆಗಾಗಿ ಎರಡು ದಾರಿಗಳನ್ನು ನೀಡುವುದು. ಯಾವ ದಾರಿಯಲ್ಲಿ ನಡೆದರೆ ಬಾಳು ಸುಗಮ, ಹೇಗೆ ಗುರಿ ಸಾಧಿಸಬಹುದು ಎಂಬುದನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ. ಇದು ಪ್ರಸ್ತುತ ಸಮಾಜದ ವಿದ್ಯಾವಂತ ಯುವಶಕ್ತಿಯ ಮುಂದಿರುವ ಆಯ್ಕೆಗಳೇ ಆಗಿವೆ ಎಂಬುದೇ ಗಮನಾರ್ಹವಾದ ಅಂಶವೆಂದು ಗುರುತಿಸಬಹುದು.

ಈ ಬಗೆಯಲ್ಲಿ ಬಿ.ಆರ್. ಲಕ್ಷ್ಮಣರಾವ್ ಅವರ ಕಥನ ಸಾಹಿತ್ಯದಲ್ಲಿ 'ಹೀಗೊಂದು ಪ್ರೇಮ ಕಥೆ' ಕಾದಂಬರಿಯು ಪ್ರೀತಿ-ಪ್ರೇಮದ ವಸ್ತು ವಿಷಯದ ನಿರೂಪಣೆಯಾಗಿದೆ. ಹಳ್ಳಿಯ ವೈಶ್ಯ ಕುಟುಂಬಕ್ಕೆ ಸೇರಿದ ಯುವಕ ರವಿ. ಪ್ರಾರಂಭದಿಂದಲೂ ತನ್ನವರ ಬದುಕನ್ನು ಅವರ ಬದುಕಿನ ರೀತಿಯನ್ನು ಅದ್ಕಕಾಗಿ ಅವರು ಆಲೋಚಿಸುವ ಬಗೆಯನ್ನು ವಿರೋಧಿಸುತ್ತಲೇ ಬರುತ್ತಾನೆ ಜೊತೆಗೆ ತನ್ನದೇ ಆದ ಬದುಕು ತಾನಂದು ಕೊಂಡಂತೆ ಬದುಕು ಸಾಗಿಸಲು ಹೆಣಗಾಡುತ್ತಾನೆ. ಅದಕ್ಕಾಗಿ ಇಡೀ ಬದುಕಿನುದ್ದಕ್ಕೂ ಎದುರಿಸಬೇಕಾದ ಆತಂಕಗಳು, ತನ್ನ ಮನೆಯವರ ಪ್ರಭಾವ, ಸಂಪ್ರದಾಯದ ಬಂಧನ, ಸಂಬಂಧಗಳ ಒತ್ತಡ ಈ ಎಲ್ಲದರಿಂದ ಆತ ಹೊರಬರಲು ಪಟ್ಟ ಪಾಡುಗಳು ಇದಕ್ಕೆ ಮುಖ್ಯ ಕಾರಣ ಆತನ ಪ್ರೇಮ ಎಂಬುದು ಇಲ್ಲಿ ಬಹಳ ಮುಖ್ಯವೆನಿಸುತ್ತದೆ.

ಕಾದಂಬರಿಯ ನಾಯಕ ರವಿಯ ಕುಟುಂಬ ನೀತಿ-ನಿಯಮಗಳ ಚೌಕಟ್ಟಿನಲ್ಲಿ ಬದುಕು ಸಾಗಿಸುವ ವೈಶ್ಯ ಪಂಗಡಕ್ಕೆ ಸೇರಿದುದು. ಇಂಥ ಕೌಟುಂಬಿಕ ವಾತಾವರಣವಿದ್ದರೂ ರವಿಯ ಯೋಚನೆಗಳೇ ಬೇರೆ. ತಮ್ಮವರ ಬದುಕಿನ ಬಗ್ಗೆ ಅವರ ಆಲೋಚನೆಗಳ ಬಗ್ಗೆ ವಿರೋಧವಿದೆ. ನಾಯಕನ ಬಂಡಾಯದ ಪ್ರವೃತ್ತಿಗೆ ಇದು ಕಾರಣವಾಗುತ್ತವೆ. ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಲು ಹೋರಾಡುವಂತೆ ಮಾಡುತ್ತದೆ. ಈ ಹೋರಾಟಕ್ಕೆ ಪ್ರೋತ್ಸಾಹ ನೀಡಿ, ಪ್ರೇರಕನಾಗಿ ಬರುವ ಪಾತ್ರ ಶೇಖರನ ಪಾತ್ರ, ಜೊತೆಗೆ ಪೂರಕವಾಗಿ ಬರುವವರು ರಾಮರಾಯರು ಮತ್ತು ಅವರ ಮಗಳು ರಾಧಾ.

ರವಿಯ ಓದನ್ನು ಬೆಂಬಲಿಸಿ, ತಂದೆಯನ್ನು ಒಪ್ಪಿಸಿದವರು ರಾಮರಾಯರು. ಹಣವೇ ಪ್ರಧಾನವೆಂದು ನಂಬಿದ್ದ ತನ್ನವರ ಬದುಕಿನ ರೀತಿ-ನೀತಿಗೆ ಬೇಸತ್ತು ಹೊರ ಬರಲು ತವಕಿಸುತ್ತಿದ್ದ ರವಿಗೆ ಇದು ಪ್ರಥಮ ಜಯವಾಗುತ್ತದೆ. ನಂತರ ಬಿ.ಎಸ್ಸಿ ಓದಿ ಮೇಷ್ಟ್ರರಾಗಬೇಕೆಂಬ ಆಸೆಗೆ ತಣ್ಣೀರು ಬಿದ್ದರೂ ಹಠ ಮಾಡಿ ಬ್ಯಾಂಕ್ ಉದ್ಯೋಗಿಯಾದ ರವಿ ಅದನ್ನು ತನ್ನ ವ್ಯಕ್ತಿತ್ವ ಸ್ಥಾಪನೆಯ ಮೊದಲ ಹಂತವೆಂದು ಭಾವಿಸುತ್ತಾನೆ.

ರವಿಯ ಮನೋಭಾವಕ್ಕೆ ಅವನ ಆಲೋಚನೆಗಳಿಗೆಲ್ಲಾ ಶೇಖರನ ತಾತ್ವಿಕ ವಿಶ್ಲೇಷಣೆಯ ಮಾತುಗಳು ಪ್ರೇರಣೆಯಾದವು. ಶೇಖರನ ಒಡನಾಟವೇ ಅವನಿಗೆ ತನ್ನ ಬದುಕನ್ನು ತಾನಂದುಕೊಂಡಂತೆ ರೂಪಿಸಿಕೊಳ್ಳಲು ಸಹಕಾರಿಯಾಯಿತು. ಶೇಖರ್ ರವಿಯ ಆಲೋಚನೆಗಳಿಗೆ, ಭಾವನೆಗಳಿಗೆ, ಕಾರ್ಯಗಳಿಗೆ ಸಕಾಲದಲ್ಲಿ ಸೂಕ್ತ ಸಲಹೆ, ಸೂಚನೆ, ಮಾರ್ಗದರ್ಶನ ನೀಡುತ್ತಾ

ಒತ್ತಾಸೆಯಾಗಿ ನಿಲ್ಲುತ್ತಾನೆಯೇ ಹೊರತು ಒತ್ತಡ ಹೇರುವುದಿಲ್ಲ. ರವಿ ಅನ್ಯ ಜಾತಿಗೆ ಸೇರಿದ ಗ್ರೇಸಿಯನ್ನು ಪ್ರೀತಿಸುವುದು, ಅದಕ್ಕಾಗಿ ಆತನಿಗೆ ಎದುರಾಗುವ ಅಡೆ-ತಡೆಗೆ ಮನೆಯವರ ವಿರೋಧ, ಇವನ ಪ್ರೇಮವನ್ನು ಮುರಿಯುವ ಎಲ್ಲಾ ಷಡ್ಯಂತ್ರಗಳನ್ನು ಆತನ ಮನೆಯವರು ರೂಪಿಸುತ್ತಾರೆ, ಹೆದರಿಸುತ್ತಾರೆ, ಜೀವರಿಕೆ ಒಡ್ಡುತ್ತಾರೆ. ಗ್ರೇಸಿಯ ಮೂಲಕವು ಅದನ್ನೆಲ್ಲಾ ಪ್ರಯತ್ನಿಸಿ ವಿಫಲರಾಗುವುದು. ರವಿಯನ್ನು ಮನೆಯಲ್ಲಿ ಬಂಧಿಸುವ ಹಂತಕ್ಕೆ ಹೋದಾಗ ಮೋಸದ ಮೂಲಕ ರವಿ ಅಲ್ಲಿಂದ ತಪ್ಪಿಸಿಕೊಂಡು ತನ್ನ ಪ್ರೇಮವನ್ನು ಉಳಿಸಿಕೊಳ್ಳುವಷ್ಟು ಬಂಡಾಯವನ್ನು ತೋರಿಸಿದ್ದಾನೆ.

ಹೀಗೆ ಕಾದಂಬರಿಯ ಕಥೆಯ ಸುತ್ತ ಸಾಮಾನ್ಯವಾಗಿ ಸಹಜವಾಗಿ ಎದುರಾಗುವ ಸಮಸ್ಯೆಗಳು, ಆ ದಿಕ್ಕಿನಲ್ಲಿ ಪೂರಕವಾಗಿ ಬರುವ ಘಟನೆಗಳು, ಸನ್ನಿವೇಶಗಳು, ಪಾತ್ರಗಳು, ಸಂಭಾಷಣೆ ಚಿರಪರಿಚಿತವಾದ ಅನುಭವಕ್ಕೆ ಬರುವಂತೆ ನಿರೂಪಿತವಾಗಿವೆ. ತನ್ನೂರಿನ ಜನರ ರೀತಿ-ನೀತಿಯನ್ನು ಒಪ್ಪದ ಅವರೊಂದಿಗೆ ಬೆರೆತು ಅವರಂತೆ ಬದುಕುವ ಮನಸ್ಸಿಲ್ಲದ ಯುವಕ ತನ್ನವರಿಂದ ದೂರಾಗಿ ಸ್ವತಂತ್ರವಾಗಿ ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಲು ಹೋರಾಡುವ ನೀತಿ ನಿಯಮಗಳಿಗೆ ಪಕ್ಕಾಗಿರುವ ಮಧ್ಯಮ ವರ್ಗದ ಯುವಕನ ಹೋರಾಟದ ವಸ್ತುವಾಗುಳ್ಳ ಕಾದಂಬರಿ ಓದುಗರನ್ನು ಆಕರ್ಷಿಸುವುದು. ಇವೇ ಅಂಶಗಳಿಂದ ಎಂದು ಗುರುತಿಸಬಹುದು. ಇದು ಪ್ರೇಮ ಕಥೆಯಾದರೂ ಕೇವಲ ಪ್ರೇಮಿಗಳ ಕಥೆಯಾಗಿರದೆ ಅದರೊಂದಿಗೆ ಸೇರಿ ಹೋಗಿರುವ ಸಮಾಜದ ಯಾವುದೆ ಪಂಗಡ, ಜಾತಿಗಳ, ಕೌಟುಂಬಿಕ ತಾಕಲಾಟ, ಅವರೊಳಗಿನ ಭಾವನೆಗಳು, ಕೋಪ, ಅಸಹನೆ, ಆಸೆ, ಆಕಾಂಕ್ಷೆ, ಎಲ್ಲಾ ಘಟನೆಗಳನ್ನು ಇಲ್ಲಿನ ಪಾತ್ರ ಸನ್ನಿವೇಶಗಳ ಮೂಲಕ ಕಾದಂಬರಿಕಾರರು ತುಂಬಾ ಸರಳವಾದ, ಸುಲಭವಾದ, ಚಿರಪರಿಚಿತವಾದ ರೀತಿಯಲ್ಲಿ ಆತ್ಮೀಯವಾಗುವ ರೀತಿಯಲ್ಲಿ ನಿರೂಪಿಸುವ ವಿಧಾನದಿಂದಾಗಿ ಕಾದಂಬರಿ ಜನಪ್ರಿಯತೆ ಗಳಿಸಲು ಸಾಧ್ಯವಾಗಿದೆ ಎಂದು ಹೇಳಬಹುದು. ಕಾದಂಬರಿಯಲ್ಲಿನ ಪಾತ್ರಗಳ ನಡತೆಯ ಮೂಲಕ ಬದಲಾವಣೆ ತರುವ ಪ್ರಯತ್ನ ಮಾಡಿದ್ದಾರೆ. ಅದು ಹೋರಾಟದ ಮೂಲಕವಲ್ಲ. ಸಂಯಮ ಪೂರ್ಣ ಹಾಗೂ ವಿವೇಚನಾಯುತವಾದ ಮಾರ್ಗದ ಮೂಲಕ ಪಾತ್ರಗಳ ವ್ಯಕ್ತಿತ್ವದಲ್ಲಿ ಸ್ಪಷ್ಟವಾಗುತ್ತದೆ. ಶೇಖರ್ ಮದುವೆಯಾಗುವ ಕುಸುಮ, ಪತ್ಯಕ್ತಳಾದವಳು. ರವಿ ಮದುವೆಯಾಗುವುದು ಕ್ರಿಶ್ಚಿಯನ್ ಜಾತಿಗೆ ಸೇರಿದ ಗ್ರೇಸಿಯನ್ನು, ಈ ಮೂಲಕ ಒಂದಿಷ್ಟಾದರು ಬದಲಾವಣೆ ಸಾಧ್ಯ ಎಂಬುದನ್ನು ನಿರೂಪಿಸುತ್ತಾರೆ. ಹಾಗೆಯೇ ಬದಲಾವಣೆ ಪ್ರಮುಖವಾಗಿ ಆಗಬೇಕಾಗಿರುವುದು. ಒಳಗಿನಿಂದ, ಹೊರಗಿನಿಂದಲ್ಲ ಎಂಬುದನ್ನು ಸಮರ್ಥಿಸುತ್ತಾರೆ. ಇವೇ ಮೊದಲಾದ ಸರಳ ವಸ್ತುವಿನ ಮೂಲಕ ಗಂಭೀರತೆಯೆಡೆಗೆ ಕಾದಂಬರಿ ಸಾಗುತ್ತದೆ. ಇದರಿಂದಾಗಿ ಇವೇ ಮೊದಲಾದ ಸರಳ ವಸ್ತುವಿನ ಮೂಲಕ ಗಂಭೀರತೆಯೆಡೆಗೆ ಕಾದಂಬರಿ ಸಾಗುತ್ತದೆ. ಇದರಿಂದಾಗಿ 'ನಂಗ್ಯಾಕೋ ಡೌಟು' ಕಾದಂಬರಿ ಹೆಚ್ಚಿನ ಓದುಗ ವರ್ಗವನ್ನು ಪಡೆಯುತ್ತದೆ ಎಂದು ಹೇಳಬಹುದು. 'ನಂಗ್ಯಾಕೋ ಡೌಟು' ಕಾದಂಬರಿ ಹೆಚ್ಚಿನ ಓದುಗ ವರ್ಗವನ್ನು ಪಡೆಯುತ್ತದೆ ಎಂದು ಹೇಳಬಹುದು. ನಾಟಕದಲ್ಲಿಯೂ ಅನುಮಾನವೆಂಬ ಹುಳು ದಾಂಪತ್ಯ ಬದುಕಿನ ಬಿರುಕಿಗೆ ಕಾರಣವಾಗುವುದರ ಜೊತೆಗೆ ಯುವ ಪ್ರೇಮಿಗಳನ್ನು ದೂರವಾಗುವಂತೆ ಮಾಡಿ ಬಿಡುತ್ತದೆ ಎಂಬುದನ್ನು ಸರಳವಾದ

ಭಾಷೆಯಲ್ಲಿ ಆಕರ್ಷಕವಾದ ಹಾಸ್ಯದ ಧಾಟಿಯಲ್ಲಿ ನಿರೂಪಿಸುವ ಕ್ರಮವೇ ಓದುಗರನ್ನು ತನ್ನತ್ತ ಸೆಳೆಯುತ್ತದೆ ಎಂಬುದನ್ನು ಗುರುತಿಸಬಹುದು.

ಲಕ್ಷ್ಮಣರಾವ್ ಅವರ ಕಥನ ಸಾಹಿತ್ಯದ ಜನಪ್ರಿಯತೆಯ ಅಂಶಗಳನ್ನು ಒಟ್ಟಾರೆ ಕಥನ ಸಾಹಿತ್ಯದ ಒಟ್ಟು ನೋಟ. ಅಂದರೆ ಕಥೆ, ಕಾದಂಬರಿ ಹಾಗೂ ನಾಟಕ, ಇವುಗಳ ವಸ್ತು ವಿಷಯ, ಪಾತ್ರ, ಸನ್ನಿವೇಶ, ಸಂಭಾಷಣೆ, ನಿರೂಪಣಾ ವಿಧಾನ. ಈ ಎಲ್ಲಾ ನೆಲೆಯಿಂದ ನೋಡಿದಾಗ ಸ್ಪಷ್ಟವಾಗುವ ಅಂಶಗಳೇನೆಂದರೆ ಲಕ್ಷ್ಮಣರಾವ್ ಅವರ ಬಹುತೇಕ ಕಥೆಗಳಲ್ಲಿ ಮತ್ತು ಕಾದಂಬರಿಗಳಲ್ಲಿ ವ್ಯಕ್ತವಾಗುವ ಪ್ರಮುಖ ವಿಷಯ, ಪ್ರೀತಿ, ಪ್ರೇಮ, ಪ್ರಣಯವನ್ನು ಕುರಿತಾಗಿದೆ. ವಿಶಿಷ್ಟವಾದ ವಸ್ತು ವಿಷಯ, ವಿಭಿನ್ನ ಬಗೆಯ ಪ್ರೇಮ, ಪ್ರೀತಿಯನ್ನು, ಸೊಗಸಾದ ಆಕರ್ಷಕ ಶೈಲಿಯಲ್ಲಿ ನಿರೂಪಿಸುವುದು. ಅವರ ಬರವಣಿಗೆಯಲ್ಲಿ ಕಂಡು ಬರುವ ಸಂಯಮಪೂರ್ಣವಾದ ವಿವೇಚನಾಪೂರ್ಣವಾದ ಬರಹ, ವಿವಿಧ ಜಾತಿ, ಪಂಗಡಗಳ ಬದುಕಿನ ರೀತಿ–ರಿವಾಜುಗಳನ್ನು, ಆಚಾರ–ವಿಚಾರಗಳನ್ನು ಸಂಬಂಧಗಳ ಬಾಂಧವ್ಯದ ತೀವ್ರತೆಯನ್ನು ಸ್ವಾನುಭವದ ನೆಲೆಯಲ್ಲಿ ಆಳಕ್ಕಿಳಿದು ಬಿಂಬಿಸುವ ರೀತಿ ಮೆಚ್ಚುಗೆಯಾಗುತ್ತದೆ. ಮಧ್ಯಮ ವರ್ಗದ ಜನರ ಆಸೆ–ಆಕಾಂಕ್ಷೆಗಳು, ಅವರ ಶಕ್ತಿ ಸಾಮರ್ಥ್ಯದ ಬಗ್ಗೆ, ಸುಪರಿಚಿತವಾದ ನೆಲೆಯಲ್ಲಿ ಘಟನೆಗಳನ್ನು ಜೋಡಿಸುವ ರೀತಿ ಗಮನಾರ್ಹವಾಗಿವೆ. ಇವರ ಕಥೆಗಳಲ್ಲಿ ಬರುವ ಪಾತ್ರ, ಸನ್ನಿವೇಶಗಳು ನಡೆಸುವ ಸಂಭಾಷಣೆಗಳು, ಅವರಲ್ಲಿನ ಭಾವನೆಗಳು, ಕೋಪ–ತಾಪ, ಅಸಹನೆ, ಒಗ್ಗಟ್ಟು ಎಲ್ಲಾ ಘಟನೆಗಳನ್ನು ಪಾತ್ರಗಳು ನಿರ್ವಹಿಸುವ ಮೂಲಕ ಆ ಎಲ್ಲಾ ಕಥೆಗಳು ನಮ್ಮವೇ ಆಗಿಬಿಡುವಂತೆ ಮಾಡುತ್ತಾರೆ. ಇದು ಅವರ ಕಥೆಗಳು ಜನಪ್ರಿಯವಾಗಲು ಕಾರಣವಾದ ಅಂಶಗಳೆಂದು ಹೇಳಬಹುದು. ಅವರ ಕಥೆ, ಕಾದಂಬರಿಯಲ್ಲಿ ವ್ಯಕ್ತವಾಗುವ ಕೌಟುಂಬಿಕ ತಳಮಳಗಳು, ತಾಕಲಾಟಗಳು, ಅವರ ಭಾವನೆಗಳು, ಕೋಪ ಅಸಹನೆಗಳೆಲ್ಲಾ ಓದುಗರಿಗೆ ಬಹಳ ಬೇಗ ತಲುಪುವುದರೊಂದಿಗೆ ಅವೆಲ್ಲವೂ ಅವರಿಗೆ ಆಪ್ತವಾಗಿಬಿಡುತ್ತವೆ. 'ಜೆಸ್ಪರ್' ಒಂದು ಪ್ರೇಮದ ಕಥೆ' ನಿರಂತರ, 'ಕವಿತಾ' ಹೀಗೂ ಆಗುವುದುಂಟು' ಮುಂತಾದ ಕಥೆಗಳಲ್ಲಿ ಬರುವ ಪಾತ್ರ ಸನ್ನಿವೇಶಗಳು. ಅವುಗಳಲ್ಲಿ ವ್ಯಕ್ತವಾಗುವ ಭಾವನಾತ್ಮಕ ವಿಷಯಗಳಲ್ಲಿ ಈ ಎಲ್ಲಾ ಅಂಶಗಳನ್ನು ಕಾಣಬಹುದಾಗಿದೆ. ನೀತಿ–ನಿಯಮಗಳ ಚೌಕಟ್ಟಿನಲ್ಲಿ ಬದುಕುವ ಸಂಪ್ರದಾಯಬದ್ಧ ಕುಟುಂಬಗಳು, ಅದರಿಂದ ಹೊರಬರಲಾರದ ಪ್ರೀತಿಯನ್ನು ಉಳಿಸಿಕೊಳ್ಳಲಾರದೆ, ಪರಿಸ್ಥಿತಿಗೆ ಹೊಂದಿಕೊಂಡು ಜೀವನ ನಡೆಸುವ ಹಲವು ಪಾತ್ರಗಳು ಅವುಗಳೆಲ್ಲಾ ನಮ್ಮಲ್ಲೇ ನಮ್ಮ ಸುತ್ತಮುತ್ತ ಇರುವವರೇ ಎಂಬ ಆಪ್ತವಾದ ಭಾವ ಮೂಡಿಸುವುದರೊಂದಿಗೆ ಕಥೆ ಓದುಗರನ್ನು ತಮ್ಮ ಕಡೆ ಸೆಳೆಯುತ್ತದೆ.

ಬಿ.ಆರ್.ಲಕ್ಷ್ಮಣರಾವ್ ಅವರ ಕಥೆ ಕಾದಂಬರಿಯಲ್ಲಿ ಬರುವ ಬಹುತೇಕ ಪಾತ್ರಗಳು ಸಂಪ್ರದಾಯದಿಂದ ಮುಕ್ತವಾಗಿ ನಿಲ್ಲುವಂತಹವರಲ್ಲ. ಹೀಗೊಂದು ಪ್ರೇಮ ಕಥೆ ಕಾದಂಬರಿಯ ಪಾಲಾಕ್ಷಪ್ಪ, ಜೆಸ್ಪರ್ ಕಥೆಯ ನಾಯಕ, ಯಾಕೆಂದರೆ ಕಥೆಯ ನಿರೂಪಕ, ನಿರಂತರ ಕಥೆಯ ನಾಯಕ

ಆನಂದ. ಈ ಎಲ್ಲಾ ಪಾತ್ರಗಳ ನಡವಳಿಕೆಯ ಮೂಲಕ ಸ್ಪಷ್ಟವಾಗುತ್ತದೆ. ಇವರ ಕಥನಗಳಲ್ಲಿ ಬರುವ ಪ್ರೇಮಿಗಳು ಎದುರಿಸುವ, ಎದುರಿಸಲೇಬೇಕಾದ ಅಡೆ-ತಡೆಗಳಲ್ಲಿ ಪ್ರಸ್ತುತ ಬದುಕಿನಲ್ಲಿ ಕಾಣುವ ವಿಷಯಗಳೇ ಆದರೂ ಅದನ್ನು ಎದುರಿಸುವಲ್ಲಿ ತೋರುವ ಅವರ ಸಂಯಮದ, ಸೌಜನ್ಯಯುತವಾದ ವಿವೇಕಾಯುತವಾದ ನಡೆಯೇ ಪ್ರೇಮವನ್ನು ದುರಂತದ ಕಡೆಗೆ ಕೊಂಡೊಯ್ಯುವುದಿಲ್ಲ. ಬದಲಿಸಲು ಪ್ರಯತ್ನ ಸಾಗಿದರೂ ಕೊನೆಗೆ ಪರಿಸ್ಥಿತಿಯೊಂದಿಗೆ ರಾಜಿಯಾಗುವ ಮೂಲಕ ಪ್ರೇಮವನ್ನು ಗೌರವಿಸುತ್ತಾರೆ. ಸಾಧ್ಯವೆನಿಸಿದಾಗ ತಮ್ಮವರ ಮಮಕಾರ ಬಾಂಧವ್ಯಗಳನ್ನು ಧಿಕ್ಕರಿಸಿ, ಬಾಂಧವ್ಯಗಳ ಸೆಳೆತಕ್ಕೆ, ಭದ್ರತೆ, ರಕ್ಷಣೆಗಳ ಆಮಿಷಕ್ಕೆ ಸೋತು ವ್ಯವಸ್ಥೆಯ ಅಡಿಯಾಳಾಗಿ ಬದುಕಬಾರದು ಎಂಬ ದಿಟ್ಟ ನಿಲುವಿಗೆ ಬಂದ ರವಿಯಂಥ ಒಬ್ಬೊಬ್ಬರನ್ನು ನಾವು ಕಾಣಬಹುದಾದರೂ ಬಹುತೇಕ ಎಲ್ಲರೂ ವ್ಯವಸ್ಥೆಯೊಟ್ಟಿಗೆ ಒಂದಾಗಿಯೇ ಬದುಕುತ್ತಾರೆ.

ಜಿ.ಆರ್.ಲಕ್ಷ್ಮಣರಾವ್ ಅವರ ಕಥೆಗಳಲ್ಲಿನ ಬಹಳ ಮುಖ್ಯವಾಗಿ ವ್ಯಕ್ತವಾಗುವ ಅಂಶವೇನೆಂದರೆ ಜೀವಪರ ಚಿಂತನೆಯಿಂದ ಕೂಡಿದ ಪ್ರೀತಿಯ ಜೀವಂತಿಕೆಯ ಸೆಲೆಯನ್ನು ನಿರಂತರವಾಗಿವುದು. ಪ್ರೀತಿಯ ಅಗತ್ಯ ಮತ್ತು ಮಹತ್ವವನ್ನು ಹೇಳುವುದು. ಸ್ವಾರ್ಥಪರನಾದ ಮನುಷ್ಯ ಪ್ರೀತಿಸುವ ಶಕ್ತಿಯನ್ನು ರೂಢಿಸಿಕೊಳ್ಳಬೇಕಾದ ಅಗತ್ಯವನ್ನು. ಆಧುನಿಕ ಸಾಮಾಜಿಕ ಬದುಕಿನಲ್ಲಿ ಮನುಷ್ಯ ಸಂಬಂಧಗಳು ಮನುಷ್ಯ ಮನುಷ್ಯರ ನಡುವಿನ ಗೋಡೆಯಾಗದೆ ಅವರನ್ನು ಬಂಧಿಸುವ ಬಾಂಧವ್ಯದ ತುರ್ತಿನ ಅಗತ್ಯವನ್ನು ಅವರ ಕಥೆಗಳಲ್ಲಿ ತರುವುದು ಓದುಗರಿಗೆ ಇವರು ಆತ್ಮೀಯ ಸಾಹಿತಿಯಾಗುವಂತೆ ಮಾಡಿದೆ. ಇವರ ಕಥೆಗಳಲ್ಲಿ ಪ್ರೇಮವಷ್ಟೇ ಅಲ್ಲ ಅದಕ್ಕೆ ಪೂರಕವಾದ ಅಂಶಗಳನ್ನು ಒಳಗೊಂಡ ವಸ್ತು ವಿಷಯಗಳನ್ನು ನಿರೂಪಿಸುವ 'ಒಂದು ರಾತ್ರಿ' 'ದಾಖಲೆ' 'ಗಡಿಯಾರ' ಮೊಲೆ ಬೆಂಕಿ, ಮುದುಕ' 'ವಿಹಾರ' 'ಬೆಳ್ಳಿ ಹಿಡಿಕೆ' ಕಥೆಗಳು ಇವೆ. ಇದರಲ್ಲಿ ಅವರ ಸಾಮಾಜಿಕ ಕಳಕಳಿ, ಬದ್ಧತೆಗಳನ್ನು ಕಾಣಬಹುದಾಗಿದೆ. ಪ್ರೀತಿ ಪ್ರೇಮ, ಪ್ರಣಯದಂಥ ಆಕರ್ಷಕವಾದ ವಸ್ತು ವಿಷಯದ ಜೊತೆಗೆ ದಾಂಪತ್ಯ ಬದುಕು, ಕೌಟುಂಬಿಕ ಜೀವನ, ಆಧುನಿಕ ನಾಗರೀಕ ಬದುಕು, ಪ್ರಸ್ತುತ ಸಂದರ್ಭವನ್ನು ಕುರಿತ ವ್ಯಂಗ್ಯ, ವಿಡಂಬನೆ, ವಿಷಾದ ಇವುಗಳನ್ನು ನಿರೂಪಿಸುತ್ತಾರೆ. ಪ್ರಣಯದ ಮಧುರ ಭಾವನೆ, ಕಾಮದ ನರುಗಂಪು, ಸಾಮಾಜಿಕವಾದ ವಿಷಾದ ವಿಡಂಬನೆ ಈ ಎಲ್ಲವುಗಳಲ್ಲಿ ಅವರು ಬದುಕಿನ ಸಾಮಾನ್ಯ ಸಂಗತಿಗಳಿಗೂ ಸ್ಪಂದಿಸುವ ಮೂಲಕ ಅನುಭವಕ್ಕೆ ಬಂದಂತೆ, ಅನುಭವಿಸಿದಂತೆ ತಮ್ಮ ಬರಹ ಇರಬೇಕೆಂಬ ಅವರ ಧೋರಣೆಯೇ ಓದುಗರಲ್ಲಿ ಆಪ್ತವೆನ್ನುವಂತೆ ಮಾಡುತ್ತವೆ. ತಿಳಿಯಾದ ಭಾಷೆ, ಸರಳವಾದ ಶೈಲಿ, ನೇರವಾದ ವಿಷಯ ಮಂಡನೆ ನಮ್ಮ ಸುತ್ತ ಮುತ್ತಲಿನ ವಿಷಯಗಳ ಅವರ ಕಥಾನಕದ ವಸ್ತು ವಿಷಯಗಳಾಗಿ ಅವರ ಬರವಣಿಗೆ ಆಪ್ತ ಎನಿಸುತ್ತದೆ. ಲಕ್ಷ್ಮಣರಾವ್‌ರವರ ಕಥೆಗಳಲ್ಲಿ ವ್ಯಕ್ತವಾಗುವ ಮೌಲ್ಯಗಳೆಂದರೆ ಸಹನೆ, ಪ್ರಾಮಾಣಿಕತೆ, ಪ್ರೀತಿ ಗೆಳೆತನಗಳ ಸಂವೇದನೆಯು ಮೌಲ್ಯವಾಗಿ ನಿರೂಪಿತವಾಗಿರುವುದು ಪ್ರಮುಖವಾದ ವಿಷಯವಾಗಿದೆ.

ಜಿ.ಆರ್.ಲಕ್ಷ್ಮಣರಾವ್ ಅವರ ಕಥೆ ಮತ್ತು ಕಾದಂಬರಿಗಳಲ್ಲಿ ವ್ಯಕ್ತವಾಗುವ ವಿಷಯಗಳು ನೈಜತೆಯಿಮದ ಕೂಡಿದೆ. ನಮ್ಮ ಆಜುಬಾಜಿನಲ್ಲಿ, ನಮ್ಮೊಳಗೆ ನಡೆಯುತ್ತವೆ ಎಂಬ ಭಾವ ಮೂಡಿಸುತ್ತವೆ. ಹಾಗಾಗಿಯೇ ಅವು ಇಷ್ಟ ಪಟ್ಟು ಓದಿಸಿಕೊಂಡು ಹೋಗುತ್ತವೆ. ಬದುಕಿನ ವಿಷಾದವನ್ನು ಅದ್ಭುತವಾಗಿ ದಾಖಲಿಸುವ ಮಾನವ ಸಂಬಂಧದ ಸಂಕೀರ್ಣತೆಯ ಚಿತ್ರಣವನ್ನು ತರುತ್ತಾರೆ. ಇಲ್ಲಿ ಪಾತ್ರಗಳು ಓದುಗರನ್ನು ಕಾಡುತ್ತವೆ. ಇವರ ಕತೆಯನ್ನು ಕಾತರದಿಂದ ಓದುತ್ತಾ ಸಾಗುವ ಓದುಗನಿಗೆ ಅಂತ್ಯದಲ್ಲಿ ಮಧ್ಯಮ ವರ್ಗದ ಕೌಟುಂಬಿಕ ಬದುಕಿನಲ್ಲಿ ಸರ್ವೆ ಸಾಮಾನ್ಯವಾದ ಸಹಜ ವಿಷಯಗಳು ಎನ್ನುವ ನಿರಾಳ ಮನಸ್ಥಿತಿಗೆ ಬರುವಂತೆ ಮಾಡುವುದು ಆಕರ್ಷಕವಾಗಿ ಓದುಗರಿಗೆ ಹತ್ತಿರವಾಗುತ್ತಾರೆ. ಹೀಗೆ ಅವರ ಕಥನ ಸಾಹಿತ್ಯದಲ್ಲಿ ಜನಪ್ರಿಯ ಮತ್ತು ಗಂಭೀರ ವಿಷಯಗಳ ಸಮನ್ವ ಸಾಧಿತವಾಗಿರುವ ಬಗೆಯನ್ನು ಹಾಗೆಯೇ ಅವರ ಕಥನ ಸಾಹಿತ್ಯದ ಜನಪ್ರಿಯತೆಯನ್ನು ಸ್ಪಷ್ಟ ಪಡಿಸಿಕೊಳ್ಳಲಾಗಿದೆ. ಅದರಂತೆಯೇ ಅವರ ಕಾವ್ಯದಲ್ಲಿನ ಜನಪ್ರಿಯ ಮತ್ತು ಗಂಭೀರ ಅಂಶಗಳ ಬಗೆಗಿನ ಚರ್ಚೆಯು ಅವರ ಕವಿತೆಗಳ ವಿಶ್ಲೇಷಣೆಯ ಮೂಲಕ ವಿವೇಚಿಸಿದಾಗ ಲಕ್ಷ್ಮಣರಾವ್ ರವರ ಕಾವ್ಯದ ಭಾಷೆಯ ಬಳಕೆ, ಹೊಸ ಹೊಸ ಹೋಲಿಕೆಗಳು ಎಲ್ಲರ ಮನಸ್ಸಿಗೆ ಹತ್ತಿರವಾಗುತ್ತವೆ. ಹಾಸ್ಯದ ಮೂಲಕ ಗಂಭೀರ ಚಿಂತನೆಯ ಕಡೆಗೂ ಸೆಳೆಯುವ ಅವರ ಕವಿತೆಗಳಲ್ಲಿ ಕವಿಯ ವ್ಯಕ್ತಿತ್ವದ ರೂಪಗಳಾದ ಲವಲವಿಕೆ, ವಿನೋದ, ಉಲ್ಲಾಸಗಳು ಅಡಕಗೊಂಡಿವೆ. ಲಕ್ಷ್ಮಣರಾವ್ ರವರು ಯಾವುದೇ ಪಥ – ಪಂಥಗಳ ಮೂಲಕ ಗುರುತಿಸಿಕೊಳ್ಳದೆ ಮುಕ್ತವಾಗಿ ತಮ್ಮದೇ ದಾರಿಯಲ್ಲಿ ಸಾಗುತ್ತಾ ಜನಕ್ಕೆ ಹತ್ತಿರವಾದ ಮಾರ್ಗದಲ್ಲಿ ಸಾಗುವ ಧೋರಣೆಯೇ ಅವರ ಕಾವ್ಯ ಜನಪ್ರಿಯತೆ ಗಳಿಸಲು ಕಾರಣವಾಗಿವೆ ಎಂದು ಗುರುತಿಸಬಹುದು. ಯಾವುದೇ ವಸ್ತು ವಿಷಯವನ್ನು ಕುರಿತು ಅನಾಯಸವಾಗಿ ಸೊಗಸಾದ ಕವನಗಳನ್ನು ರಚಿಸುವ ರೀತಿ ಅವರಿಗೆ ಸಿದ್ಧಿಸಿವೆ. ಸರಳವಾದ ಮಾತುಗಳ ಹಿತವಾದ ಸುಭಗಶೈಲಿ ಅವರ ಬರವಣಿಗೆಗೆ ಒಗ್ಗಿ ಹೋಗಿವೆ. ರಂಜನೆಯು ಪ್ರಧಾನವಾಗಿ ಅವರ ಕವಿತೆಗಳಲ್ಲಿ ಕಂಡು ಬರುವ ಅಂಶ ಅದೇ ಅವರ ಉದ್ದೇಶವು ಎನ್ನಬಹುದು. ಅವರ ಕವನಗಳ ಕೇಂದ್ರ ಬಿಂದು ಹೆಣ್ಣು, ' ಅಮ್ಮ' 'ವಾಸಂತಿ' ' ಗಾಂಡಲೀನ ಬಾ ' ' ಸಾಕು ' ಶಕುಂತಲೆ ' ' ವಾತಾವರಣ ' 'ಲೋಲೀಟಾ ' ಉಮಾ v/s ರಮಾ ಕವಿತೆ, ಇತ್ಯಾದಿ ಕವಿತೆಗಳಲ್ಲಿ ಹೆಣ್ಣಿನ ಅಂಗ ಸೌಷ್ಟವ ಮಾತ್ರವಲ್ಲ ಅವಳ ಅಂತರಂಗದಲ್ಲಿನ ನೋವು ದು:ಖ, ಸಂಕಟಗಳು, ಛಲ, ಕುಟಿಲತೆಗಳನ್ನೆಲ್ಲಾ ಚಿತ್ರಿಸುತ್ತಾರೆ, ಇದು ಕೂಡ ಜನಪ್ರಿಯತೆಯ ಅಂಶವಾಗಬಹುದು.

ಹಾಗೆಯೇ ಅವರ ಕಾವ್ಯ ಹಾಸ್ಯ, ವಿನೋದ ಸಂತೋಷದಲ್ಲಿ ಪ್ರಾರಂಭವಾಗಿ ಅಂತ್ಯದಲ್ಲಿ ವಿವೇಕದ ಮಾತುಗಳಿಂದ ಕೊನೆಗೊಳುತ್ತವೆ. ಲಕ್ಷ್ಮಣರಾವ್ ಅವರ ಕಾವ್ಯ ಬದುಕಿಗೆ ಆಪ್ತವಾಗಿ ಬದುಕನ್ನು ತೀವ್ರವಾಗಿ ಪ್ರೀತಿಸುವುದನ್ನು ಕಾಣಬಹುದು. ಬದುಕಿನ ಬಗ್ಗೆ ಪ್ರೀತಿ ಉಕ್ಕಿಸುವ ಕಾವ್ಯ ಅವರದಾಗಿದೆ. ಅವರ ಕವಿತೆಗಳಲ್ಲಿ ಕಾಮವು ತಾರುಣ್ಯ ಪೂರ್ವದ ಅನುಭವದಲ್ಲಿಯೇ ಕಾಣುತ್ತವೆ.

ಪ್ರೀತಿ ಪ್ರೇಮವನ್ನು ಕವಿ ಅನುಭವಿಸುತ್ತಾರೆ. ಇವರ ಕವಿತೆಗಳಲ್ಲಿನ ಭಾಷೆ ಸರಳತೆಯ ಕಾರಣದಿಂದಾಗಿ ಸಾಮಾನ್ಯರನ್ನು ತಲುಪಲು ಸಾಧ್ಯವಾಗಿದೆ. ಯೌವ್ವನ ಸಹಜ ಭಾವನೆಗಳ ಬಗ್ಗೆ ಲವಲವಿಕೆ, ಉತ್ಸಾಹದಿಂದ ಕೂಡಿದ ಬರವಣಿಗೆ ಅವರದು, ಚಳುವಳಿಗಳಿಂದ ಹೋರಾಟಗಳಿಂದ ದೂರವಿದ್ದರೂ ತಮ್ಮ ಕವಿತೆಗಳಲ್ಲಿ ಬಂಡಾಯದ ಸಣ್ಣ ಬೀಜವೊಂದು ಇದ್ದೇ ಇರುತ್ತದೆ. ಸಾಮಾಜಿಕ ಸಾಹಿತ್ಯದ ಸವಾಲುಗಳನ್ನು ಸಶಕ್ತ ರೀತಿಯಲ್ಲಿ ಕಟ್ಟಿಕೊಂಡಿರುವ ಅಂಶಗಳು ' ಟುವಟಾರ ' 'ಲಿಲ್ಲಿ ಪುಟ್ಟಿಯ ಹಂಬಲ' ಕವನಸಂಕಲನದ ಅನೇಕ ಕವಿತೆಗಳಲ್ಲಿ ಕಂಡು ಬರುತ್ತವೆ. ಲಕ್ಷ್ಮಣರಾವ್ ಅವರ ಕಾವ್ಯ ಉಪಮೆ ರೂಪಕಗಳ ಮೂಲಕ ಕಲ್ಪನೆಗಳ ಮೂಲಕ ನಿರೂಪಿತವಾಗಿಲ್ಲ. ತಾವು ಕಂಡಿರುವ ತಮ್ಮ ಮನಸ್ಸಿಗೆ ತಟ್ಟಿದುದನ್ನು ಮಾತ್ರ ಹೇಳುತ್ತಾರೆ. ವಾಸ್ತವ ಜಗತ್ತಿಗೆ, ವರ್ತಮಾನಕ್ಕೆ ಹತ್ತಿರವಾಗುವ ಇವರ ಕಾವ್ಯದ ಗುಣವೇ ಜನಪ್ರಿಯತೆಗೆ ಕಾರಣವಾಗುತ್ತದೆ. ಲಕ್ಷ್ಮಣರಾವ್ ಅವರು ಬಂಡಾಯದ ಕವಿಗಳಲ್ಲ. ಅವರ ಸ್ವಂತ ಬದುಕೇ ಬಂಡಾಯವನ್ನು ರೂಢಿಸಿಕೊಂಡಿದೆ. ಅವರ ವೈಯುಕ್ತಿಕ ಬದುಕಿನ ಬಂಡಾಯ ಮತ್ತು ಅನುಭವಗಳಿಂದ ಕೂಡಿದ ಮನುಷ್ಯ ಪರವಾದ ಕಾವ್ಯ ಅವರದು. ಪೂರಕವಾಗಿ ವ್ಯಂಗ್ಯ ವಿಷಾದಗಳನ್ನು ಕಾವ್ಯದಲ್ಲಿ ತರುತ್ತಾರೆ. ಆ ಮೂಲಕ ತಮ್ಮನ್ನು ನವೀಕರಿಸಿಕೊಳ್ಳಲು ಬಯಸುವ ಕವಿಯಾಗುತ್ತಾರೆಂದು ಹೇಳಬಹುದು.

ಲಕ್ಷ್ಮಣರಾವ್ ಕಾವ್ಯ ಹರಹಿನಲ್ಲಿ ದಿನದ ಬದುಕಿನ ಸರಳ ಸಂಗತಿಗಳು ಮಹತ್ವದ ಸ್ಥಾನ ಪಡೆಯುವುದು ಮೇಲುನೋಟಕ್ಕೆ ಸರಳವಾಗಿ ಕಂಡು ಬಂದರೂ ಆದರೆ ಅಂತಹ ಸಣ್ಣ ಸಣ್ಣ ವಿಷಯಗಳೇ ಜೀವನವನ್ನು ರೂಪಿಸುವ ಮತ್ತು ಮುಂದೆ ಸಾಗಿಸುವ ಪ್ರತಿಮೆಗಳಾಗಿವೆ ಅದಕ್ಕಾಗಿಯೇ ಇವರ ಕವಿತೆಗಳನ್ನು ಓದಿದಾಗ ಯಾರು ಬೇಕಾದರೂ ಬರೆಯಬಹುದಾದ ಸರಳ ಕವಿತೆಗಳು ಎಂದೆನ್ನಿಸಿದರೂ ಅವುಗಳೇ ವಿಶಿಷ್ಟವಾದ ಒಂದು ಒಳನೋಟವನ್ನು ತೆರೆದುದಿಡುತ್ತದೆ ಇದೇ ಲಕ್ಷ್ಮಣರಾವ್ ಅವರ ಕಾವ್ಯದ ಜನಪ್ರಿಯತೆಗೆ ಕಾರಣವಾಗುವ ಅಂಶವೆಂದು ಹೇಳಬಹುದು.

ಬಿ.ಆರ್.ಲಕ್ಷ್ಮಣರಾವ್ ಅವರ ಕವಿತೆಗಳಲ್ಲಿ ಮನಸ್ಸಿನಾಳದ ನವಿರಾದ ಭಾವನೆಗಳನ್ನು ಅರಳಿಸುವ, ಕೆರಳಿಸುವ, ಕಮರಿಸುವ ಮೂಲಕ ಖುಷಿ, ವಿಷಾದ, ನೋವು, ನಲಿವು ಸಂಭ್ರಮಗಳನ್ನು ಸೃಷ್ಟಿಸಿ ವಿಚಾರಕ್ಕೆ ಒಳಪಡಿಸುವ ಅಂಶಗಳಿವೆ. ಅಂತರಂಗದ ಒಳದನಿಗಳು, ವಿನೋದಗಳು, ಚೇಷ್ಟೆಗಳು ಮುಕ್ತವಾಗಿ ವಸ್ತು ನಿಷ್ಠವಾಗಿ ತನ್ನನ್ನು ತನ್ನ ಸುತ್ತಲಿನ ಪರಿಸರವನ್ನು ತನ್ನ ಜಗತ್ತನ್ನು ಕಂಡುಕೊಳ್ಳುವುದು. ತನ್ನ ಮಿತಿಗಳ ಅರಿವು ಸಾಧ್ಯವಾದಾಗ ಅವುಗಳನ್ನು ಮೀರುವ ಪ್ರಯತ್ನ ಅವರ ಕಾವ್ಯದ ಜನಪ್ರಿಯತೆಗೆ ಕಾರಣವಾಗುವ ಅಂಶಗಳಾಗುತ್ತವೆ ಎನ್ನಬಹುದು. ಇವರ ಕವಿತೆಗಳಲ್ಲಿ ಬರುವ ಹೆಣ್ಣಿನ ಪಾತ್ರಗಳು ಓದುಗರ ಮನಸ್ಸಿನಲ್ಲಿ ನೆಲೆ ನಿಲ್ಲುವಂತಹವುಗಳು, ವೆಂಕಟಸುಬ್ಬಿ, ಸುಬ್ಬಾಭಟ್ಟರ ಮಗಳೇ, ಉಮಾ – ರಮಾ, ಶಕೂ, ಇತ್ಯಾದಿ ಪಾತ್ರಗಳು ಓದುಗರ ಮನಸ್ಸಿನಿಂದ ಮರೆಯಾಗದೆ. ಉಳಿಯುವ ಪಾತ್ರಗಳಾಗಿವೆ. ಹಾಗೆಯೇ ಅವರ ಕಾವ್ಯದಲ್ಲಿ ಕಂಡು ಬರುವ ಮತ್ತೊಂದು ಪ್ರಮುಖ ಅಂಶವೆಂದರೆ,

ತುಂಟತನ ಬದುಕಿನ ಸಣ್ಣ ಪುಟ್ಟ ವಿವರಗಳಲ್ಲೆ, ಚೇಷ್ಟೆ ಮಾಡುತ್ತಲೇ ಗಂಭೀರತೆಯ ಕಡೆಗೆ ಸಾಗಿ ಅಸ್ಥಿತ್ವವನ್ನು ಅಲ್ಲಾಡಿಸುವ ರೀತಿಯ ಕವಿತೆಗಳನ್ನು ಬರೆದಿದ್ದಾರೆ. ಇವರು ತಮ್ಮ ಕವನಗಳಲ್ಲಿ ಕಾಮವನ್ನು ಬಹಿರಂಗವಾಗಿ ಮುಕ್ತವಾಗಿ ಆರಾಧಿಸಿದವರು. ಆ ಮೂಲಕ ಯುವ ಜನರ ಮನಸ್ಸನ್ನು ಖುಷಿಗೊಳಿಸಿದವರು, ಪೋಲಿತನ, ತುಂಟತನದ ಮೂಲಕ ಯುವ ಮನಸ್ಸಿಗೆ ಹತ್ತಿರವಾದವರು, ಹಾಗಾಗಿ ಅವರ ಪ್ರಾರಂಭದ ಎಲ್ಲಾ ಕವನಗಳು ಪ್ರೇಮ, ಕಾಮದ ವಸ್ತುವನ್ನು ಆಧರಿಸಿದವುಗಳಾಗಿವೆ.

" ಟುವಟಾರ ' 'ಲಿಲ್ಲಿ ಪುಟ್ಟಯ ಹಂಬಲ ಕವನ' ಸಂಕಲನದ ಕವಿತೆಗಳಲ್ಲಿ ಈ ಅಂಶವನ್ನು ಕಾಣಬಹುದು. ಲಕ್ಷ್ಮಣರಾವ್ ಅವರ ಈತುಂಟತನವನ್ನು ರಸಿಕತೆ ಎಂತಲೂ, ಅದನ್ನೇ ಪೋಲಿತನವೆಂತಲು ಹೇಳಬಹುದಾದರೂ ಅಸಭ್ಯತನ, ಅಶ್ಲೀಲತೆಯನ್ನು ಎಲ್ಲಿಯೂ ಬಳಸಿಕೊಂಡಿಲ್ಲ ಎಂಬುದು ಗಮನಾರ್ಹ ವಿಷಯವಾಗಿದೆ.

ಹೆಣ್ಣು ಕಾಮಾಸಕ್ತಿಗೆ ಮಾತ್ರವಲ್ಲ ಗೌರವಕ್ಕೂ ಪಾತ್ರವಾಗಿರುವುದಕ್ಕೆ ಶಕ್ಕೂ, ಲೋಲೀಟಾ, ಶಶಿ, ಇತ್ಯಾದಿ ಪಾತ್ರಗಳು ಇದಕ್ಕೆ ಉದಾಹರಣೆಯಾಗಿವೆ. ಇದರಲ್ಲಿ ಪೋಲಿತನಕ್ಕೆ ಬದಲಾಗಿ ನಿಜವಾದ ವೇದನೆಯನ್ನು ತರುತ್ತಾರೆ ' ಸಖೀಗೀತ ' ಕವಿತೆಯಲ್ಲಿ ಬರುವ ಶಕೂವಿನ ಚಿತ್ರಣದಲ್ಲಿ " ಅಪ್ಪನ ಹೊನ್ನ ಚೌಕಟ್ಟಿನ ಕನ್ನಡಕದ ಕಣ್ಣಿಗೆ ಕುರೂಪಿಯಾಗಿ ಕಂಡ ನನ್ನ ಬಡ ಹೆಣ್ಣೆ ಶಕು ' ಎನ್ನುತ್ತಾರೆ . ಅಂದರೆ ಅಪ್ಪನ ಕಣ್ಣಿಗೆ ಕುರೂಪಿ ಕಂಡರೂ ' ಬಡ ಹೆಣ್ಣು' ಎನ್ನುವಲ್ಲಿ ತಂದೆಯ ನಿರಾಕರಣೆ ಯಾವ ಕಾರಣಕ್ಕೆ ಎನ್ನುವುದು ಸ್ಪಷ್ಟವಾಗುತ್ತದೆ. ಆದರೆ ಪ್ರೀತಿಗೆ ಇದಾವುದೂ ಬೇಕಿಲ್ಲ. ಅವಳೇ ಸುಂದರಿ, ಅವಳೇ ಬೇಕೆಂಬಲ್ಲಿಗೆ ಪ್ರೀತಿ ತುಡಿತ ಮೆಚ್ಚುವ ಭಾವವಾಗಿದೆ.

" ಶಶಿಯ ಮೊರೆ ಕವಿತೆಯಲ್ಲಿನ ಶಶೀಯ ಪಾತ್ರ ಮಡಿವಂತಿಕೆಯ ಮನಸ್ಸಿನ ಶಶಿಗೆ ಅಮೇರಿಕದ ಕಾಕಟೇಲ್ ಕುಡಿ ' ಎನ್ನುವಾಗ ಶಶಿ ನೀಡುವ ಉತ್ತರ ಹೆಣ್ತನವನ್ನು ಉಳಿಸಿಕೊಳ್ಳುವ ಜೊತೆಗೆ ಗಂಡಿನ ಪುಂಡಾಟಿಕೆಗೆ ಮನಸೋಲದ ಆತ್ಮಸ್ಥೈರ್ಯ ಕಾಪಾಡಿಕೊಳ್ಳುವ ಮೂಲಕ ಶಶಿ ಪಾತ್ರವು ಗೌರವಕ್ಕೆ ಪಾತ್ರವಗುತ್ತೆಂಬುದಕ್ಕೆ ಕವಿತೆಯ ಅಂತ್ಯದ ಸಾಲುಗಳು ಸಾಕ್ಷಿಯಾಗಿವೆ.

" ಥೂ ಬಿಡೀಪ್ಪ
ನನಗ್ಗೊತ್ತಿಲ್ವೆ ನಿಮ್ಮ ಮಾತಿನ ಮೋಡಿ
ಮೆತ್ತಗೆ ಮತ್ತೇರಿಸಿ
ನನ್ನ ಹಳ್ಳ ತಿಟ್ಟುಗಳಲ್ಲೆಲ್ಲ ನಿಮ್ಮ ಅಸೆಗೈ
ಜೇಪು ಹರಿದಾಡಿಸಿ
ಸಡಿಲಿಸಿ ನನ್ನ ಕನ್ಯತ್ವದ ಲಾಡಿ
ಆ ಮೇಲೆ ನನ್ನ ಮೈಮೇಲೆಲ್ಲ ನಿಮ್ಮ ರಂಪ ರಾಡಿ
ದಯವಿಟ್ಟು

ನನ್ನ ಕ್ಷೇತ್ರದಲ್ಲು ನಿಮ್ಮ ಧ್ವಜ ನೆಟ್ಟು
ನನ್ನ ಬಸಿರಲ್ಲೂ ಒಂದು ವಿಯಟ್ನಾಂ ಬಿತ್ತಬೇಡಿ"

ಕ್ಯಾಮರಾ ಕಣ್ಣು ; ಪು ; ೪೫

ಎನ್ನುವಲ್ಲಿ ತನ್ನ ತನದ ಬಗ್ಗೆ ಆಕೆಯ ಗೌರವವು ನಮಗೆ ಆಕೆಯ ಬಗ್ಗೆ ಅಭಿಮಾನ ಬರುವಂತೆ ಮಾಡುತ್ತದೆ.

'ರಗಳೆ' ಕವಿತೆಯಲ್ಲಿನ ಸುಬ್ಬಾಭಟ್ಟರ ಮಗಳೇ' ನಂದೆಲ್ಲಾ ನಿಂದೆ ತಗೊಳ್ಳೆ ಎನ್ನುವ ಕವಿ ಅವಳಿಗಾಗಿ ಕೊಡಲು ಸಿದ್ಧನಾಗಿರುವ ವಸ್ತುಗಳೇನೇನು ಎಂಬುದು ಪ್ರಕೃತಿಯನ್ನು ಅವಳಿಗೆ ನೀಡಲು ಹೊರಟಿದ್ದಾರೆ ಅ ಮೂಲಕ ತನ್ನ ಸಿರಿ ಸುಖಸಂಪತ್ತೇನು, ಅವುಗಳನ್ನು ಪಡೆದು ನಾವೆಷ್ಟು ಸುಖಿಗಳಾಗಿರುವ ಎನ್ನುವುದು ನಂತರ ತನ್ನ ವಾಸ್ತವ ಬದುಕಿನ ಬಗ್ಗೆ ಪರಿಚಯಸುವ ಪರಿ ಹಾಸ್ಯದ ಧಾಟಿಯಿಂದ ಗಂಭೀರತೆ ಕಡೆಗೆ ಸಾಗುತ್ತಾ ಅಂತ್ಯದಲ್ಲಿ ಕವಿ ಹೇಳುವ ಮಾತು ವಿವೇಚನೆಯತ್ತ ಸಾಗಿದರೂ ಮತ್ತೆ ಹಾಸ್ಯದ ಕಡೆಗೆ ಸೆಳೆಯುತ್ತಾ ಅಂತ್ಯವಾಗುತ್ತದೆ.

ಈ ಸಿಂಹಾಸನದಲ್ಲಿ ಕುಳಿತಿರುವ ಹೂ, ಈ ಬಾಗಿದ ಬೇರು,
ಒಳಗಡೆ ಹುಳು ನೂರಾರು
ಸೋತು ಜೋಲುತಿವೆ ಆಲದ ಮರದಲ್ಲಿ ಜಿಳಲು ಶಿಶ್ನ ಸರ್ಪ
ಹಲ್ಲು ಮುರಿದ ದರ್ಪ
ಸುಬ್ಬಾಭಟ್ಟರ ಮಗಳೇ
ಏಕೆ ? ಸಾಕಾಯಿತೆ ನನ್ನ ರಗಳೇ

ಕ್ಯಾಮರ ಕಣ್ಣು ; ಪು ; ೫೨

ರಗಳೆ ಎನ್ನುವಲ್ಲಿ ಹೆಣ್ಣನ್ನು ಕುರಿತ ಕವಿಯ ಭಾವ ಗೌರವಾದರಗಳನ್ನು ಮೂಡಿಸುತ್ತದೆ.

ಉಮಾ v/s ರಮಾ ಕವಿತೆಯಲ್ಲಿ ಸಂಪ್ರದಾಯ ಮತ್ತು ಆಧುನಿಕತೆ ಎರಡರ ಪ್ರತೀಕವಾಗಿ ಬರುವ ಉಮಾ ಮತ್ತು ರಮಾ ಪಾತ್ರಗಳು ಹೆಣ್ಣಿನ ಅಂತರಂಗದ ವೇದನೆಯನ್ನು ನಿರೂಪಿಸುವ ಪಾತ್ರಗಳಾಗಿವೆ. ಕವಿತೆಯ ಸಾಲುಗಳಲ್ಲಿ ಸಂಪ್ರದಾಯ ಮೀರಿ ನಿಂತ ರಮಾ ಉಮಾಳ ದೃಷ್ಟಿಯಲ್ಲಿ ಹೇಗೆ ಕಾಣುತ್ತಾಳೆ. ರಮಾ ಬಗೆ ಉಮಾ ಯೋಚಿಸುವ ರೀತಿ ಅಂತಿಮವಾಗಿ ರಮಾಳಿಗೆ ಒದಗುವ ಸ್ಥಿತಿಯ ಬಗ್ಗೆ ರೋದಿಸುತ್ತದೆ ಆದರೆ ರಮಾಳ ಮುಂದೆ ಸವಾಲಾಗಿ ನಿಂತರೂ ಹೆಚ್ಚು ಕಾಲ ಉಳಿಯಲಾರದವಳಾಗುತ್ತಾಳೆ ಎಂಬುದನ್ನು

ಕನ್ನಡಿಯ ಮುಂದೆ ನಿಂತ ಉಮಾ
ಅವಳ ಮನಸ್ಸಿನ ತುಂಬ ರಮಾ
ಗೆಳತಿ ರಮಾ

"ಛೇ ಬ್ರಾಹ್ಮಣಳಾಗಿ ರಮಾ
ಹೀಗೆ ಮಾಡಬಹುದೆ?
ಯಾವನೋ ಶೂದ್ರನನ್ನು ಕಟ್ಟಿಕೊಂಡು ಓಡಬಹುದೇ?
ನಾನೊಮ್ಮೆ ಪ್ರೀತಿಸಿದ್ದು
ಆಯಂಟನಿಯ ಆಸೆಗಣ್ಣು
ಈಗ ನೆನಪಿಗೆ ಬಂದು ಕಾಡಬಹುದೇ?
ತನ್ನ ಮಗು ನಗೆ ಕಂಡ ಉಮಾ
ಅಲ್ಲಿ ಕಾಣಿಸಲಿಲ್ಲ ರಮಾ
" ಇಲ್ಲ ಕಣೆ ನಿನಗಿಲ್ಲ ಅಲ್ಲಿ ಜಾಗ
ನಿನಗೇಕೆ, ನನಗೂ ಇಲ್ಲ ಅಲ್ಲಿ ಭಾಗ
ಆ ನಗೆ ಬಹಳ ಕಾಲ ಉಳಿಯಲಾರದು ಕಣೆ
ತಾ ಬಂದ ದಾರಿ ಮತ್ತೆ ತುಳಿಯಲಾರದು
ಇನ್ನೊಮ್ಮೆ ನಮ್ಮ ಕಡೆ ಸುಳಿಯಲಾರದು
ಖಂಡಿತಾ ಸುಳಿಯಲಾರದು.

ಕ್ಯಾಮರಾ ಕಣ್ಣು ; ಪು ; ೧೧೮-೧೧೯

ಎನ್ನುವಲ್ಲಿ ಎರಡು ಪಾತ್ರಗಳ ಮೂಲಕ ಹೆಣ್ಣಿನ ಅಂತರಂಗವನ್ನು ಸರಳವಾದ ಭಾಷೆಯ ಮೂಲಕ ತೆರೆದಿಡುತ್ತಾರೆ. ಅದರಿಂದಾಗಿಯೇ ಈ ಪಾತ್ರಗಳು ಓದುಗರ ಮನಸ್ಸಿನಲ್ಲಿ ಉಳಿದು ಬಿಡುತ್ತಾರೆ.

ಬಿ.ಆರ್.ಲಕ್ಷ್ಮಣರಾವ್ ಅವರ ಕವಿತೆಗಳಲ್ಲಿ ತಿಳಿಯಾದ ಭಾಷೆ, ಸರಳವಾದ ಶೈಲಿ, ನೇರವಾಗಿ ವಿಚಾರ ಮಂಡಿಸುವಿಕೆ, ಲವಲವಿಕೆ, ತುಂಟತನ ಪ್ರಚೋದನಾತ್ಮಕವಾದ ಮಾತುಗಾರಿಕೆಯನ್ನು ಕಾಣಬಹುದು. ಹಾಗಾಗಿಯೇ ಅವರ ಕಾವ್ಯ ಮಧ್ಯಮ ವರ್ಗದ ಈ ಮಣ್ಣು, ಈ ಮಣ್ಣಿನ ಬದುಕಿನ ಬಗ್ಗೆ ಮಧ್ಯಮ ವರ್ಗದ ಜನರ ಮಾನಸಿಕ ತೃಪ್ತಿಗೆ, ವರ್ತಮಾನಕ್ಕೆ ವಾಸ್ತವತೆಗೆ ಹತ್ತಿರವಾದ ವಸ್ತು ವಿಷಯಗಳನ್ನು ಒಳಗೊಂಡಿರುತ್ತದೆ. ಲಕ್ಷ್ಮಣರಾವ್ ಅವರ ಬದುಕು, ಕಾವ್ಯದ ಬದುಕು ಒಂದೇ ತೆರನಾದುದು, ಭಿನ್ನವಾದುದಲ್ಲ, ತಮ್ಮ ಸ್ವಭಾವದಂತೆ ತಮಗೆ ಅನಿಸಿದ್ದನ್ನು ತಾವು ಕಂಡುದನ್ನು ಶೋಧಿಸಿ ಬರೆಯುತ್ತಾರೆ. ಅದರಿಂದಾಗಿಯೇ ಅವರ ಕಾವ್ಯಗಳಲ್ಲಿ ಜೀವಂತಿಕೆ ಲವಲವಿಕೆ, ಕನಸುಗಾರಿಕೆಯನ್ನು ಕಾಣಬಹುದು.

ಅವರಿಗೆ ಸಿದ್ಧಾಂತಗಳ ಬಗ್ಗೆ, ಕಾವ್ಯದ ಮೂಲಕ ಸಮಾಜ ಸುಧಾರಣೆ ಮೊದಲಾದ ಘೋಷಣೆಗಳ ಬಗ್ಗೆ ಅಸಕ್ತಿಯಿಲ್ಲ. ಕಾವ್ಯವನ್ನು ಕಾವ್ಯ ಸುಖಕ್ಕಾಗಿಯೇ ಬರೆದವರು ಅದನ್ನು ಅವರ ಕವಿತೆಯಲ್ಲಿ ನಾವು ಗುರುತಿಸಬಹುದು 'ನಾನು' ಕವಿತೆಯಲ್ಲಿ "ನಾನು ಕ್ರಮ ವಾಗಿ ಪಂಚೇಂದ್ರಿಯ ಹೃದಯ, ಮಿದುಳುಗಳ ದಾಸ, ಈ ವ್ಯಾಸದಲ್ಲೇ ನನ್ನ ಭಾರತ ಕುರುಕ್ಷೇತ್ರ ಕರ್ಮಯೋಗ, ವಿಶ್ವರೂಪ ದರ್ಶನಮುಕ್ತ ಎನ್ನುವ ಮೂಲಕ ಇಹದ ಮೂಲಕವೇ ಬದುಕಿನಲ್ಲಿ ಸಾಕ್ಷಾತ್ಕಾರ ಪಡೆಯಲು ಯತ್ನಿಸುತ್ತಾರೆ. ಅದೇ ರೀತಿಯಲ್ಲಿ 'ಸಾಕು' ಕವಿತೆಯ ಭಾವ ಕವಿಯ ಮನದಾಳದ ಮಾತಾಗಿದೆ. ಅಗೆದದ್ದು ಬಗೆದದ್ದು ಬಾಳನ್ನು ಸಿಗಿದದ್ದು ಶೂನ್ಯವನ್ನು ಜಗಿದದ್ದು ಸಾಕು, ಜಿಟ್ಟಿದ್ದು, ಹೊಸೆದೆಂದು ಕೊಚ್ಚಿದ್ದು ಎಲ್ಲರನ್ನು ಚುಚ್ಚಿದ್ದು ಸಾಕು, ಎನ್ನುತ್ತಾ ಬಾರೇ ಬಾ. ಶಕುಂತಲೆ ಶಾಪ ಕಳೆದಿದೆ, ಮತ್ತು ನೆನಪು ಹೊಳೆದಿವೆ. ಭರತನನ್ನು ಇತ್ತ ತಾ ಪ್ರೀತಿಯಿಂದ ಮುತ್ತು ಕೊಡುತ್ತೇನೆ ಗಳಗಳ ಅತ್ತು ಬಿಡುತ್ತೇನೆ. ನಿನ್ನನ್ನು ಬಿಗಿಯಾಗಿ ಅಪ್ಪಿಕೊಳ್ಳುತ್ತೇನೆ ಬಾಳನ್ನು ಇಡಿಯಾಗಿ ಒಪ್ಪಿಕೊಳ್ಳುತ್ತೇನೆ." ಎನ್ನುವಲ್ಲಿ ಕವಿಗೆ ಇರುವ ಬಾಳಿನ ಬಗೆಗಿನ ಅದಮ್ಯ ಪ್ರೀತಿಯು ಸ್ಪಷ್ಟವಾಗುತ್ತದೆ. ರುಚಿ ಕವಿತೆಯಲ್ಲಿ ಅವರು ಹೇಳುವುದು ಹಣ್ಣನ್ನು ಬೇರೆ ಯಾವ್ಯಾವುದೋ ಉದ್ದೇಶಕ್ಕೆಂದು ತಿನ್ನುವ ಬದಲು ರುಚಿಗಾಗಿಯೇ ತಿನ್ನುವುದು ಮುಖ್ಯ ಎನ್ನುವಲ್ಲಿ ಕಾವ್ಯ ಕಾವ್ಯದ ಸುಖಕ್ಕಾಗಿಯೇ ಎನ್ನುವ ಅಂಶ ಸ್ಪಷ್ಟವಾಗುತ್ತದೆ.

ಕರಬೂಜದಲ್ಲಿದೆ ಕಾರ್ಬೋಹೈಡ್ರೇಟು
ಸೇಬು ತಿಂದರೆ ನಿರೋಗ
ಅದು ಸರಿ ಕೇವಲ ರುಚಿಗೆಂದೇ

ಹಣ್ಣು ಸವಿಯುವುದು ಯಾವಾಗ ? ಎನ್ನುವಲ್ಲಿ ಅವರ ಕಾವ್ಯನಂದದ ಬಗೆಗಿನ ನಿಲುವು ವ್ಯಕ್ತವಾಗಿವೆ.

ಬಿ.ಆರ್.ಲಕ್ಷ್ಮಣರಾವ್ ಅವರು ಶ್ರೇಷ್ಠತೆ ಗಾಂಭೀರ್ಯ ಶಿಷ್ಟತೆ ಮಹತ್ವಾಕಾಂಕ್ಷೆ ಮುಂತಾದ ವಿಷಯಗಳ ಬಗ್ಗೆ ಚಿಂತಿಸದೆ ನವ್ಯ ಕಾವ್ಯದ ಹಿಂದಿನ ಕನ್ನಡ ಕಾವ್ಯ ಪರಂಪರೆಯ ಅರಿವಿನಿಂದ ಸದ್ಯಕ್ಕೆ ಹತ್ತಿರವಾಗಿದ್ದು ಅವರ ಮನೋಭಾವಕ್ಕೆ ಭಿನ್ನವಾದ ನವ್ಯದ ಭೂಮಿಕೆಯಲ್ಲಿ ಕವಿತೆ ರಚಿಸಿದವರು, ಕಚಗುಳಿಯಿಡುವಂತೆ, ಪ್ರಣಯದ ಮಧುರ ನೋವು ಕಾಮದ ಕಂಪು ತುಂಟತನವನ್ನು ಸೇರಿಸಿ ಕಾವ್ಯ ರಚಿಸಿದರು. ಸಾಮಾಜಿಕ ವಿಷಯಕ್ಕೆ ಬಂದಾಗ ವ್ಯಂಗ್ಯ ವಿಷಾದ ವಿಡಂಬನೆ ವಕ್ರೋಕ್ತಿಗಳ ಮೂಲಕ ತಮ್ಮ ಅನುಭವಕ್ಕೆ ಬಂದುದನ್ನು ತಾವು ಅನುಭವಿಸಿದಂತೆ ತನ್ನ ಕಾವ್ಯವೆಂಬ ಧೋರಣೆಯಲ್ಲೆ ಕವಿತೆ ರಚಿಸಿ, 'ಪ್ರಿಯ ಅಮೃತಕ್ಕೆ ಹಾರುವ ಗರುಡ ಬೇಂದ್ರೆ, ಅಡಿಗ ನಾನೋ ನಿನ್ನಂಥ ಸುಂದರ ಪುಷ್ಪಕ್ಕೆ ಹಾರುವ ಚಿಟ್ಟೆ' ಎನ್ನುವ ಮೂಲಕ ಕವಿ ತಾನೇನು ತನ್ನ ಕಾವ್ಯ ಅದೇ ಎನ್ನುವುದನ್ನು ತಿಳಿಸುತ್ತಾರೆ.

ಲಿಲ್ಲಿ ಪುಟ್ಟಿಯ ಹಂಬಲ ಕವನ ಬದುಕಿನ ಅಧಮ್ಯಶಕ್ತಿಯಾದ ಯಾವ ಕಾಮದ ತೀವ್ರತೆಯ ಅಭಿವ್ಯಕ್ತಿಯಾಗಿದೆ. ಲಿಲ್ಲಿ ಪುಟ್ಟಿಯ ಹಂಬಲ ತಿಳಿಸುವ ಅವಳ ಮಾತುಗಳು

ಚಂದ್ರಲೋಕದಿಂದ ಇಳಿದು ಬಂದ ಶ್ವೇತ ಸುಂದರ
ಪರ್ವತಾಕಾರ,ಕೊಲೆಯಿಂದ ಹೊಲೆಯಾಗಿ ಈ ಪಾಳು ದೇಗುಲದಲ್ಲಿ
ನಿನ್ನ ಪ್ರತಿಷ್ಠಾಪಿಸಿದರಲ್ಲಿ ನನ್ನವರೆಲ್ಲ
ಅಂದೆ, ನಾನಿನ್ನ ಮೊಟ್ಟ ಮೊದಲ ಬಾರಿ ಕಂಡ ದಿನದಿಂದಲೇ
ನೀನು ನನ್ನ ಕಾಮದೇವನಾದೆ
  ಒಂದೊಂದೆ, ಗಲಿವರೆ ನಾವಾಡಿದ ಆಟ
ಒಂದೊಂದೆ ನಮ್ಮ ಭೇದ?
ಎಂಥ ಮೋಜು ನಿನಗೆ
ಹಾಲುತುಂಬಿದ ನಿನ್ನ ಬಟ್ಟ ಲಿಲ್ಲಿ
ನಾ ಬತ್ತಲೆ
ಎಂಥ ಖುಷಿ ನನಗೆ
ನನ್ನ ತೆರೆದ ಮೈ ಮೈದಾನದಲ್ಲಿ
ಮಕಮಲ್ಲಿಕುರುಚಲು ಹುಲ್ಲುಗಾವಲಿನಲ್ಲಿ
ಜಿಗಿಯುತ್ತ ಓಡಿದರೇ – ಎನ್ನುವ

ಲಿಲ್ಲಿ ಪುಟ್ಟಿಯ ಮಾತುಗಳಲ್ಲಿನ ಆತ್ಮೀಯ ಕಾಮದ ಆರ್ತತೆಯ ಸುಮಧುರ ಪ್ರತಿಮೆಗಳು ಕವನದ ಸಾಲುಗಳಲ್ಲಿ ಕಾಣುತ್ತ ಪೋಲಿತನದೊಂದಿಗೆ ಕಾಮದ ತೀವ್ರತೆಯು ವ್ಯಕ್ತವಾಗುತ್ತದೆ. ಆಕೆ ಕಾಣುವ ಕನಸು ನಿನ್ನ ರಾತ್ರಿ ಎಂಥ ಸುಂದರ ಕನಸು

ನಾನು ಮೈಮಿಡೀ ಯೋನಿಯಾಗಿ
ನಿನ್ನ ಒಳಗೊಂಡ ಹಾಗೆ ತಳಕಂಡ ಹಾಗೆ

ಎನ್ನುವಲ್ಲಿ ಕಾಮದ ಮುಕ್ತತೆ ಅನಂತರದ ಅವಳ ಸ್ಥಿತಿ ಅಸಹ್ಯದೊಂದಿಗೆ ಅಪ್ತವಾದ ಅನುಭವವನ್ನು ಓದುಗನಿಗೆ ನೀಡುವ ಮೂಲಕ ಕವಿತೆ ಹತ್ತಿರವಾಗುತ್ತದೆ. ವೈಚಾರಿಕತೆ ಮತ್ತು ಬಾವುಕತೆಗಳ ಸಮನ್ವಯತೆಯನ್ನು ಗೋಪಿ ಮತ್ತು ಗಂಡಲೀನ ಟುವಟಾರ ಸಂಕಲನದ ಕವಿತೆಗಳು ತರುತ್ತಾರೆ. ಪುಲಕ ನಗೆಯ ಮೂಲಕ ಕವಿತೆ ರಚಿಸಿದರು. ಬದುಕಿನ ಎಲ್ಲ ಮಜಲುಗಳನ್ನು ತಾಕುವ ಅನುಭವಿಸುವ ಕಾತರವಿದೆ. ಕಾಮ, ಪ್ರೀತಿಯ ಸುಖ, ಗೆಳೆತನದ ಸಂಭ್ರಮ, ದಾಂಪತ್ಯದ ಸರಸ, ಆಪ್ತತೆ ಇವುಗಳನ್ನು ಅವರ ಕವಿತೆಗಳು ಒಳಗೊಂಡಿವೆ, ಅವರ ಕಾವ್ಯ ಪ್ರಪಂಚದಲ್ಲಿ ಪ್ರೀತಿ, ವಿನಯ ಸೌಜನ್ಯ, ಹೃದಯವಂತಿಕೆ, ಅನುಭವ ವೇದ್ಯವಾದ

ಭಾವನೆಗಳೇ ಉತ್ಕೃಷ್ಟ ಮೌಲ್ಯಗಳಾಗಿ ಕಂಡುಬರುತ್ತವೆ. ಇವುಗಳೇ ಮನುಷ್ಯ ಸಾಧಿಸಬಹುದಾದ ಮೌಲ್ಯಗಳು ಎನ್ನುತ್ತಾರೆ. ಲಕ್ಷ್ಮಣರಾವ್ ಅವರಿಗೆ ಜೀವನದ ನೋವು ನಲಿವುಗಳು ಮುಖ್ಯವೇ ಹೊರತು ಬೇರಾವುದಲ್ಲ. ಇವುಗಳನ್ನು ತೀರಾ ಸರಳವೆಂಬಂತೆ ಚಿತ್ರಿಸುತ್ತಾರೆ. ದೈಹಿಕ ಆಕರ್ಷಣೆಗಳಿಗೆ ಮತ್ತೆ ಮತ್ತೆ ಒಳಗಾಗುವ ಚಂಚಲಗಳಿಗೆ ಸಹೃದಯತೆ, ಸಂಯಮ, ಸಹಾನುಭೂತಿಯಿಂದ ಉತ್ತರಿಸುತ್ತಾರೆ. ಲಕ್ಷ್ಮಣರಾವ್ ಅವರ ಕವಿತೆಗಳು ಭಾಷೆಯ ಸರಳತೆಯಿಂದಲೇ, ಸುಲಭವಾದ ಸರಳ ಶೈಲಿಯಿಂದಲೇ ಎಲ್ಲರ ಮನೆಯ ಮತ್ತು ಮನಸ್ಸಿನ ಕವಿತೆಗಳಾಗಿವೆ ಎಂದು ಹೇಳಬಹುದು.

'ಕವಿತೆ' ಕವನದಲ್ಲಿ ಕವಿ ಬಸ್ಸಿನಲ್ಲಿ ಕೂತು ಬೆಂಗಳೂರಿಗೆ ಹೋಗುತ್ತಿದ್ದ. ಒಂದು ಬೆಳಗ್ಗೆ ಸುಂದರ ಮುಸ್ಲಿಂ ಯುವತಿಯು ಬಸ್ಸಿನಲ್ಲೂ ಪ್ರಯಾಣಿಸುವಾಗ ಅವಳ ಸಹಜ ಸೌಂದರ್ಯ ತಮ್ಮನ್ನು ಸೂಜಿಗಲ್ಲಿನಂತೆ ಸೆಳೆವಾಗ ಕವಿಗೆ

"ಎಲ್ಲಾ ಮಡಿವಂತಿಕೆಗಳನ್ನು ಮೀರಿ ಅಥವಾ ಮರೆತು ಅವಳ ಕಡೆಯೇ ನೋಡುತ್ತಾ ಕುಳಿತು ಬಿಟ್ಟು ನನಗೆ, ಅಂಥ ಚೆಲುವು ತಾನಾಗಿ ಕಣ್ಣ ಮುಂದೆ ಒದಗಿ ಬಂದಾಗ ನೋಡದೆ, ಬಿಗುಮಾನದಿಂದ ಮುಖ ಹೊರಳಿಸಿ ಕೂಡುವುದು ಹೀನ ಅಪರಾಧ ಅನಿಸಿತು, ಅವಳ ಸೌಂದರ್ಯವನ್ನು ಸವಿಯುತ್ತಾ ನೋಡುತ್ತಾ ಇದೇ ಕವಿಗೆ ಮನಸ್ಸು ಉದ್ವಿಗ್ನತೆಯಿಂದ ದೂರಾಗಿ ತಿಳಿಯಾಗಿ ಖುಷಿಯಿಂದ ತನ್ನ ಪುಟ್ಟ ಮಗನಿಗೆ ಮುತ್ತು ಕೊಟ್ಟು ಹೆಂಡತಿಯೊಂದಿಗೆ ನಗುನಗುತ್ತಾ ಮಾತನಾಡಿದೆ" ಎನ್ನುವಲ್ಲಿ ಕವಿ ಯಾವ ಮುಚ್ಚು ಮರೆಯೂ ಇಲ್ಲದೆ ಸರಳವಾದ ಮಾತುಗಳಲ್ಲಿ ತನ್ನ ಮನಸ್ಸು ತೆರೆದಿಡುವ ಈ ಭಾವವೇ ಎಲ್ಲರ ಮೆಚ್ಚುಗೆಗೆ ಕಾರಣವಾಗಿದೆ ಎನ್ನಬಹುದು.

ದಾಂಪತ್ಯದ ಸರಸದೊಂದಿಗೆ ವಾಸ್ತವವನ್ನು ತೆರೆದಿಡುವ 'ವಿರಸ' ಕವಿತೆಯಲ್ಲಿ ಕವಿ ತನ್ನ ಹೆಂಡತಿಗೆ "ಬೇಡಕಣೆ ಎಷ್ಟಾದರೂ ನೀನು ಹೆಣ್ಣು' ಎಂದು ಸಾರಿ ಸಾರಿ ಹೇಳಿದೆ.

ನನ್ನ ಧರ್ಮ ಪತ್ನಿಗೆ ಕೇಳಲಿಲ್ಲ ನನ್ನ ಹೃದಯದ ಕಪಾಟುಗಳಲ್ಲಿ ತನ್ನ ಕೈ ತುರುಚಿ ನನ್ನಂತರಂಗದ ಆಪ್ತ ನೆನಪುಗಳನ್ನು ವಿಕೃತ ಕಾಮನೆ ಸುಪ್ತ ಕನಸುಗಳ ಮುನ್ನುಡಿ, ಹಿನ್ನುಡಿ, ಅಡಿ ಟಿಪ್ಪಣಿಗಳೊಂದಿಗೆ ಗುಪ್ತವಾಗಿ ಸಂಗ್ರಹಿಸಿಟ್ಟು ನನ್ನ ಖಾಸಗಿ ಸಂಕಲನಗಳನ್ನು ದರದರ ಹಿಡಿದೆಳೆದು.

ಪುಟಪುಟಗಳ ಮೇಲೂ
ಸರಸರ ಕಣ್ಣಾಡಿಸಿ
ಕಣ್ಣೇರಿಟ್ಟು
ಪರಿಪರ ಹರಿದು ಹಿಚುಕಿ ಉಂಡೆ ಮಾಡಿ

ತನ್ನ ಸ್ತ್ರೀ ಸಹಜ ಈರ್ಷ್ಯೆಯಲಿ

ಧಗಧಗ ಉರಿಸಿ

ಬೂದಿಯನ್ನು ಮೈಗೆಲ್ಲ ಬಳಿದುಕೊಂಡು

ಈ ಉದ್ದ ಆ ಉದ್ದ ಮಲಗಿದ್ದಾಳೆ

ಆ ಮಗ್ಗುಲು

ನಾನು, ತೆಪ್ಪನೆ ಮುದುಡಿಕೊಂಡು

ಈ ಮಗ್ಗುಲು.

ಎನ್ನುವ ಮೂಲಕ ದಾಂಪತ್ಯದ ವಿರಸದ ಎಳೆಯನ್ನು ಸ್ತ್ರಿ ಸಹಜ ಈರ್ಷ್ಯೆಯನ್ನು ಹಾಸ್ಯದ ಮೂಲಕ ಗಂಭೀರವಾದ ನೆಲೆಯಲ್ಲಿ ಚಿತ್ರಿಸುವ ಕವಿತೆಯ ಭಾವ ಎಲ್ಲರಿಗೂ ಆಪ್ತವೆನಿಸುತ್ತದೆ.

'ದಯವಿಟ್ಟು' ಕವಿತೆಯಲ್ಲಿ ಪ್ರೇಮದ ಸುಖ, ಪ್ರೇಮಿಯ ನೆನಪುಗಳು ಕಾಡಬೇಕು, ಆದರೆ ಅದು ಹೆಂಡತಿಯೊಡನಿದ್ದಾಗ ಬರಬಾರದು ಎಂಬುವನ್ನು ಹೇಳುವಲ್ಲಿ, "ಹಕ್ಕಿಗಳೆಲ್ಲ ಮರದಿಂದ ಹಾರಿ ಹೋದವು ನಾನು ಪ್ರೇಮಿಸಿದ ಹುಡುಗಿಯರಿಗೆಲ್ಲ ಮದುವೆಯಾಯಿತು ಈಗ ನನಗೂ ಮದುವೆಯಾಗಿದೆ. ಆದ್ದರಿಂದ ಅವರೆಲ್ಲ ಸುಖವಾಗಿರಲಿ.

ಬರಲಿ ಬೇಕಾದರೆ

ಸಂಜೆಗೆ

ನನ್ನ ಹೃದಯದ ತಮ್ಮ ತಮ್ಮ ಗೂಡುಗಳಿಗೆ

ಅಂಗರಂಗದ ಖಾಸಗಿ ಕತ್ತಲೆಗೆ

ನಿರ್ಬಿಢೆಯ ನಿರಾತಂಕ ಬೆತ್ತಲೆಗೆ

ಗೂಡುಗಳ ಮೇಲೆ

ಕಾವು ಕೊಡಲಿ,

ಮರಿ ಮಾಡಲಿ.

ಗುಟುಕು ನೀಡಲಿ

ಜೋಗಳು ಹಾಡಲಿ ಎಂದೆಲ್ಲ ಸಹಾನುಭೂತಿಯಿಂದ ಹೇಳುವ ಕವಿಗೆ ನನ್ನ ಹೆಂಡತಿಯೊಂದಿಗೆ ನಾನು ಏಕಾಂತದಲ್ಲಿರುವಾಗ ನೆನಪಿನ ಕದ ತಟ್ಟಿ ಕರೆಯುವುದು ಬೇಡ" ಎನ್ನುತ್ತಾರೆ ಏಕೆಂದರೆ ಎಷ್ಟಾದರೂ ನನ್ನ ಹೆಂಡತಿಯೂ

ಒಂದು ಹೆಣ್ಣು

ಅವಳಿಗೆ ನನ್ನಂತರಂಗದ ಒಂದೊಂದೂ ಬೇರಿನ ಮೇಲೆ

ಅವುಗಳಿಗೆ ಒದಗಿ ಬರುವ

ಗುಪ್ತ ಗಾಮಿನಿಯರ

ಚೈತನ್ಯದ ನೀರಿನ ಮೇಲೆ

ಸದಾ ಕಣ್ಣು, ಎಂದು ಹೇಳುತ್ತಾರೆ. ಪ್ರೀತಿಯ ಒತವನ್ನು ಕಾಯ್ದುಕೊಂಡರೂ ದಾಂಪತ್ಯದ ಬದುಕಿನ ಅರ್ಥ ಕಳೆದುಕೊಳ್ಳದ ಅವರ ಭಾವ ಮೆಚ್ಚುವಂತಾಗುತ್ತದೆ.

ಗೆಳೆತನದ ಸಂಭ್ರಮ, ಗೆಳೆಯರ ಅವಶ್ಯಕತೆ, ಬಾಳಿಗೆ ಗೆಳೆತನದ ಅನಿವಾರ್ಯತೆಯನ್ನು 'ಗೆಳೆಯರು' ಕವಿತೆಯ ಮೂಲಕ ಹೀಗೆ ಹೇಳುತ್ತಾರೆ.

ಬಾಳ ಬಲೂನಿನ ತುಂಬಾ

ಶೂನ್ಯವ ಜಲಜನಕ ಬುರಬುರ ತುಂಬಿ

ನಾ ಗಾಳಿಗೆ ಬಿಟ್ಟಾಗ

ಅದನ್ನು ಭೂಗೋಳಕ್ಕೆ ಜಗಿದು ಕಟ್ಟುವ ಹಾರ;

ನನ್ನ ಗೆಳೆಯರು

ಗೆಳೆಯರಿರಲಯ್ಯ ಕೊನೆ ತನಕ

ಎನ್ನುತ್ತೇನೆ;

ಯಾಕಲ್ಲದಿದ್ದರೂ

ಹಕ್ಕಿ ಹಾರಿಸಲಿಕ್ಕೆ,

ಹಾರಿಸಿ ಗುಂಡಿಟ್ಟು ಕೊಲ್ಲಲಿಕ್ಕೆ;

ಅಂದರೆ ಗುಂಪಿಗೆ, ತಿಂಡಿಗೆ, ಪುಂಡಾಟಕ್ಕೆ

ಭಗವದ್ಗೀತೆಗೆ;

ಮಾತಿಗೆ

ಇರವಿನ ಸಾಭೀತಿಗೆ,

ಗೆಳೆಯರಿರಬೇಕೆಂಬುದರ ಮೂಲಕ ಗೆಳೆತನದ ಸಂಭ್ರಮವನ್ನು ವ್ಯಕ್ತಪಡಿಸುವುದು ಮನಸ್ಸಿಗೆ ಆತ್ಮೀಯವಾಗುತ್ತದೆಂದು ಹೇಳಬಹುದು.

ಪ್ರೇಮದ ಬಗ್ಗೆ ಕವಿಯ ಭಾವನೆಯನ್ನು ತನ್ನಿ ಪ್ರೇಮ ಶುದ್ಧವಲ್ಲ ಎಂಬುದನನು ಮನಬಿಚ್ಚಿ ಹೇಳುವ ಕವಿಯ ಮಾತುಗಳು "ಪ್ರೇಮಗೀಮ" ಕವಿತೆಯ ಸಾಲುಗಳಲ್ಲಿ

"ಹುಡುಗಿ ಮುದ್ದು ಮುದ್ದಾಗಿ

ಕ್ಲೀಷೆ ತುಂಬಿದ ಭಾಷೆಯಲ್ಲಿ

ಪ್ರೇಮ-ಗೀಮ ಮದುವೆ ಗಿದುವೆ ಇತ್ಯಾದಿ

ಪೆದ್ದು ಪ್ರಶ್ನೆಗಳನ್ನು ಗುದ್ದಬೇಡ

ವೃಥಾಸದ್ದು ಬೇಡ,

ನಾನು ಟಂಕಸಾಲೆಯಿಂದ

ಪೊಳ್ಳು ಹಾವಗಳನ್ನು, ಭಾವಗಳನ್ನು, ನೋವುಗಳನ್ನು

ಯಾವುಗಳನ್ನು

ಚಕ್ಕಚಕ್ಕನೆ ಅಚ್ಚು ಹಾಕಿ

ಚಲಾವಣೆಗೆ ತರಲಾರೆ

ಇದೋ-ಒಪ್ಪಿಕೊಂಡೆ ; ನನ್ನದಲ್ಲ ಶುದ್ಧ ಪ್ರೇಮ ಹಾದಿ ಎಂದು ಸುಲಭವಾಗಿ ಒಪ್ಪಿಕೊಳ್ಳುತ್ತಾರೆ. ಅದಕ್ಕಾಗಿ ಅವರು ನೀಡುವ ಸಮರ್ಥನೆ, ವಾಸ್ತವದ ಸತ್ಯವನ್ನು ತೆರೆದಿಡುವ, ಅವರ ನಿರ್ಭಿಢೆಯಿಂದ ಕೂಡಿದ ಸರಳ ಸಾಮಾನ್ಯ ಮಾತುಗಳು, ಚಂಚಲ ಮನಸ್ಸನ್ನು ಪ್ರಾಮಾಣಿಕವಾಗಿ ತೆರೆದಿಟ್ಟು ಬಿಡುತ್ತಾರೆ. ತನ್ನೊಳಗಿದನ್ನು ನಿರಾಂತಕವಾಗಿ ಹೇಳಬಿಡುವ ಸರಳ ಸಾಮಾನ್ಯ ಭಾಷಾ ಶೈಲಿ ಮೆಚ್ಚುಗೆಗೆ ಪಾತ್ರವಾಗುತ್ತದೆ, ಕವಿ ತಮ್ಮ ಭಾವನೆಗಳನ್ನು ಭಾಷೆಯ ಮೂಲಕ ಆಪ್ತವಾಗಿಸುವ ರೀತಿ ಪ್ರಮುಖವೆನಿಸುತ್ತದೆ.

ಜಿ.ಆರ್.ಲಕ್ಷ್ಮಣರಾವ್ ಅವರ ಕವಿತೆಗಳಲ್ಲಿ ಮಾನವ ಎಷ್ಟು ಎತ್ತರಕ್ಕೆರಿದರೂ ಪ್ರೀತಿಯ ಸೆಲೆ ಅಗತ್ಯವೆಂಬುದನ್ನು 'ಅಮ್ಮ' ಕವಿತೆಯಲ್ಲಿ ನಿರೂಪಿಸುತ್ತಾರೆ. ಅವರ ಕವಿತೆಗಳಲ್ಲಿ ಕಟು ವಾಸ್ತವದ ಅರಿವು ಇರುತ್ತವೆ. ಮೇಲು ನೋಟಕ್ಕೆ ಹಾಸ್ಯ ತುಂಟತನ ಕಾಣಿಸಿದರೂ ಹಿಂದೆ ಗಾಢವಾದ ನೋವು ವಿಷಾದವಿರುತ್ತವೆ ಅವರ ಕವಿತೆಗಳ ಮೂಲಕ ವ್ಯಕ್ತವಾಗುವ ಜೀವನ ದೃಷ್ಟಿ ಪ್ರಮುಖವಾದುದು ಅದರಲ್ಲಿ ಒಬ್ಬ ಹೊಸ ಕಾಲದ ತರುಣನಿರುತ್ತಾನೆ. ಆತ ಮಧ್ಯಮವರ್ಗಕ್ಕೆ ಸೇರಿದವನು ಈತನಿಗೆ ಸಂಪ್ರದಾಯ ಕಂದಾಚಾರಿಗಳ ಬಗ್ಗೆ ಬೇಸರವಿದೆ ಆದರೆ ಅದನ್ನು ಪ್ರತಿಭಟಿಸುವ ಬಂಡಾಯಗಾರನಲ್ಲಿ ಆದರೆ ಬದಲಾವಣೆ ಬಯಸುತ್ತಾನೆ. ಜೀವನದ ಪ್ರಮುಖ ಘಟ್ಟಗಳಲ್ಲಿ ವ್ಯವಸ್ಥೆಯ ಹಿಡಿತಕ್ಕೆ ಒಳಪಟ್ಟು ರಾಜಿಯಾಗಿ ಬಿಡುತ್ತಾನೆ. ಮಾನವೀಯ ಮೌಲ್ಯಗಳನ್ನು ಒಪ್ಪಿಕೊಳ್ಳುವವನು, ಸಂಪ್ರದಾಯ ಮೀರುವಾಗಲು ಸಭ್ಯತೆ ಉಳಿಸಿಕೊಂಡವನು ಸಾಮಾಜಿ ಬದಲಾವಣೆಯ ಕನಸು ಕಾಣುವವನು ಆ ಕನಸು ನನಸಾಗುತ್ತವೆಂದು ಬಲವಾಗಿ ನಂಬಿದವನು ಅದಕ್ಕಾಗಿ ಆ ಹೋರಾಟದ ದಾರಿ ತುಳಿಯದವನು. ಸಭ್ಯತೆ, ಸಂಯಮದ ಮೂಲಕ ಜೀವನ ಪ್ರೀತಿಯನ್ನು ಅನುಭವಿಸುತ್ತ ಬದಲಾವಣೆಗೆ ತೆರೆದುಕೊಳ್ಳುವ ಮನಸ್ಸಿರುತ್ತದೆ. ಈ ಅಂಶವು ಕೂಡ ಅವರ ಜನಪ್ರಿಯತೆಗೆ ಕಾರಣವಾಗಿದೆ ಎಂದು ಗುರುತಿಸಬಹುದು.

'ಅಪ್ಪ' ಕವಿತಯಲ್ಲಿ ಕವಿ ಹೇಳುವಂತೆ

ಹೊರಗೆ ನುಣುಚಿಕೊಂಡ ನನಗೆ

ಅಪ್ಪ ಕಾಣುವುದು ಹೀಗೆ;

ತಲತಲಾಂತರದ ಆಸ್ತಿಯ ಮೇಲಿವೆ
ಅಪ್ಪನ ಸುಭದ್ರ ಅಸ್ತಿವಾರ
ಕುಡಿಕೆ ಹಣವುಂಟೆಂದು
ಕೂತು ಉಂಡವರೇ ಹೆಚ್ಚು
ನನಗಿಂದು ಆಸ್ತಿಯು ಅಲ್ಲ, ಅಸ್ತಿವಾರವು ಅಲ್ಲ.
ಈ ಜಗತ್ತಿನ ಗತ್ತಿಗೆ ಅಪ್ಪನ ದಾರಿಯೇ ಸರಿಯಿರಬಹುದು
ನನ್ನ ದಾರಿ ಬೇರೆ ಅಷ್ಟೆ
ಆದರೂ ಅಪ್ಪನಾಗಿಯೂ ಅಪ್ಪನೆನಿಸದ
ಅಪ್ಪನನ್ನು ಕಂಡಾಗ
ಈ ಭಂಡ ಬ್ರಹ್ಮಾಂಡದಲ್ಲಿ
ಮೊಂಡು ಹಿಡಿದಾದರೂ
ಅಪ್ಪನನ್ನು ಹುಡುಕಬೇಕೆನ್ನಿಸುತ್ತೆ.

ಎನ್ನುವಲ್ಲಿ ಕವಿಯ ಮನದಾಳದ ಕುದಿತವೇನು ಎಂಬುದನ್ನು ಅಪ್ಪನ ಗುಣದ ಮೂಲಕ ತನವೇನು ಎಂಬುದನ್ನು ಸ್ಪಷ್ಟಪಡಿಸುವ ಕವಿತೆ ನಮ್ಮನ್ನು ತನ್ನತ್ತ ಸೆಳೆಯುತ್ತದೆ.

'ವಿಜ್ಞಾನಿ' ಕವಿತೆಯಲ್ಲಿ ಬಾಳೆಗೊನೆಯಂತಿದ್ದ ನಮ್ಮ ಮನೆಯ ಹಿತ್ತಲಲ್ಲಿ ಎಂಥದೋ ಪುಟ್ಟ ಗಿಡ ಮೈ ತಿಳಿದು ಜಿರಜಿರನೆ ಬೆಳೆದು ಕೋರಿದ ವರಕೊಡುವ ಭಾರಿ ಮರವಾಯಿತು ದಿನದಿನಕ್ಕೆ ಹರಿವಾಯಿತು. ಅದಕ್ಕೆ ಎಲ್ಲರೂ ಮಾಡುವ ಪೂಜೆ, ಪುರಸ್ಕಾರ ಮಕ್ಕಳಿಗಾಗಿ ಜೋಗುಳ, ಸೋಮಾರಿಗಳಾಗಿ ಮಲಗಲು, ಕೊಂಬೆ ತುದಿಗೇರಿ, ಗಗನ ಮುಟ್ಟಿ ಚಂದ್ರನ ಬಟ್ಟೆ ಒದ್ದದ್ದು "ಹಠಾತ್ತನೆ ಒಂದು ದಿನ ಮನೆಯ ಗೋಡೆಗಳೆಲ್ಲಾ ಪರ ಪರ ಬಿರಿದು ಮೇಲ್ಛಾವಣಿಯಿಂದ ತೊಸ ತೊಸ ಮಣ್ಣು ಕುಸಿಯಿತು.

ಆ ಮರ ಮಣ್ಣಿನಾಳದಲ್ಲಿ ತನ್ನ ಸಹಸ್ರಾರು ಕೈಗಳನ್ನು ಅಂಚು ಅಂಚಿಗೆ ಬಾಚಿ ಆಧಾರವನ್ನು ಹೀರಿ ಅಲುಗಾಡಿಸಿದಾಗ ಆ ರಾಕ್ಷಸ ಮರ ಕಡಿಯಲು ಆಯುಧವಿಲ್ಲ, ಅದಕ್ಕೆ ಸಾವಿಲ್ಲ ಹಾಳಾಗಲೆಂದರೆ ಬೇರೆ ನೆಲೆಸಲು ನಮಗೆಲ್ಲಾ ತಾವಿಲ್ಲ, ಇಲ್ಲೇ ಇದ್ದರೆ ಯಾವ ಕ್ಷಣವೂ ನಾವು ಇಲ್ಲ, ನೀವು ಇಲ್ಲ ಆದ್ದರಿಂದ ಈಗೇನು ಮಾಡೋಣ? ಗಪಗಪ ಬಾಳು ಮುಕ್ಕೋಣ, ಎನ್ನುವಲ್ಲಿ ಕವಿಯು ಸನಾತನ ಸಂಪ್ರದಾಯಗಳ ರೂಪದಂತಿರುವ ಮರ ಬೆಳೆದು ಹೆಮ್ಮರವಾಗಿ ತಮ್ಮ ನೆಲೆಯನ್ನು ಅಲ್ಲಾಡಿಸುವಂತಾದಾಗಲೂ ಅದನ್ನು ನಾಶಪಡಿಸುವ ಆಯುಧವಿಲ್ಲ ಎಂದು ಕೈ ಚೆಲ್ಲುವುದು ಕೊನೆಗೆ 'ಬಾಳನ್ನು ಮುಕ್ಕೋಣ' ಎನ್ನುವಲ್ಲಿ ಬದುಕು ಸಾಗಿಸುವುದಲ್ಲ, ಮುಕ್ಕುವುದು ಎಂಬ ಮಾತು ವಿಶಿಷ್ಟತೆಯಿಂದ ಕೂಡಿ, ಗಂಭೀರ ಚಿಂತನೆಗೆ ದಾರಿಮಾಡುತ್ತದೆ.

'ಸಖೀಗೀತ' ಕವಿತೆಯಲ್ಲಿ ಅಪ್ಪನ ಹೊನ್ನ ಕನ್ನಡಕದ ಕಣ್ಣಿಗೆ ಕುರೂಪಿಯಾಗಿ ಕಂಡ ನನ್ನ ಬಡ ಹೆಣ್ಣು ಶಕೂ ನನಗೇ ನೀನೆ ಬೇಕು ಎಂದು ಕೊಂಡರೂ ಅಪ್ಪ ಆ ಹುಡುಗಿಯನ್ನು ನನಗೆ ಕೊಟ್ಟರೆ ನಿನ್ನ ಹೇಣ ಭಾರದ ಹೊರೆ. ನಿನ್ನ ಪರಂಪರೆ ನಾನು ಹೊರಲು ನಿಮ್ಮ ವಿರುದ್ಧವಿಲ್ಲದೆ ನಿನ್ನೆಲ್ಲ ನಿಯಮಗಳಿಗೂ ನಾನು ಬದ್ಧ ಎಂದು ಕೊಂಡರೂ. ಕೂಡ ಅಂತಿಮವಾಗಿ ಅಪ್ಪ, ಅಮ್ಮ, ತಮ್ಮ, ತಂಗಿ ಇವರೆಲ್ಲರ ಪ್ರೀತಿ ಮುಂದೆ ತನ್ನ ಪ್ರೀತಿಯನ್ನು ನಿರಾಕರಿಸುವ ಭಾವದಲ್ಲಿ ಕವಿಯ ನಿರಾಕರಣೆ ಸಂಯಮವಿಲ್ಲಿಯೇ ಮುಕ್ತಾಯವಾಗುವುದು. ಕವಿಯ ವ್ಯಕ್ತಿತ್ವವ ಪರಿಚಯ, ಅವರೊಂದಿಗೆ ಹೊಂದಾಣಿಕೆಗಾಗಿ ಪ್ರೀತಿಯನ್ನೇ ನಿರಾಕರಿಸುವ ಭಾವ ವಾಸ್ತವತೆಗೆ ಹತ್ತಿರವಾಗಿದೆ. 'ವಾನರ ಗೀತೆ' ಕವಿತೆಯಲ್ಲಿಯೂ ಇದೇ ಭಾವ ವ್ಯಕ್ತವಾಗುತ್ತವೆ. ಕೋತಿಯ ಪ್ರತಿಮೆಯೊಂದಿಗೆ ನಮ್ಮ ನಿತ್ಯ ಬದುಕನ್ನು ಕುರಿತು ಹೇಳುತ್ತಾ ರಾಮಾಯಣದ ಕಥೆಯೊಂದಿಗೆ ಕೋತಿಯ ಸಂಕಲ್ಪ ಬಲವನ್ನು ಹೇಳುವ ಕವಿ ಮನುಷ್ಯರಿಗಿಲ್ಲದ ಸಂಕಲ್ಪ ಶಕ್ತಿಯನ್ನು ವಿಡಂಬಿಸುತ್ತಾ "ಈ ಕೋತಿ ನಮ್ಮ ಪೂರ್ವಜನನಿದ್ದರೂ ಇದ್ದೀತೂ ಚಹರೆಯಲ್ಲಿದೆ ಹೋಲಿಕೆ; ಆದರೆ, ಇದರ ಬಾಲ ಸರಿಸಿ, ಮುನ್ನಡೆಯುವ ತಾಕತ್ತು ಸಂಕಲ್ಪವಿದೆಯ ನಮಗೆ. ವಿಕಾಸದ ನಿಚ್ಚಣಿಕೆಗೆ ಇನ್ನೆಷ್ಟೋ ಇವೆ ಮೆಲ್ಲಲು ನರನಾಗಿ ನಿಂತರೆ ಸಾಕೆ? ರಾಮ ಪ್ರಜ್ಞೆ ತಪ್ಪಿದ್ದಾನೆ, ಮತ್ತೆ ಸಂಜೀವಿನಿಗೆ ಕಪಿಯನ್ನು ಕಾದು ಕೂಡಬೇಕೆ?" ಎನ್ನುವ ಮೂಲಕ ಬದಲಾವಣೆಯನ್ನು ಕುರಿತು ಬದಲಾಗಬೇಕೆಂಬುವ ಆಶಯದೊಂದಿಗೆ ಅದಕ್ಕಾಗಿ ಬಂಡಾಯದ ದಾರಿ ಹಿಡಿಯುವ ಅವರ ಮನಸ್ಥಿತಿ ವ್ಯಕ್ತವಾಗಿದೆ.

ತಮ್ಮ ಕವಿತೆಗಳ ಮೂಲಕ ತಮ್ಮನ್ನು ತಾವು ನವೀಕರಿಸಿಕೊಳ್ಳಲು ಹಂಬಲಿಸುವ ಕವಿಗೆ ತಮ್ಮಕವಿತೆಗಳಲ್ಲಿ ಯಾವುದೇ ನೆಲೆಯಿದ್ದರೂ ಸ್ವಂತ ಸೃಜನಶೀಲತೆಯಿಂದಲೇ ನೋಡುತ್ತಾರೆ. ಸಹಜವಾದ ಅಲಂಕಾರಿಕವಲ್ಲದ ಉದ್ದೇಶಪೂರಿತ ಉಪಮೆಗಳ ಮೂಲಕ, ವೈವಿಧ್ಯತೆಯಿಂದ ಕೂಡಿದ ವಸ್ತು ವಿಷಯಕ್ಕೆ, ವಿಭಿನ್ನ ದೃಷ್ಟಿಕೋನಗಳ ಮೂಲಕ ಓದುಗ ವರ್ಗಕ್ಕೆ ಹತ್ತಿರವಾಗುತ್ತಾರೆ. ಸ್ವಾನುಭವಕ್ಕೆ ತಮ್ಮನ್ನು ಒಡ್ಡಿಕೊಳ್ಳುತ್ತಾರೆ. ಇದು ಹೊರನೋಟಕ್ಕೆ ಸರಳವಾದುದೆನಿಸಿದರೂ ಪರಿಣಾಮದಲ್ಲಿ ಗಾಢತೆ ತರುತ್ತವೆ. ವರ್ತಮಾನದ ವಸ್ತು ವಿಷಯಗಳಿಗೆ ಅವರು ಸ್ಪಂಧಿಸುವ ರೀತಿಯಲ್ಲಿ ಸಾಮಾಜಿಕ ಕಳಕಳಿ ಇರುತ್ತದೆ. ವ್ಯಂಗ್ಯಾತ್ಮಕ ನುಡಿಗಳಿಂದ ಆನಂದದ ಸವಿ ಒದಗಿಸುವ, ಈ ಗುಣದಿಂದಾಗಿಯೇ ಅವರು ನಮ್ಮ ಕವಿ ಎಂದೆನಿಸಿಕೊಳ್ಳುತ್ತಾರೆ. ಗೋಪಿ ಗಾಂಡಲೀನ ಅವರ ಪ್ರಾರಂಭದ ಗೀತೆಗಳಲ್ಲಿನ ಪೋಲಿತನ ಸ್ವಲ್ಪ ಸ್ವಲ್ಪವಾಗಿ ಕರಗುತ್ತಾ ತಮ್ಮ ಸೀಮಿತ ವಲಯದಾಚೆಗೆ ಬರುವ ಅವರ ಭಾವನೆಗಳು 'ಟುವಟಾರ' ಕವನ ಸಂಕಲನದ ಸಂದರ್ಭಕ್ಕೆ ಅವರಲ್ಲಿ ಆ ಬಗೆಯ ಅರಿವು ಮೂಡಿದೆ. ಅದಕ್ಕೆ ಅವರು 'ಮನವಿ' ಕವಿತೆಯಲ್ಲಿ ಕವಿಯ ಹಂಬಲವನ್ನು ವ್ಯಕ್ತಪಡಿಸುತ್ತಾರೆ. "ಈ ದಟ್ಟ

ಕಾಡಿನೊಳಗೊಂದು ಬೋಡಿ ಮರದೊಳಗೊಂದು ಗೂಡಿನೊಳಗೊಂದು ಪಕ್ಕಿಯ ಹೊಟ್ಟೆಯೊಳಗೊಂದು ಮೊಟ್ಟೆಯೊಳಗೊಂದು ಮೊಳಕೆ ಮರಿಯ ಮನದೊಳಗೊಂದು ತಡಕುವ ದುಡುಕು ಆಸೆ, ಖುಷಿ ; ನಾ ಮರಿಯಗಿ, ಧರೆಯಾಗಿ, ಹರಿಯಾಗಿ ಈ ಇಡೀ ಬ್ರಹ್ಮಾಂಡದ ಮೇಲೆ ಕಾವು ಕೂತು ಮೊಟ್ಟೆ ಒಡೆದರೆ. . . ಎಂಥ ಮರಿ ಹೊರ ಬರುವುದೋ ನೋಡಬೇಕೆಂದು ದಯವಿಟ್ಟು ಕುಡಿಯಲ್ಲೆ ಚಿವುಟಬೇಡಿ" ಎಂದು ರಸಿಕರನ್ನು ವಿಮರ್ಶಕರನ್ನು ವಿನಂತಿಸುತ್ತಾರೆ. ನಮ್ಮ ದೇಶದ ಜನರ ಸೋಮಾರಿತನ ಅಸಡ್ಡೆ ಅಪಮಾನವನ್ನು ಅನುಭವಿಸಬೇಕಾಗಿದೆ ಎಂಬುದನ್ನು 'ನನ್ನೂರು' 'ವಶೀಕರಣ', 'ತುರ್ತಿನ ಗುರುತುಗಳು', 'ಮಮಕಾರ' ಕವಿತೆಗಳಲ್ಲಿ ಯತಾವತ್ತಾಗಿ ತರುತ್ತಾರೆ. ಆ ಮೂಲಕ ಅವರ ಕವಿತೆಗಳು ಓದುಗರಿಗೆ ಹತ್ತಿರವಾಗುತ್ತವೆ ಎಂದು ಗುರುತಿಸಬಹುದು.

'ಲಿಲ್ಲಿ ಪುಟ್ಟಿಯ' ಹಂಬಲದ ಹೊತ್ತಿಗೆ ಹೆಣ್ಣನ್ನು ನೋಡುವ ಕವಿಯ ದೃಷ್ಟಿ ಬದಲಾಗಿದೆ. ಸುಂದರ ಯುವತಿಯೊಬ್ಬಳನ್ನು ನೋಡಿ ತನ್ನ ಮಗನಿಗೆ ಮುತ್ತು ಕೊಟ್ಟು ಹೆಂಡತಿಯನ್ನು ನಗುತ್ತಾ ಮಾತನಾಡಿಸುವ ರೀತಿಗೆ ಅವರ ಮನಸ್ಸು ಬದಲಾಗಿದೆ. ನಂತರದಲ್ಲಿ ಆತ್ಮವಿಮರ್ಶೆ ಬೆಳೆದಿದೆ. 'ಸಂಧಿಗ್ಧ', 'ಬೊಜ್ಜು', 'ವಾ-ನರಗೀತೆ', 'ಬೇಲಿ' ಮುಂತಾದ ಕವಿತೆಗಳಲ್ಲಿ ಆ ಭಾವ ವ್ಯಕ್ತವಾಗುತ್ತವೆ.

'ಸಂಧಿಗ್ಧ' ಕವಿತೆಯಲ್ಲಿ ಕವಿ "ಚಳಿಗಾಲದ ಒಂದು ಮುಸ್ಸಂಜೆ ಹಿತ್ತಿಲಬೋಳು ಮರದ ಕೆಳಗೆ ತರಗೆಲೆಗಳನ್ನು ರಾಶಿ ಮಾಡುವಾಗ ಹಾರಿಹೋದ ಚಿಟ್ಟೆಯ ಬಗ್ಗೆ

"ಆ ಥೇಟು ತರಗೆಲೆಯಂಥ ಹಕ್ಕಿ
ಆ ಬೆಚ್ಚುಗೆ
ತನ್ನ ವಿಕಾಸದ ಫಲವಾಗಿ ಮೂಡಿ ಬಂದ
ನೈಸರ್ಗಿಕ ಕವಚವೋ
ಅಥವಾ ನಿನ್ನ ಅನುಗ್ರಹದ
ಕಾರುಣ್ಯ ರಕ್ಷೆಯೋ
ಪರಿಭಾವಿಸಲಾರದೆ ಹೋದೆ,,
ಇಂಥ ಸಂದಿಗ್ಧದಲ್ಲಿ
ನನ್ನನ್ನೇಕೆ ನಿಲ್ಲಿಸಿದೆ?
ಹಸಿದಾಗತಕ್ಕ ಅನ್ನವಿಲ್ಲದ ಮಿದುಳು
'ವಿಧಿ' ಯಿಲ್ಲದೆ
ತನ್ನನ್ನು ತಾನೇ ಜೀರ್ಣಿಸಿಕೊಳ್ಳುತ್ತಿದೆ,

ಮನಸ್ಸಿನ ತುಂಬ
ಕೆಟ್ಟ ಹುಣ್ಣುಗಳಾಗಿವೆ,
ಆದ್ದರಿಂದ, ಪ್ರಭೂ
ದಯವಿಟ್ಟು ಮಿದುಳನ್ನು
ಹಿಂತೆಗೆದುಕೊ,
ಅಥವಾ ತಕ್ಕ ಅನ್ನ ಕೊಡು
ನಿನ್ನ ಕೊಡು –

ಕ್ಯಾಮರಾಕಣ್ಣು ; ಪು ; ೧೩೩.

ಎನ್ನುವ ಮೂಲಕ ತಮ್ಮನ್ನು ತಾವು ಸ್ವವಿಮರ್ಶೆ ಮಡಿಕೊಳ್ಳುತ್ತಾರೆ. 'ಬೊಜ್ಜು' ಕವಿತೆಯು ಇದೇ ನೆಲೆಯಲ್ಲಿ ಸಾಗುತ್ತದೆ. 'ಬೊಜ್ಜು' ಸಹಜವಲ್ಲ ಸುಂದರವಲ್ಲ ಅನಿವಾರ್ಯವಂತೂ ಅಲ್ಲವೇ ಅಲ್ಲ, 'ಬೊಜ್ಜು' ಯಾರ್‍ಯಾರಲ್ಲಿ ಹೇಗೆ, ಮಕ್ಕಳು, ಹೆಂಗಸರು ಗಂಡಸರಲ್ಲಿ 'ಬೊಜ್ಜು' ಹೇಗೆ ಬೆಳೆಯುತ್ತದೆ ಎಂದು ಹೇಳುತ್ತಾ ಗಂಡಸರಲ್ಲಿ ಮೂವತ್ತರ ಗಡಿ ದಾಟಿದ ನಂತರ ಬೆಳೆಯುವ ಬೊಜ್ಜು ಕರಗಿಸಲಾಗದು, ಎನ್ನುತ್ತಾ ತಮ್ಮ ಬಗ್ಗೆ ಆಡುವ ಮಾತುಗಳು

ಈಗ ನನ್ನ ಮಾತುಗಳು ಬಾತುಕೊಂಡು
ನನ್ನ ಮಿದುಳಿನಲ್ಲಿ ಬೊಜ್ಜು ಶುರುವಾಗಿದೆ,
ದೇಹದ ವೃಕ್ಷ ಮಧ್ಯದ ಜೊತೆಗೆ" ಎನ್ನುವಲ್ಲಿ,

ಕವಿಯು ತನ್ನ ಬಗ್ಗೆ ತಾನು ವಿವೇಚಿಸಿಕೊಳ್ಳುವ ಮಟ್ಟಿಗೆ ಅವರ ಭಾವ ಇಲ್ಲಿ ಬದಲಾಗಿದೆ ಎಂದು ಹೇಳಬಹುದು.

ಕಾಮದ ಭಾವ ನಿರಾಕರಣೆಯಾಗುವ ಹಾಗೂ ಉದಾತ್ತೀಕರಣ ಮತ್ತು ಅಗತ್ಯಗೊಳಿಸುವ ಪ್ರಯತ್ನದಿಂದಾಗಿಯೇ ಬದುಕು ಸುಂದರವಾಗುತ್ತದೆ. ಅವರದಲ್ಲಿ ಆತ್ಮ ವಿಮರ್ಶೆ ಮಾಡಿಕೊಳ್ಳುವ ಮಟ್ಟಕ್ಕೆ ಪ್ರಜ್ಞೆ ಪ್ರಬುದ್ಧವಾಗಿದೆ. ಸರಿ ತಪ್ಪಿನ ಜಿಜ್ಞಾಸೆ ಸಾಗುವುದನ್ನು ಬೇಲಿ ಕವಿತೆಯ ಸಾಲಗಳಲ್ಲಿ

ಚಿಟ್ಟೆಯ ಕಣ್ಣಿಗೆ ಎಲ್ಲ ಬಣ್ಣ ಬಣ್ಣ
ಕಾಕದೃಷ್ಟಿಗೆ ಅಂಕು ಡೊಂಕು
ಜಿಂಕೆಗಾದರೋ ಕೇವಲ ಕಪ್ಪು ಬಿಳುಪು
ಗೂಬೆಗೆ ಕತ್ತಲೂ ಬೆಳಕು
ಅವರವರ ಕಣ್ಣಿಗೆ ಕಂಡಂತೆ ಅವರವರ ಜಗತ್ತು
ಪಾತ್ರಕ್ಕೆ ತಕ್ಕಂತೆ ಹೊತ್ತು ಹೊತ್ತು

ವಸ್ತುವಿಗೆ ಯಾವುದೋ ತನ್ನದೇ ನಿಜ ರೂಪ ಬಣ್ಣ
ಸತ್ಯ ಯಾರ ಸೊತ್ತು?
ಈ ತೋಟ ಆ ನೋಟ ಅ ಬೇಲಿಯೊಳಗೇ
ನಮ್ಮ ಗೇಯೆ, ನಮ್ಮ ಸಿದ್ಧಿ
ಬೇಲಿಯಾಚೆಗೂ ಕತ್ತ ಚಾಚಿ ಮೇಯುವ ಬುದ್ಧಿ
ಗ್ರಾಹಗಳ ವಿಸ್ತೀರ್ಣ ವೃದ್ಧಿ
ಮೆಯಮ್ಮ ಅರಗಿ ರಕ್ತವಾಗಿ ಮಿದುಳ ಮುಟ್ಟಿದರೆ
ಪ್ರಜ್ಞೆ ಮತ್ತಷ್ಟು ಚುರುಕು
ಅತ್ತ ಅರಗದೆ, ಇತ್ತ ಹೊಟ್ಟೆಯು ಕಟ್ಟಿದರೆ
ಮಿದುಳಲ್ಲಿ ಅಣಬೆ ಬೆಳಸು

ಕ್ಯಾಮರಾಕಣ್ಣು ; ಪು ; ೧೩೮–೧೩೯

ಜಗತ್ತು ಅವರವರ ಭಾವಕ್ಕೆ ತಕ್ಕಂತೆ ತಮ್ಮದೇ ಅಂತಿಮ ದೃಷ್ಟಿಯಲ್ಲ ಎಂದು ಹೇಳುತ್ತಾ ಪ್ರಜ್ಞೆ ಬೆಳೆದು ಮಿದುಳು ಪಕ್ವ ದೃಷ್ಟಿ ಬದಲಾದುದರ, ಮನಸ್ಸು ಮಾಗುವಿಕೆ ಕಡೆಗೆ ಸಾಗುವ ಅವರ ಧೋರಣೆ ಇಲ್ಲಿ ವ್ಯಕ್ತವಾಗುತ್ತದೆ.

' ಸಂವಾದ ' ಕವಿತೆಯಲ್ಲಿ ಅಟ್ಲಾಸನ್ ಕಥೆಯ ವ್ಯಥೆಯನ್ನು ದೀರ ಹಕ್ರ್ಯುಲಿಸ್‌ಗೆ ಹೇಳುವ ರೀತಿಯಲ್ಲಿನ ಕಥೆನ ಶೈಲಿಯಲ್ಲಿನ ಗಂಭೀರ ಚಿಂತನೆಯನ್ನು ಕಥೆಯ ಹಾಗೆ ಹೇಳುವ ಆಕರ್ಷಕವಾದ ಶೈಲಿ ಅಂತರಂಗದ ತುಮುಲನ್ನು ಹಿಡಿದಿಡುವ ಶಕ್ತವಾದ ಕವಿತೆಯಾಗಿದೆ.

ರಸಿಕತೆ, ಕಚಗುಳಿ, ಪೋಲಿತನಗಳಿಂದ ಕವಿ ಹೊರ ಬಂದು ತನ್ನ ವೈಯುಕ್ತಿಕ ಬದುಕಿನಾಚೆಗಿನ ಲೋಕಕ್ಕೆ ಕವಿ ಮುಖಾ ಮುಖಿಯಾಗುವುದು. ವಾಸ್ತವ ಸತ್ಯವನ್ನು ಕಾಣಿಸುತ್ತಿದೆ. ಅದರಲ್ಲಿ ವ್ಯಂಗ್ಯವೇ ಪ್ರಧಾನವಾದ ಗುಣವಾಗಿದೆ. ಭ್ರಮನಿರಶನ, ವಿಷಾದದ ಧ್ವನಿಯನ್ನು ಕಾಣಬಹುದು. ' ದೇವರಿಗೆ ನಮಸ್ಕಾರ ' ' ಗುಂಡಪ್ಪ ವಿಶ್ವನಾಥ ' ಕ್ವಿಕೋಟನ ಕೊನೆಯ ದಿನಗಳು ' ಶಾಂಗ್ರಿಲಾ ' ಈ ಕವಿತೆಗಳಲ್ಲಿ ಭಿನ್ನ ಬಗೆಯಲ್ಲಿ ಭ್ರಮನಿರಶನವನ್ನು ಕಾಣಬಹುದು. ' ದೇವರಿಗೆ ನಮಸ್ಕಾರ ' ಗೀತೆಯಲ್ಲಿ ಏನೆಲ್ಲಾ ಕೊಟ್ಟಿದ್ದಕ್ಕಾಗಿ ದೇವರಿಗೆ ನಮಸ್ಕಾರವೆಂದು ಪ್ರಾರಂಭದಲ್ಲಿ ಹೇಳುವ ಕವಿ ಅಂತಿಮವಾಗಿ " ದೇವರಿಗೆ ನಮಸ್ಕಾರ

ಬುದ್ಧಿ ಕೊಟ್ಟಿದ್ದಕ್ಕೆ
ಎಲ್ಲ ಬಲ್ಲವನಂತೆ
ಉಗ್ರ ತರ್ಕ ಹೂಡಿ

ದೇವರನ್ನ ಇಲ್ಲ ಗಳೆಯಲು
ಆಳದ ಏಕಾಂತದಲ್ಲಿ
ದೇವರಿಗಾಗಿ ಹಂಬಲಿಸಿ ಒದ್ದಾಡಲು,
ಆತ್ಮಭಿಮಾನದ ಜೊತೆ ಗುದ್ದಾಡಲು

ಕ್ಯಾಮರಾ ಕಣ್ಣು ; ಪು ; ೧೮೫– ೧೮೩

ಈ ಭೂಮಿಯಲ್ಲಿ ಬದುಕುವುದಕ್ಕಾಗಿ ನಮಗೆ ಪ್ರಕೃತಿ ದಯಪಾಲಿಸಿರುವ ಕೊಡುಗೆಗಳನ್ನು ತಿಳಿಸುವ ಕವಿ ಅದನ್ನು ದುರ್ಬಳಕೆ ಮಾಡಿಕೊಳ್ಳುತ್ತಿರುವ ಬಗ್ಗೆ ಹರಿತವಾಗಿ, ಛೇಡಿಸುವುದರ ಜೊತೆಗೆ ಆತ್ಮಭಿಮಾನವನ್ನು ಜಿಡಲಾಗದ ಮನುಷ್ಯನ ಸಂದಿಗ್ಧತೆಯನ್ನು ತಿಳಿಸುತ್ತಾರೆ.

ಕವಿಯ ಮನಸ್ಸು ಪಕ್ವಗೊಂಡು ಹೆಣ್ಣನ್ನು ನೋಡುವ ಅವರ ದೃಷ್ಟಿ ಬದಲಾಗಿದೆ, ತಾರುಣ್ಯದ ಕಾವು ಈಗ ಉಳಿದಿಲ್ಲ ಈಗ ಪೋಲಿತನದ ಬದಲು ಹೆಣ್ಣಿನ ಬಗ್ಗೆ ವೇದನೆ ಇದೆ, ಹೆಣ್ಣಿನ ಬಗ್ಗೆ ಕಾಮಾಸಕ್ತಿ ಮಾತ್ರವಲ್ಲ, ಆದರ ಗೌರವಗಳು ಹುಟ್ಟಿಕೊಂಡಿದೆ. ' ಅಕಾಲ ' ಕವಿತೆಯಲ್ಲಿ

ಈಗೇಕೆ ಬಂದೆ ಹೆಣ್ಣೆ, ಕವಿತೆಯಲ್ಲಿ
ಈ ನಿರಾಯುಧನ ಮೇಲೆ ಹೀಗೆ ಧಾಳಿಗೆ
ನನ್ನಲ್ಲಿ ಪ್ರಾಯ ಬಿಚ್ಚುಗತ್ತಿ
ಕಣ ಗಣೆಗೆ ಎದೆಯೊಡ್ಡುವ ಶಕ್ತಿ
ಕಡಿದ ತಂತಿಯಲ್ಲಿ ಮಿಂಚು ಹರಿಯಬಲ್ಲುದೆ?
ಗಾಜು ಗೋಲಿಯಲ್ಲಿ ದೀಪ ಉರಿಯ ಬಲ್ಲುದೇ?
ನರೆ ತೊಡಗಿದ ಹೃದಯತೆ ಎಂದೆ ಮರು ವಸಂತ
ದಡದ ಒಡೆದ ಹಡಗಿಗೆ ಸಾಹಸದ ಹೊಸ ದಿಗಂತ?

ಕ್ಯಾಮರಾಕಣ್ಣು ; ಪು ; ೧೯೨

ಹಿಂದೆಲ್ಲ ಕಚಗುಳಿ ರೋಮಂಚನ ನೀಡುವ ಹೆಣ್ಣು ಈಗ ಆ ನೆಲೆಯಲ್ಲಿ ಇರುವುದಿಲ್ಲ. ಜ್ವರದಂತೆ ವ್ಯಾಪಿಸುತ್ತಾ. ಹುಡುಗಿಯರಂತೆ ಹೆಂಡತಿಯು ನೆನಪಿಗೆ ನೋವಿಗೆ ಕಾವ್ಯಕ್ಕೆ ವಸ್ತುವಾಗುತ್ತಾಳೆ. ತಾನು ಸಿಂಹಾಸನದಲ್ಲಿ ಕುಳಿತಿರುವ ಹೆಣ ಒಳಗೆ ಹುಳು ನೂರಾರು ಎನ್ನುವ ಮಾತುಗಳನ್ನು ತಾವು ಏನೆಂಬುದನ್ನು ತೆರೆದಿಟ್ಟುಕೊಳ್ಳುತ್ತಾರೆ.

ಹೆಣ್ಣು ಈಗ ಅವರಲ್ಲಿ ಅಸಕ್ತಿಯನ್ನು ಕೆರಳಿಸುತ್ತಿಲ್ಲ, ನೆನಪೇ ಸಂಗಾತಿಯಾಗಿದೆ. 'ಸ್ಥಭ್ಧ ಚಿತ್ರ' 'ಬರ ಹತಾಶೆ' ಇಲ್ಲೆಲ್ಲಾ ಬದುಕಿನ ಬಗೆಗಿನ ವೈಯುಕ್ತಿಕ ನೆಲೆಯನ್ನು ಕಾಣಬಹುದಾದರೆ ' ಗೀತೆ ' 'ವರ್ತಮಾನ' ಕವಿತೆಗಳಲ್ಲಿ ಅದು ಸಾಮಾಜಿಕ ನೆಲೆಯ ಕಡೆಗೆ ಹೊರಳಿದೆ.

ಹೊರಗೆ ಬಸ್ಸು ಕಾರು ಆಟೋರಿಕ್ಷ ಗದ್ದಲ, ಈಕೋಣೆಯೊಳಗೆ ಎಲ್ಲವು ನಿಶ್ಶಬ್ದ ನಿಶ್ಚಲ ಎನ್ನುವ ಕವಿಯ ಕಾವ್ಯಕ್ಕೆ ಹೊರಗಿನ ಭೀಕರವಾದ ಬರ ಕಾವ್ಯಕ್ಕೂ ಗರ ತಂದಿದೆ. ಏನೋ ಮಾಡಲು ಕೈಸಾಗದೆ, ಈತ ಮೈ ಚೆಲ್ಲಿ ಬಿದ್ದಿದ್ದಾನೆ, ಅಂಗಾತ ತಟ್ಟನೆ ಇವನಲ್ಲಿ ನೆಮ್ಮದಿ ಮೂಡುತ್ತಿದೆ. ನಾನೀಗ ನಿಜಕ್ಕೂ ಸತ್ತಿರಬಹುದೇ? ಎಂಬ ಪ್ರಶ್ನೆ ಕಾಡುತ್ತದೆ. ಇಲ್ಲಿ ಹೊರ ಬದುಕಿನೊಂದಿಗಿನ ತಮ್ಮ ಸಂಬಂಧದಿಂದ ಹೊರಗುಳಿದಿರುವ ಮಾನಸಿಕ ಸ್ಥಿತಿ ಅವರ ವಯಸ್ಸಿನ ಪರಿಪಕ್ವತೆಯನ್ನು ತೋರುತ್ತ ತನ್ನ ಬಸಿರಿಗೆ ಮರಳುವ ಅನುಭವದ ಮೂಲಕ ವ್ಯಕ್ತವಾಗುತ್ತದೆ.

' ವರ್ತಮಾನ' 'ಗುಂಡಪ್ಪ ವಿಶ್ವನಾಥ' 'ಕ್ರಿಕ್ಪೋಟನ ಕೊನೆಯ ದಿನಗಳು' 'ಶಾಂಗ್ರಿಲಾ' ಈ ಕವಿತೆಗಳಲ್ಲಿ ಕವಿಯ ಭ್ರಮನಿರಶನ, ವ್ಯಂಜಕತೆಯನ್ನು ಕಾಣಬಹುದು ಇಲ್ಲಿ ವಿಶ್ವನಾಥನನ್ನು ಕುರಿತ ಕವಿತೆಯಲ್ಲಿ ಒಂದು ಕಲಾ ಮಾಧ್ಯಮದ ಸಮಗ್ರ ನಿರೂಪಣೆ ಇವೆ, ಕವಿಯ ಆತ್ಮಾವಲೋಕನದ ಜೊತೆಗೆ ಸಾಮಾಜಿಕ ಅವಲೋಕನವನ್ನು ಒಂದಾಗಿ ಕಾಣುವ ಕುತೂಹಲಕಾರಿಯಾದ ಕವಿತೆ " ಆಡಿದಂತೆ ಕುಸಲ ಕುಂಚ ಸಟ್ಟಕದಲಿ ಕಿರಣ

ಕುಲುಕು ನೀಲಿ ಬಳುಕು ಪಚ್ಚೆ ತೊನೆಯುವ ತೆನೆ ಚೆನ್ನ
ಹಿತ ಗುಲಾಬಿ ಸ್ಪರ್ಶ ಪುಳಕ ತುಳುಕು ಪ್ರೇಮಗಾನ
ವೈಭವಗಳ ಹಂಪೆಯಲ್ಲಿ ಅಂಡಲೆಯುವ ಭೂತ
ಸವ್ವೆ ಸ್ಪರ್ಶಮಣಿ ಕಂಟ ಕುಂಚ ಉಳಿ ಅನಾಥ
ಕೃತಜ್ಞತೆ ಸಹಾನುಭೂತಿ, ಗೆಳೆಯ ವಿಶ್ವನಾತ

ಕ್ಯಾಮರಾ ಕಣ್ಣು ; ಪು ; ೨೦೨– ೨೦೩

ಕಲಾವಿದನಾದ ಆಟಗಾರ ವಿಶ್ವನಾಥನದ ಸಮಗ್ರ ಚಿತ್ರಣವನ್ನು ಸಮೃದ್ಧವಾಗಿ ತೆರೆದಿಡುವ ಕವಿ ವಯಸ್ಸಿನ ಪಕ್ವತೆ, ಜಡತೆಯನ್ನು ನಿರೂಪಿಸುತ್ತಾರೆ. ಇಲ್ಲಿ ಕವಿಯಕಾವ್ಯದ ಸಾಧನೆಯ ಪರಿಣತಿಯನ್ನು ಕಾಣಬಹುದು ಜೊತೆಗೆ ವಿಷಾದದ ಎಳೆಯನ್ನು ಕಾಣಬಹುದು ಅಲ್ಲದೆ ಅದರಲ್ಲಿ ಭ್ರಮನಿರಶನವನ್ನು ತರುತ್ತಾರೆ. ಪ್ರಾರಂಭದ ವೈಭವ ಅಂತಿಮವಾಗಿ ವಿಷಾದಕ್ಕೆ ದಾರಿ ಮಾಡಿಕೊಟ್ಟಿದೆ. ವೈಭವದ ಸೃಷ್ಟಿಶೀಲತೆ ಜೀವಂತಿಕೆಯ ಸಹಜವಾದ ರೀತಿಯಲ್ಲಿ ಅಂತ್ಯವಾದರೂ ಅಲ್ಲಿಭ್ರಮನಿರಶನದ ಅಂಶವಿರುವುದು ಸ್ಪಷ್ಟವಾಗುತ್ತದೆ. " ಕ್ರಿಕ್ಯೋಟನ ಕೊನೆಯ ದಿನಗಳು ಕವಿತೆಯಲ್ಲಿ ವ್ಯಂಗ್ಯ ವಿಷಾದಕ್ಕಿಂತ ಭ್ರಮ ನಿರಶನವೇ ಹೆಚ್ಚಾಗಿ ಕಂಡು ಬರುತ್ತದೆ. ಇಲ್ಲಿ ಬದುಕಿನ ಅರ್ಥಗಳ ಬಿಚ್ಚುವಿಕೆಯ ಪ್ರಯತ್ನವಿದೆ. ಆತ ತೋರಿದ ಐಲುತನದ ಸಾಹಸ ಅಂತಿಮ ದಿನಗಳಲ್ಲಿಬಿಂಬಿತವಾಗುತ್ತದೆ. ಆತ ಕೊನೆಗೆ ತಲುಪು ವಿಷಾದ, ಸಿನಿಕತನದ ನೆಲೆಯನ್ನು ಕೊನೆಯ ಮಾತುಗಳು ಸ್ಪಷ್ಟಪಡಿಸುತ್ತದೆ. ತನ್ನ ಮೂಗಳತೆಯ ಸಿನಿಕತನದ

ಮೂಲಕ ಜಗತ್ತನ್ನು ನೇರಗೊಳಿಸಲು ಹೊರಡುವ ಕ್ವಿಕ್ಸೋಟ್ ಕೊನೆಗೆ ಮಾನ್ಯತೆಯಿಂದ ಸಂಪೂರ್ಣ ಹೊರನಿಂತು ಮಾಡಿಕೊಳ್ಳುವ ಆತ್ಮವಲೋಕನದಲ್ಲಿ ಸಿನಿಕತೆಯ ಭಾವುಕತೆಯ ನೆಲೆಯನ್ನು ತಲುಪುತ್ತದೆ. ಇಲ್ಲಿ ಕಂಡು ಬರುವ ವಿಷಾದದ ಅನುಭವ ವೈಯುಕ್ತಿಕತೆದಿಂದ ಸಾಮಾಜಕತೆಯ ಕಡೆಗೆ ಸಾಗಿವೆ.

" ನೆನಪು ಶರಶಯ್ಯೆಯಲ್ಲಿ ಉದ್ವಿಗ್ನ ಕ್ವಿಕ್ಯೋಟ್ "

ಪಾಳು ಮಾಡಿನ ಜಂತಿ, ಜೋತ ಬಾವಲಿ ಸಾಲು,

ಬಿರುಕು ಗೋಡೆಯ ಮೇಲೆ ಗೂಟಕ್ಕೆ ನೆಲೆರುವ

ನಟ್ಟುಗುಟ್ಟು ಗುರಾಣಿ ಜಂಗು ತಗಡಿನ ಕವಚ

ಸುತ್ತ ಹಾವಿನ ಹಗೆ ತೊಗಲ ನಡುಪ್ಪಟ್ಟು

ನಿನ್ನ ತ್ರಿವಿಕ್ರಮದ ದೈತ್ಯ ಪಾದದ ಕೆಳಗೆ

ನಾನೊಂದು ಕ್ಷುದ್ರ ಹುಳು ಶರಣು ಶರಣು

ಕ್ಯಾಮರಾ ಕಣ್ಣು ; ಪು ; ೨೦೪-೨೦೫

ಇಲ್ಲಿ ಬರುವ ಸಾಲುಗಳಲ್ಲಿ ಕ್ವಿಕ್ಯೋಟನ ಏಲುತನದ ಸಾಹಸಗಳು ಅದಕ್ಕಾಗಿ ಆತ ಮರಣ ಶಯ್ಯೆಯಲ್ಲಿ ಹಪಹಪಿಸುವುದು ಕೊನೆಗೆ ದಿಟಕ್ಕೆ ಶರಣಾಗುವ ಆತನ ಮಾತುಗಳಲ್ಲಿ ಭ್ರಮನಿರಶನದ ಭಾವ ವ್ಯಕ್ತವಾಗಿದೆ. ಸಾಹಸಿಯಾಗಿ ಮರೆದ ಕ್ವಿಕ್ಯೋಟ್ ಬರ್ಜರಿತನಾದಾಗ ಕಾಲಕ್ಕೆ ಶರಣಾಗುವುದು ಸ್ಪಷ್ಟವಾಗುತ್ತದೆ.

ಶಾಂಗ್ರಿಲಾ ಕಪಿತೆಯಲ್ಲಿಯು ಕೂಡ ಕವಿಯ ನಿಲುವು ಹೀಗೆ ಸಾಗುವುದನ್ನು ಕಾಣಬಹುದು. 'ಶಾಂಗ್ರೀಲಾ' ಕಳೆದು ಹೋದ ಸ್ವರ್ಗ ಸೀಮೆಯು ಪ್ರತೀಕವಾಗಿದೆ. ಅದಕ್ಕೆ ತದ್ವಿರುದ್ಧವಾದುದು 'ಅಲಬಾಮದ' ದ ವರ್ಣನೆ. ಒಂದು ಸ್ವರ್ಗದ ಪ್ರತೀಕವಾದರೆ, ಮತ್ತೊಂದು ನರಕದ ಪ್ರತೀಕ. ಮೂರನೆ ಭಾಗದಲ್ಲಿ ಕವಿಯ ಆತಂಕ, ಕಳವಳವನ್ನು ಕಾಣುತ್ತೇವೆ.

ಎಲ್ಲಿ ಶಾಂಗ್ರಿಲಾ?

ಎಲ್ಲೇ ಕೆಲವು ಮನಗಳಲ್ಲಿ

ಸಾತ್ವಿಕ ಚೇನಗಳಲ್ಲಿ

ಬೀಜ ಮಾತ್ರವೇ?

ಮೊಳೆತೀತೆ ಬೋಧಿ

ಬೇರೂರೀತೆ ನೆಲದಲ್ಲಿ

ಈಗಲಾದರೂ?

ಅದರ ತಂಪು ನೆರಳಿನಲ್ಲಿ
ಬೆಳೆದಾವೆ
ನೆಮ್ಮದಿಯನ್ನು ಕಂಡಾವೆ
ನಮ್ಮ ಮಕ್ಕಳು?

ಕ್ಯಾಮರಾ ಕಣ್ಣು ; ಪು ; ೨೨೩

ಎನ್ನುವಲ್ಲಿ ಕವಿಯು ಕಳೆದು ಹೋದ ಶಾಂಗ್ರಿಲಾ, ಅದನ್ನು ಹುಡುಕುವಲ್ಲಿನ ಮುಗ್ಧತೆ, ಕವಿಯ ಹಂಬಲ ಬದುಕಿನ ಬಗೆಗಿನ ಅಸ್ಥೆಯನ್ನು ಚಿತ್ರಿಸುತ್ತದೆ. ಕೊನೆಗೆ ಬದುಕಿನಲ್ಲಿ ಕ್ರೌರ್ಯದ ಪ್ರಾಬಲ್ಯವನ್ನು ಅಸಾತ್ವಿಕ ಗುಣಗಳ ಅನಾವರಣ ಮಾಡುತ್ತಾ ಇಡೀ ಭೂಮಿಯೇ ಬಾಂಬಾಗುವ ನಿರಾಸೆಯನ್ನು ವ್ಯಕ್ತಪಡಿಸಿದರೂ ಅಂತಿಮವಾಗಿಕವಿಯಾ ಆಶಾವಾದಿ ತನ ಇನ್ನು ಉಳಿದಿರುವುದು ವ್ಯಕ್ತವಾಗುತ್ತದೆ.

ಹಾಗೆಯೇ ಮತ್ತೊಂದು ಕವಿತೆ 'ಸ್ಯಮಂತಕ' ಇದು ವಿಡಂಬನಾತ್ಮಕವಾದ ಗೀತೆಯಾಗಿದೆ. ಪುರಾಣದ ವಸ್ತುವನ್ನು ಆಧರಿಸಿಕೊಂಡು ಅಧಿಕಾರ ಅಂತಸ್ತು ಸಂಪತ್ತಿಗಾಗಿ ನಿರಂತರ ಹೋರಾಟ ರಾಮನಿಗೆ ರಾಜ್ಯವಾದರೂ ರಾಗಿ ಬೀಸುವುದು ತಪ್ಪೀತೆ? ಎಂಬ ಗಾದೆ ಮಾತಿನಂತೆ ಅಧಿಕಾರ ಯಾರ ಕೈಗೆ ಬಂದರೂ ಸಾಮಾನ್ಯನ ಬದುಕು ಬದಲಾಗದೆಂಬುದನ್ನು ' ಸ್ಯಮಂತಕ ' ಮಣಿಯ ಕಥೆಯ ಮೂಲಕ ಸ್ಪಷ್ಟವಾಗಿಸುತ್ತದೆ. ಪೌರಾಣಿಕ ಪ್ರತಿಮೆಯೊಂದಿಗೆ, ಪ್ರಸ್ತುತ ಬದುಕನ್ನು ಕುರಿತ ಅವರ ವ್ಯಂಗ್ಯ ವಿಡಂಬನೆ ಜನಪ್ರಿಯತೆಗೆ ಕಾರಣವಾಗುತ್ತದೆ. ' ಕಾಯುವುದು ' ಎಂಬ ಕವಿತೆ ವ್ಯಂಗ್ಯದ ಧಾಟಿಯಲ್ಲೆ ರಚಿತವಾಗಿದೆ. ' ಕಾಯುವುದು ' ಕಷ್ಟ ಅನಿವಾರ್ಯ, "ಹಣದ ಉಬ್ಬರದಲ್ಲಿ ಹೆಂಡತಿ ನಗೆ ಕೃತಕ ಗೊಬ್ಬರದಲ್ಲಿ ಮಕ್ಕಳ ಬಗೆ ಆರೋಗ್ಯ ಕಾಯುವುದು ಕಷ್ಟ ಅನಿವಾರ್ಯ" ಎಂಬುದರಲ್ಲಿ ಬದುಕಿನ ಸಂಕೀರ್ಣತೆಗಳನ್ನು ಬಿಡಿಸಿಟ್ಟಿದ್ದಾರೆ.

ಗೋಪಿ ಮತ್ತು ಗಾಂಡಲೀನದ ಮೂಲಕ ಕಾವ್ಯ ಕೃಷಿಗೆ ಬಂದ ಲಕ್ಷ್ಮಣರಾವ್ ಅವರ ಪ್ರಾರಂಬದ ಗೀತೆಗಳಲ್ಲಿ ತುಂಟತನ ಲವಲವಿಕೆಯ ಕವಿತೆಗಳ ಮೂಲಕ ಓದುಗರನ್ನು ಆಕರ್ಷಿಸುತ್ತಾ ಗಂಭೀರವಾಗಿ ಚಿಂತಿಸುವಂತೆ ಮಾಡಿದ ಕವಿ ತಮ್ಮದೇ ಪರಿಧಿಯಿಂದ ಹೊರಬಂದು ಈ ಲೋಕವ ತಾಕಿದ ಬದುಕಿನಾಸೆ, ನಿರೀಕ್ಷೆ ದುಗುಡ ದುಮ್ಮಾನಗಳ ಕಡೆಗೆ ಹೊರಳಿರುವುದನ್ನು ಕಾಣಬಹುದು ಅವರ ಕಾವ್ಯ ಮನೋಧರ್ಮದ ಪ್ರತೀಕವೆಂಬಂತಿರುವ " ಏನೀ ಅದ್ಭುತವೇ ' ' ಪರಿಧಿ ' ತಂದೆ ಮಗನಿಗೆ 'ಮಧ್ಯೆಸ್ಥ' 'ರಿಪ್‌ವ್ಯಾನ್ ವಿಂಕಲ್' ಕವಿತೆಗಳು ಇಂದ್ರಿಯ ಗಮ್ಯ ಜಗತ್ತಿನಾಚೆಗೂತುಡಿಯುತ್ತಿರುವುದನ್ನು ಕಾಣಬಹುದು ಆಧುನಿಕ ಬದುಕಿನ ನಿತ್ಯದ ತಲ್ಲಣಗಳನ್ನು ಪ್ರತಿಪಾದಿಸುವ 'ಏನೀ ಅದ್ಭುತವೇ' ಕವಿತೆಯ ನಾಯಕಿ ಎದುರಿಸುವ ಅನಿರೀಕ್ಷಿತ ಅಸಾಮಾನ್ಯ ಸಂಗತಿಗಳೇ ಅವಳಿಗೆ ಅದ್ಭುತವೆನಿಸುತ್ತದೆ. ಸಾಮಾನ್ಯ ಸೌಂದರ್ಯ,

ಶ್ರೀಮಂತಿಕೆಯಿಲ್ಲದ ಆಕೆಯನ್ನು ಪ್ರೀತಿಸಿ ಮದುವೆಯಾದ ಆತನ ಪ್ರೀತಿ, ಪಕ್ಕದ ಮನೆಯ ಜಗಳ ಗಂಟಿ ಹೆಂಗಸು ತೋರುವ ಅಕ್ಕರೆ, ಪ್ರಾಯದ ಕಾವು ಕಳೆದು ತಣ್ಣಗಾದ ಮೇಲೂ ಗಂಡನಿಗೆ ತನ್ನ ಬಗ್ಗೆ ಉಳಿದಿರುವ ಸೆಳೆತ ಕೊನೆತನಕ ಜೀವನೋತ್ಸಾಹ ಹಾಗೇ ಉಳಿದಿರುವುದು ಈ ಎಲ್ಲವೂ ಅವಳ ಪಾಲಿಗೆ ಅದ್ಭುತವೇ ಆಗಿದೆ. ಏನೀ ಅದ್ಭುತವೇ ಗೆಳತಿ ಎಂಥಾ ಅದ್ಭುತವೇ ಎನ್ನುವ ಉದ್ಗಾರದೊಂದಿಗೆ ಪ್ರಾರಂಭವಾದ ಕವಿತೆ ನಾಯಕಿ ಬದುಕಿನಲ್ಲಿ ಪ್ರತಿ ನಿತ್ಯ ಕಾಣುವ ಅದ್ಭುತಗಳನ್ನು ಚಿತ್ರಿಸುತ್ತಾರೆ. ದೌರ್ಜನ್ಯ , ಹಿಂಸೆ, ದಬ್ಬಾಳಿಕೆಗಳೇ ನಡೆಯುವ ಈ ಆಧುನಿಕ ಬದುಕಿನಲ್ಲಿ ಸಭ್ಯ ಮನುಷ್ಯನ ನಡವಳಿಕೆ, ಅವಳಿಗೆ ಅದ್ಭುತವೆನಿಸುತ್ತದೆ. ಇಲ್ಲಿ ಕವಿ ಪ್ರಸ್ತುತ ಬದುಕಿನ ಕ್ರೂರತೆಯನ್ನು ಲಘುಧಾಟಿಯಲ್ಲಿ ಅನಾವರಣ ಗೊಳಿಸುವುದು. ಜಗತ್ತಿನ ತುಂಬ ಕ್ರೌರ್ಯವೇ ತುಂಬಿದ್ದರೂ ಜೀವನದ ಬಗ್ಗೆ ಆಸೆ ಉಳಿಸಿಕೊಂಡು ಸಾಗುವ ನಡುವೆಯೂ ಬದುಕುವುದು ಅದ್ಭುತ ಪವಾಡ ಎನಿಸುವುದಿಲ್ಲವೇ ? ಎಂಬ ಉದ್ಘಾರವನ್ನು ಕವಿ ಎತ್ತಿದ್ದಾರೆ.

"ನನ್ನ ಗೀತೆ" ಭಾವಗೀತೆಗಳ ಸಂಕಲನದಲ್ಲಿ ಬರುವ ಕವಿತೆಗಳಲ್ಲಿಯು ಪ್ರೀತಿ ಪ್ರೇಮ, ವಿರಹ, ತಾಪ, ವಾತ್ಸಲ್ಯ, ಸ್ನೇಹಗಳು, ಇವುಮನುಷ್ಯ ಬದುಕಿಗೆ ಜೀವಂತ ಸೆಲೆಗಳಾಗಿವೆ ಎಂಬುದನ್ನು ಭಾವಗೀತೆಗಳಲ್ಲಿ ವ್ಯಕ್ತಪಡಿಸಿದ್ದಾರೆ. ವ್ಯಕ್ತಿ ಸಾಧಿಸಬಹುದಾದ ಸೃಷ್ಟಿಸಬಹುದಾದ ಪ್ರೇಮಮಯ ಜಗತ್ತ ಲಕ್ಷ್ಮಣರಾವ್ ಅವರ ಕವಿತೆಗಳ ಜೀವಸತ್ವ ಎನ್ನಬಹುದು.

ಬಿ.ಆರ್.ಲಕ್ಷ್ಮಣರಾವ್ ಅವರು ತಮ್ಮ ಕವಿತೆಗಳ ಮೂಲಕ ತಾವು ಖುಷಿ ಪಡುತ್ತಾರೆ. ಆ ಖುಷಿಯನ್ನು ನಾವು ಅನುಭವಿಸುವಂತೆ ಮಾಡುತ್ತಾರೆ. ಅವರಿಗೆ ಕವಿತೆ ರಚನೆಯು ಒಂದು ಆಟವೇ,ಆದರೂ ಆ ಆಟದಲ್ಲಿ ಕಲೆಗಾರಿಕೆ ಇರುತ್ತದೆ. ಗಂಭೀರವಾದುದನ್ನು ತಮಗೆ ಸಹಜವಾದ ರೀತಿಯಲ್ಲೇ ಆ ಇತಿಮಿತಿಯೊಳಗೆ ಕಾವ್ಯ ರಚಿಸುವ ಅವರ ಶೈಲಿ ಆಕರ್ಷಕವಾಗಿರುತ್ತದೆ. ನಾನು ಕ್ರಮವಾಗಿ ಪಂಚೇಂದ್ರಿಯ ಹೃದಯ ಮಿದುಳುಗಳ ದಾಸನೆಂದು ಒಂದು ಪರಿಧಿಯಲ್ಲೇ ಪ್ರಾರಂಭದಲ್ಲಿ ಕಾವ್ಯ ರಚಿಸಿದರು ಅಲ್ಲಿಂದಾಚೆಗೂ ಮೀರಿ ಬರೆಯುತ್ತಾರೆ ತಮ್ಮ ಪೋಲಿತನದಿಂದ ಕಚಗುಳಿಯಿಡುತ್ತ, ರಂಜಿಸುತ್ತಾ ಹೆಣ್ಣಿನ ಸುತ್ತವೇ ಕಾವ್ಯ ಬರೆದ ಕವಿ ಹೆಣ್ಣನ್ನು ಕಾಮ ಕೇಂದ್ರಿತ ನೆಲೆಯಲ್ಲಿ ಉಳಿಸದೆ ಅವರಾಚೆಗೂ ಮೀರಿದ ಅವಳ ವೇದನೆಯ ಕಡೆಗೂ ತಮ್ಮ ದೃಷ್ಟಿ ಹರಿಸಿದ್ದಾರೆ. ಲಕ್ಷ್ಮಣರಾವ್ ಅವರನ್ನು ಕಾಡುವ ತೀವ್ರವಾದ ಏಕಾಕಿತನ, ಅದರಿಂದಾಗಿ ನೋಯುವ ಅವರ ಹೃದಯಕ್ಕೆ ಗೆಳೆಯರು ತಂದೆ ತಾಯಿ, ತಂಗಿ ಯರ ಪ್ರೀತಿ, ಅದು ತರುವ ನೋವು ನಿರಾಶೆ, ದು:ಖವು ಬೇಕಾಗುತ್ತದೆ. ಅದಕ್ಕಾಗಿಯೇ ಅಪ್ಪ, ಅಮ್ಮ ಅವರನ್ನು ಸದಾ ಕಾಡುತ್ತಲೇ ಹೋಗುತ್ತಾರೆ. ಅನಂತರ ಅವರ ಮನಸ್ಸು ಪರಿಪಕ್ವವಾಗಿ ಅನುಭವ ಮಾಗಿದೆ, ನಂತರ ಅವರು ಹೆಣ್ಣನ್ನು ನೋಡುವ ದೃಷ್ಟಿ ಬದಲಾಗುತ್ತಾ ಹೋಗುತ್ತದೆ. ಹಾಗೆಯೇ ಅವರ ಕವಿತೆಗಳಲ್ಲಿ ವ್ಯಂಗ್ಯ ವಿಷಾದ, ಭ್ರಮನಿರಸನ ವ್ಯಕ್ತವಾಗುತ್ತದೆ.

ಬಿ.ಆರ್.ಲಕ್ಷ್ಮಣರಾವ್ ಅವರ ಕಾವ್ಯ ಜನಪ್ರಿಯತೆಗೆ ಕಾರಣವಾಗುವ ಮತ್ತೊಂದು ಅಂಶವೆಂದರೆ ಯಾವುದೇ ಪಥ, ಪಂಥಗಳಲ್ಲಿ ತಮ್ಮನ್ನು ಗುರುತಿಸಿಕೊಳ್ಳದಿರುವುದು ಹಾಗೆಯೇ ಸಮಕಾಲೀನ ಸಾಹಿತ್ಯ ಚಳುವಳಿಗಳಿಂದ ಹೊರಗುಳಿದುದು, ಅನುಭವದ ಮುಕ್ತತೆ ವಸ್ತುನಿಷ್ಠವಾದ ಅವರ ಕಾವ್ಯ ಧೋರಣೆ ಜನರ ಮೆಚ್ಚುಗೆಗೆ ಕಾರಣವಾಗಿದೆ. ಅವರ ಕಾವ್ಯ ವ್ಯಕ್ತಿತ್ವ ಬೇರೆ ಅಲ್ಲ ಕವಿಯ ವ್ಯಕ್ತಿತ್ವ ಬೇರೆ ಅಲ್ಲ ಎಂಬುದು ಇಲ್ಲಿ ಮುಖ್ಯವಾಗಿದೆ. ಅವರ ಕವಿತೆಗಳಲ್ಲಿ ಸಾಮಾಜಿಕ ಕಳಕಳಿ ಜೀವನದ ಬಗೆಗಿನ ಅಧಮ್ಯ ಪ್ರೀತಿ ಗಂಡು ಹೆಣ್ಣಿನ ಪ್ರೀತಿ, ಇವುಗಳು ಪ್ರಮುಖವಾಗಿದೆ, ಆದರೆ ಅವುಗಳಲ್ಲಿ ಪ್ರತಿರೋಧ, ಬಂಡಾಯದ ದನಿ ಇರುವುದಿಲ್ಲ ಚಿರಪರಿಚಿತವಾದ ಭಾಷೆ, ಶೈಲಿ, ಬಾವುಕತೆ ರೋಚಕತೆ, ತಮ್ಮ ಸರಳ ಸುಲಭ ಶೈಲಿಯ ಮೂಲಕ ಓದುಗರ ಅಪೇಕ್ಷೆಗಳನ್ನು ಪೂರೈಸುವ ವಿಶಿಷ್ಟವಾದ ಅಭಿವ್ಯಕ್ತಿಯಿಂದಾಗಿಯೇ ಅವರ ಕವಿತೆಗಳು ಓದುಗರನ್ನು ಆಕರ್ಷಿಸುತ್ತವೆ. ಜನ ಮೆಚ್ಚುಗೆಯನ್ನು ಗಳಿಸುತ್ತದೆ. ತಮ್ಮ ಸ್ವಂತಿಕೆಯ ನಿಲುವಿನಲ್ಲೇ ಕವಿತೆ ಚರ್ಚಿಸುವುದು ಯಾವುದೇ ರೀತಿಯ ಕಾವ್ಯ ಸಿದ್ಧಾಂತಗಳ ಬಗ್ಗೆ ಅವರ ಯೋಚನೆ ಸಾಗುವುದೇ ಇಲ್ಲ.

ಬಿ.ಆರ್.ಲಕ್ಷ್ಮಣರಾವ್ ಅವರು ತಮ್ಮ ಕವಿತೆಗಳ ಮೂಲಕ ಶೋಧಿಸುವ ರಹಸ್ಯಗಳಲ್ಲಾ ಸಾಮಾನ್ಯ ಬದುಕಿನ ರಹಸ್ಯಗಳೇ ಆಗಿವೆ. " ನನಗೆ ಬೇಡ ಈ ಭೂಮಿಯ ಸೆಳೆತ ಮೀರಿ ದೂರ ಬಾಹ್ಯಾಕಾಶಕ್ಕೆ ಹಾರಿ ದೆಸೆಗೆಟ್ಟು ತೊಳೆಯುವ ಕ್ಷಿಪಣಿಯ ವ್ಯರ್ಥ ಛಲ ಶೂನ್ಯ ಫಲ " ಎನ್ನುತ್ತಲೇ ಯಾವುದೇ ರೀತಿಯಲ್ಲಿ ಅನುಭವದ ಆಳಕ್ಕಿಳಿಯದಕ್ಕಿಂತ, ಹೊರ ನೋಟದಲ್ಲಿ ಗುರುತಿಸುವುದೇ ಅವರಿಗೆ ಪ್ರಮುಖವಾಗುತ್ತದೆ. ಅವರ ಭಾವಗೀತೆಗಳಲ್ಲಿ ಭಾವಾವೇಶವಿಲ್ಲದ ಭಾವತೀವ್ರತೆ ನವಿರಾದ ಹಾಸ್ಯ ಮನಸ್ಸಿಗೆ ರಂಜನೆ ನೀಡುವ ಅವರ ಭಾವಗೀತೆಗಳು ಜನಪ್ರಿಯತೆ ಗಳಿಸಿರುವುದು ಅವುಗಳ ಗುಣದಿಂದಲೇ ಎಂದು ಹೇಳಬಹುದು. ನಾಗರೀಕ ಬದುಕಿನ ಮಧ್ಯಮವರ್ಗದ ಮನಸ್ಸುಗಳನ್ನು ತೆರೆದಿಡುತ್ತಾರೆ, ಲಕ್ಷ್ಮಣರಾವ್ ಅವರ ಯಾವುದೇ ಕವಿತೆ ಸುಲಭವಾಗಿ ಓದಿಸಿಕೊಂಡು ಹೋಗುತ್ತದೆ. ದ್ವಂದ್ವ ಗೊಂದಲ, ತಾರ್ಕಿಕ ಜಿಜ್ಞಾಸೆಗೆ ಒಳಪಡಿಸದ ಸರಳತೆಯೇ ಎಲ್ಲರಿಗೂ ಪ್ರಿಯವಾಗುತ್ತದೆ. ಅವರ ಕವಿತೆಗಳಲ್ಲಿ ಖುಷಿ ಕೊಡುವ ಅಂಶವೆಂದರೆ ಅವರು ಬಳಸುವ ಪ್ರಾಸ, ಸ್ಪಷ್ಟವಾಗಿ ಮೂಡುವ ಚಿತ್ರ, ಮಧ್ಯಮ ವರ್ಗದ ಬದುಕನ್ನು ಕಟ್ಟಿಕೊಡುವ ಅವರ ನಿಲುವು, ವಾಸ್ತವತೆಯಿಂದ ಕೂಡಿದ್ದು, ಪ್ರಸ್ತುತಕ್ಕೆ ಹತ್ತಿರವಾಗುತ್ತಾರೆ. ' ನನ್ನಗೀತೆ' ಇವಳು ನದಿಯಲ್ಲ ' ಎಡೆ' ಸಂಕಲನದಲ್ಲಿ ಬರುವ 'ಮಧ್ಯಸ್ಥೆ' 'ಇವಳು ನದಿಯಲ್ಲ' 'ಗುರುವಿಗೆ ಕೃತಜ್ಞತೆಯಿಂದ' 'ಪ್ರಿಸಮ್' 'ನೆಹರು ಜೈಲಿಗೆ ಹೋದದ್ದೇಕೆ? 'ನಿನಗೆ ನಾನ್ಯಾರು' 'ಹಾದರ' ಮುಂತಾದ ಕವಿತೆಗಳಲ್ಲಿ ಕವಿಯ ಭಾವ, ವ್ಯಕ್ತವಾಗಿದೆ. ಪರಂಪರೆಯನ್ನು ಒಪ್ಪಿಕೊಳ್ಳುತ್ತಲೇ ಹೊಸ ಬದುಕನ್ನು ಸ್ವೀಕರಿಸುವ ಅವರ ಕವಿತೆಗಳಲ್ಲಿ

ಪರಂಪರೆಯೊಂದಿಗೆ ಸಂಬಂಧ ಪಡೆಯಲಾಗದ ಆಧುನಿಕತೆಯೊಂದಿಗೆ ಗುರುತಿಸಿಕೊಳ್ಳಲಾಗದ ಗೊಂದಲ ಕಾಣುತ್ತದೆ.

ಬಿ.ಆರ್.ಲಕ್ಷ್ಮಣರಾವ್ ಅವರು ಪ್ರಾರಂಭದ ಕವಿತೆಗಳಲ್ಲಿ ತಮ್ಮ ಪೋಲೀತನ ಲವಲವಿಕೆ ತುಂಟತನಗಳನ್ನು ತಂದರೂ ಮುಂದಿನ ಅವರ ಕವಿತೆಗಳಲ್ಲಿ ಆತ್ಮ ವಿಮರ್ಶೆಯ, ವಿಷಾದ, ವ್ಯಂಗದ ಕಡೆಗೆ ಸಾಗುತ್ತದೆ. ಅದು ಮನಸ್ಸಿನ ಪಕ್ವತೆ ಅದರಿಂದಾಗಿ ಅವರ ಕವಿತೆಗಳು ವ್ಯಕ್ತಿಗತ ನಿಲುವಿನಿಂದ ಸಾಮಾಜಿಕತೆಯ ಕಡೆಗೆ ಹೊರಳುವುದನ್ನು ಕಾಣುತ್ತೇವೆ, ಆದರಿಂದಾಗಿಯೇ ಸಾಮಾಜಿಕವಾಗಿಯು ಲಕ್ಷ್ಮಣರಾವ್ ಪ್ರಸ್ತುತ ರಾಗುತ್ತಾರೆನ್ನಬಹುದು.

ನರಹಳ್ಳಿ ಬಾಲಸುಬ್ರಮ್ಣ್ಯ ಅವರು ಹೇಳುವಂತೆ " ಲಕ್ಷ್ಮಣರಾವ್ ಅವರ ಕಾವ್ಯ ಬೇಂದ್ರೆ ಕಾವ್ಯದಂತೆ ಅಮೃತಕ್ಕೆ ಹಾರುವ ಗರುಡನಲ್ಲ, ಅದು ಮನೆ ಮನೆಗಳಲ್ಲಿ ಎಡೆಯನ್ನು ಸ್ವೀಕರಿಸುವ ಗುಬ್ಬಚ್ಚಿಯಂತೆ ಆತಂಕ, ವಿಷಾದಗಳ, ಅತೀತದ ಕರೆಯ ನಡುವೆಯೂ ಬದುಕಿಗೆ ನಿಷ್ಠವಾಗಿ ಉಳಿಯುವ ಬದುಕನ್ನು ತೀವ್ರವಾಗಿ ಮೋಹಿಸುವ ಕಾವ್ಯ. ಆದ್ದರಿಂದ ಮಹತ್ವಾಕಾಂಕ್ಷಿಯಲ್ಲದೆಯೂ ತನ್ನ ಯೌವನದ ಮೋಹಕತೆಯಿಂದ ಸದಾಕಾಲ ಕಾವ್ಯಾಸಕ್ತರನ್ನು ಆಕರ್ಷಿಸುತ್ತಾ ಅವರನ್ನು ಬೆಚ್ಚಗಿಡುವ ಬದುಕಿನ ಬಗ್ಗೆ ಪ್ರೀತಿ ಉಕ್ಕಿಸುವ ಕಾವ್ಯ, ಅವರ ಕಾವ್ಯ ಹರಿವ ನದಿಯಲ್ಲ ಆದರ ಸೆಳೆತ, ಸುಳಿಗಳು, ರುದ್ರಮನೋಹರತೆ ಇಲ್ಲಿಲ್ಲ ಬದಲಾಗಿ ಅದು ಚಂದ್ರ ನಕ್ಷತ್ರಗಳನ್ನು ಹಿಡಿದುಕೊಡುವ ಪ್ರಶಾಂತ ಪುಟ್ಟಕೊಳ ( ಚಿಂತಾಮಣಿ ; ೨೦೦೬ ; ಪು ; ೩೬ ) ಎಂಬ ಮಾತುಗಳಲ್ಲಿ ಲಕ್ಷ್ಮಣರಾವ್ ಅವರ ಕಾವ್ಯ ಜನಪ್ರಿಯತೆಯ ಅಂಶಗಳನ್ನು ಗುರುತಿಸಬಹುದು.

ತಮ್ಮ ಕವಿತೆಗಳ ಮೂಲಕ ಕಚಗುಳಿ ಇಡುತ್ತಿದ್ದ ಕವಿ ಲಕ್ಷ್ಮಣರಾವ್ ಅವರು ಸುಲಭವಾಗಿ ಅರ್ಥವಾಗದ ಕವಿತೆ ಕವಿತೆಯೇ ಅಲ್ಲ ಎಂಬ ಇರಾದೆ ಹೊಂದಿದ್ದ ಕವಿ ತಿಂದ ಮೇಲೂ ಅರ್ಥವಾಗದ ತಿಂಡಿಯನ್ನು ಯಾಕೆ ಮೆಲ್ಲಬೇಕು ಎಂಬ ಜಾಯಮಾನದವರು, ಅವರ ಕವಿತೆಗಳು ಸುಲಭವಾಗಿ ಜೀರ್ಣಿಸಿಕೊಳ್ಳಬಲ್ಲ ಒಂದು ಸುಂದರವಾದ ನಂದನ ವನದಲ್ಲಿ ವಿಹರಿಸುವಾಗ ಆಗುವ ಸಂತೋಷ ಮೂಡುವ ಉಲ್ಲಾಸ ಇವರ ಕವಿತೆಗಳನ್ನು ಓದಿದಾಗ ಅಗುತ್ತದೆನ್ನುವ ಕುಂ–ವೀರಭದ್ರಪ್ಪ ಅವರ ಮಾತುಗಳಲ್ಲಿ ಲಕ್ಷ್ಮಣರಾವ್ ಅವರ ಕಾವ್ಯದ ಜನಪ್ರಿಯತೆಯ ಮರ್ಮವೇನೆಂದು ಸ್ಪಷ್ಟವಾಗುತ್ತದೆ. (ಚಿಂತಾಮಣಿ ; ೨೦೦೨ ; ಪು ; ೭೫)

ಬಿ.ಆರ್.ಲಕ್ಷ್ಮಣರಾವ್ ಅವರ ಕಾವ್ಯದ ಲವಲವಿಕೆ ಜಾಣ್ಮೆ ತುಂಟತನ ಇದರಿಂದಾಗಿಯೇ ಅವರ ಕಾವ್ಯ ಒಂದು ತಪ್ಪು ಕಲ್ಪನೆಗೆ ಒಳಗಾಗಿ ನರಳಿದೆ. ಗಂಭೀರ ಕವಿ ಅಲ್ಲ ಎಂಬುದು ಎಲ್ಲರೂ ಒಪ್ಪುವ ಸಾಮಾಜಿಕ , ಆಧ್ಯಾತ್ಮಿಕ, ಅತೀತವಾದ ವಸ್ತು ವಿಷಯಗಳ ಬಗ್ಗೆ ಗಂಭೀರವಾದ ರೀತಿಯಲ್ಲಿ ಬರೆದಿಲ್ಲ, ಆದರೆ ಗಂಭೀರ, ಲಘುತ್ವ ಎರಡು ಅಲ್ಲದ

ಜೀವಂತಿಕೆಯಿಂದ ಕೂಡಿದ ಕಾವ್ಯ ಅವರದು. ಕಾವ್ಯ ತತ್ವ ಸಿದ್ಧಾಂತಗಳಿಗಿಂತ ಬದುಕು ಮಹತ್ವವೆಂದು ತಿಳಿದು ಕಾವ್ಯ ಬರೆದವರು. ಅದರಿಂದಾಗಿಯೇ ಅವರ ಕವಿತೆಗಳು ಸಮಕಾಲೀನವಾಗುತ್ತವೆ. ಹನಿಗವಿತೆಗಳಲ್ಲಿ ಅವರು ಹಾಸ್ಯ ವ್ಯಂಗ್ಯ ವಿನೋದವನ್ನು ಸಾಕಷ್ಟು ತರುತ್ತಾರೆ. ಅವರ ಅನೇಕ ಕವಿತೆಗಳಲ್ಲಿ ಮನದಾಳಕ್ಕೆ ಇಳಿದು ಸಪಿರಾದ ಭಾವನೆಯನ್ನು ಹೊರಹೊಮ್ಮಿ ಖುಷಿ ನೀಡುವ. ವಿಷಾದ ನಲಿವು ನೋವುಗಳನ್ನು ಹೇಳುತ್ತಲೆ ವಿಚಾರವಂತಿಕೆ ಕಡೆಗೆ ಸೆಳೆಯುತ್ತದೆ. ಅವರ ಒಟ್ಟು ಕಾವ್ಯದಲ್ಲಿನ ಕವಿತೆಗಳು ಹೊರಹಾಕುವ ಬಾವಗಳು ನಿಲುವುಗಳ ಮೂಲಕ ಗುರುತಿಸಿಕೊಳ್ಳಬಹುದು. ಲಘು ಭಾವನೆಯ ಕವಿತೆಗಳು, ಪೋಲಿತನವನ್ನು ಪ್ರಧಾನವಾಗುಳ್ಳ, ಸಾಮಾಜಿಕ ಬದುಕಿನಲ್ಲಿ ತಲೆಮಾರುಗಳ ಅಂತರದಿಂದ ಉಂಟಾಗುವ, ತಲ್ಲಣ, ಸಂಘರ್ಷ ಜಿಜ್ಞಿಡುವ ಹೊಸ ಆಶಯದೃಷ್ಟಿಕೋನಗಳನ್ನು ಒಳಗೊಂಡ ಕವಿತೆಗಳು ವೈವಿದ್ಯಮಯವಾದ ವಸ್ತು ವಿಷಯ ವಿಭಿನ್ನ ಕೋನಗಳಿಂದಾಗಿಯೇ ಜನರನ್ನು ತಮ್ಮತ್ತ ಸೆಳೆಯುತ್ತವೆ ಎನ್ನಬಹುದು. ಭಾಷೆಯ ಸರಳತೆಯೇ ಕವಿತೆಗೆ ಅನನ್ಯತೆಯನ್ನು ತರುತ್ತದೆ ಲಕ್ಷ್ಮಣರಾವ್ ಅವರು ತಮ್ಮ ಕಣ್ಣಿಗೆ ಕಾಣುವ, ಅನುಭವಕ್ಕೆ ವೇದ್ಯವಾದುದನ್ನುಮಾತ್ರ ಹೇಳುತ್ತಾರೆ. ಕಾಣದುದನ್ನು ಕಲ್ಪನೆಯ ಮೂಲಕ ಕಟ್ಟಿಕೊಡಲು ಅವರು ಬಯಸದಿರುವುದಕ್ಕೆ ಅವರೇ ಖಚಿತವಾಗಿ ಹೇಳಿಕೊಂಡಿದ್ದಾರೆ. ಇಷ್ಟಾಗಿ ನಾನು ಬರೆದಿರುವುದು ಅಂತಹ ಹೆಚ್ಚೇನಿಲ್ಲ, ಇದಕ್ಕೆ ಮುಖ್ಯ ಕಾರಣ ನನ್ನ ಬರವಣಿಗೆಯ ಬಹುಪಾಲು ನನ್ನ ಸ್ವಂತ ಅನುಭವವಾಗಿ ಮಾತ್ರ ಬಂದಿರುವುದು. ನನ್ನನ್ನು ತೀವ್ರವಾಗಿ ಮುಟ್ಟುವ , ತಟ್ಟುವ ಅನುಭವ, ವಿಚಾರಗಳ ಬಗ್ಗೆ ಕೇವಲ ಊಹೆ, ಕಲ್ಪನೆಯಿಂದ ಬರೆಯಲು ನನಗೆ ಈವರೆಗೆ ಸಾಧ್ಯವಾಗಿಲ್ಲ ಜೊತೆಗೆ ನಾನು ತೀವ್ರ ಬಡತನ, ಹತಾಶೆ, ಶೋಧನೆ, ಕೀಳರಿಮೆ ಇತ್ಯಾದಿಗಳನ್ನು ಅನುಭವಿಸಿ, ನೊಂದು ಕ್ಷುದ್ರನಾದವನಲ್ಲ, ಬೆಂದು ಮಾಗಿದವನಲ್ಲ, ನನ್ನ ಪ್ರೇಮ ಕವಿತೆಗಳಲ್ಲಿ ವ್ಯಂಗ್ಯ ವಿಷಾದ ಕಾಣುವುದಿಲ್ಲ. ನನಗೆ ದಕ್ಕಿದ ಅನುಭವವನ್ನು ಆದಷ್ಟು ವಸ್ತುನಿಷ್ಟವಾಗಿ ಪ್ರಾಮಾಣಿಕವಾಗಿ, ಮಾನವೀಯವಾಗಿ ವಿಶ್ಲೇಷಸುವುದರಲ್ಲೇ. ನನಗೆ ನಂಬಿಕೆ ಎನ್ನುವ ಅವರ ಮಾತುಗಳಲ್ಲಿ ಅವರ ಕಾವ್ಯದ ಒಟ್ಟು ನೋಟ ಯಾವ ಪರಿಧಿಯೊಳಗೆ ಸಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಅವರ ಕವಿತೆಗಳಲ್ಲಿ ಅಂತರಂಗ ಪರಿಶೀಲನೆ, ಆತ್ಮ ವಿಮರ್ಶೆ ಸಾಮಾಜಿಕ ಸಂಬಂಧಗಳ ಸ್ವರೂಪ, ಮನುಷ್ಯ ಸಂಬಂಧಗಳ ಸ್ವರೂಪವನ್ನು ತಿಳಿಸುತ್ತಾ ಜೀವಪರ ನೆಲೆಯನ್ನು ಕಾಣುತ್ತೇವೆ. ತಿಳಿಯಾದ ಭಾಷೆಯಲ್ಲಿ ಸರಳವಾದ ಶೈಲಿಯಲ್ಲಿ ವಿಷಯದ ಪ್ರತಿಪಾದನೆ ಲವಲವಿಕೆ, ಪೋಲಿತನಗಳಿಂದ ಖುಷಿ ನೀಡುವ ವಿವೇಚನೆಯ ಕಡೆಗೆ ಸಾಗುತ್ತಾ ಭ್ರಮನಿರಶನ, ಹಾಸ್ಯ, ವ್ಯಂಗ್ಯ ವಿಡಂಬನೆಗಳನ್ನು ವ್ಯಕ್ತಪಡಿಸುವ ಅವರ ಕಾವ್ಯದ ಶೈಲಿಯೇ ಜನಪ್ರಿಯತೆಗೆ ಕಾರಣವಾಗುತ್ತದೆ. ಕಾವ್ಯ ಜನರಿಗೆ ತಲುಪುವುದು ಮುಖ್ಯವೆನ್ನುವುದು ಅವರ ಪ್ರಮುಖವಾದ

ಉದ್ದೇಶ ಅದಕ್ಕಾಗಿ ಅವರು ತಮ್ಮದೇ ಆದ ವಿಶಿಷ್ಟ ಶೈಲಿಯ ಬರಹದ ಮೂಲಕ ಜನರ ಮನಸ್ಸನ್ನು ಮುಟ್ಟಿದ್ದಾರೆ ತಟ್ಟಿದ್ದಾರೆಂದು ಹೇಳಬಹುದಾಗಿದೆ. ವಿಮರ್ಶೆಯ ಯಾವ ಹಂಗಿಗೂ ಒಳಗಾಗದೆ ಬರೆಯುವ ಮೂಲಕ ಜನ ಮೆಚ್ಚುಗೆ ಗಳಿಸಿದ್ದಾರೆಂದು ಗುರುತಿಸಬಹುದು. ಲಕ್ಷ್ಮಣರಾವ್ ಅವರು ಇತರ ಭಾಷೆಯ ಕವಿಗಳ ಪ್ರಭಾವಕ್ಕೆ ತಮ್ಮನ್ನು ಒಡ್ಡಿಕೊಳ್ಳುತ್ತಾರೆ. ಅದಕ್ಕೆ ಅವರ ಕವನ ಸಂಕಲನಗಳಲ್ಲಿ ಅನುವಾದಿತ ಕವಿತೆಗಳು ಇವೆ. ಅವುಗಳನ್ನು ಸಶಕ್ತವಾದ ರೀತಿಯಲ್ಲೇ ಅನುವಾದ ಮಾಡಿದ್ದಾರೆ.

ಒಟ್ಟಿನಲ್ಲಿ ಜಿ.ಆರ್.ಲಕ್ಷ್ಮಣರಾವ್ ಅವರ ಕಾವ್ಯ ನಿತ್ಯದ ನಗರ ಜೀವನದ ಭಾಷೆಯಲ್ಲಿ ಮಧ್ಯಮವರ್ಗದ ಜನರ ಜೀವನ ದೃಷ್ಟಿ ಧೋರಣೆ ಪ್ರೇಮ, ಕಾಮ. ವ್ಯಂಗ್ಯ ವಿನೋದಗಳನ್ನು ತಮ್ಮ ಅನುಭವದ ಅಭಿವ್ಯಕ್ತಿಯ ಮೂಲಕ ಶಕ್ತವಾಗಿ ಕಟ್ಟಿಕೊಡುತ್ತದೆ ಅದು ಜನರನ್ನು ತಟ್ಟಿದೆ. ಹಾಗೆಯೇ ಮೆಚ್ಚುಗೆಯನ್ನು ಪಡೆದಿದೆ ಎಂಬುದು ಸ್ಪಷ್ಟವಾಗುತ್ತದೆ. ಪ್ರಸ್ತುತದ ವಸ್ತು ವಿಷಯವನ್ನು ಭೂತದೊಂದಿಗೆ ಇಲ್ಲವೆ ಪೌರಾಣಿಕ ನೆಲೆಯಲ್ಲಿಟ್ಟು ಅದು ವರ್ತಮಾನಕ್ಕೆ ಹತ್ತಿರವಾಗುವಂತೆ ಮಾಡಿರುವ ಅವರ ಕವಿತೆಗಳ ವೈಶಿಷ್ಟತೆಗಳು ಜನರಿಗೆ ಆಪ್ತವಾದ, ಆತ್ಮೀಯತೆಯ ಭಾವವನ್ನು ಉಂಟು ಮಾಡುತ್ತದೆ.

ಜಿ.ಆರ್.ಲಕ್ಷ್ಮಣರಾವ್ ಅವರ ಕಾವ್ಯದಲ್ಲಿ ವ್ಯಕ್ತಿ ಚಿತ್ರಣ ನೀಡುವ ಕವಿತೆಗಳು ಪ್ರಮುಖವಾದವುಗಳು, ಪಿ. ಸೀನ' ' ಏಟ್ಸ್ ನೆನಪಿಗಾಗಿ' ' ಸಂವಾದ' ' ಕೊಲಂಬಸ್ ' ' ಗುಂಡಪ್ಪ ವಿಶ್ವನಾಥ್' ಕ್ವಿಕೋಟನ ಕೊನೆಯ ದಿನಗಳು ' ವಿದಾಯ ' ರಿಪ್‌ವ್ಯಾನ್‌ವಿಂಕಲ್' ನೆಹರೂ ಜೈಲಿಗೆ ಹೋದದ್ದೇಕೆ ' ನನ್ನ ಗಾಂಧಿ' ' ವ್ಯತ್ಯಾಸ' ' ಗೆಲಿಲಿಯೋ' ' ಬಿಡುಗಡೆ' ' ಗುರುವಿಗೆ ಕೃತಜ್ಞತೆಯಿಂದ ' ಗೊಂದಲ' ' ಯೂಲಿಸಿಸ್' ಮೊದಲಾದ ಕವಿತೆಗಳಲ್ಲಿ ಕಲೆ, ಸಾಹಿತ್ಯ ಸಾಮಾಜಿಕ ಸಾಂಸ್ಕೃತಿಕ , ಐತಿಹಾಸಿಕ ವ್ಯಕ್ತಿ ವಿಷಯಗಳ ಬಗ್ಗೆ ಬೆಳಕು ಬೀರುತ್ತಾರೆ. ಸಾಧಕರ ಸಾಧನೆಯ' ಜೊತೆಗೆ ಅದು ಇಂದು ಯಾವ ನೆಲೆಗೆ ತಲುಪಿದೆ ಎಂಬುದನ್ನು ಕುರಿತ ಅವರ ಚಿಂತನೆಗಳು ಗಂಭೀರತೆಯೆಡೆಗೆ ಓದುಗರನ್ನು ಸೆಳೆಯುತ್ತವೆ ಎಂದು ಗುರುತಿಸಬಹುದು. ಪಿ.ಸೀನ ಗೀತೆಯಲ್ಲಿ ಶಾಸ್ತ್ರೀಯ ಮತ್ತು ಆಧುನಿಕ ಸಂಗೀತಗಳ ಮುಖಾ ಮುಖಿಯಲ್ಲಿ ಶಾಸ್ತ್ರೀಯ ಸಂಗೀತದ ನಲುಗುವಿಕೆ ಹೊಸ ಅಲೆಯ ಸಂಗೀತದಲ್ಲಿ ಮರೆಯಾಗುವ ಬಗೆಗಿನ ವಿಷಾದ ತರುತ್ತಾರೆ. ಗುಂಡಪ್ಪ ವಿಶ್ವನಾಥ್, ಕ್ವಿಕೋಟನ ಕೊನೆಯ ದಿನಗಳು ಇವುಗಳಲ್ಲಿನ ಭ್ರಮನಿರಶನ ಮತ್ತು ವಿಷಾದ ಓದುಗರನ್ನು ಚಿಂತನೆಗೆ ಎಳೆಯುತ್ತವೆ. ಗಾಂಧೀಜಿ, ಮದರ್ ತೇರೇಸಾ, ಅಟ್ಲಾಸ್, ನೆಹರೂ ಮುಂತಾದವರ ಬದುಕಿನ ಮಹತ್ತಾದ ವಿಷಯಗಳ ಬಗ್ಗೆ ಕೆದಕುತ್ತಲೇ ನಮ್ಮಲ್ಲಿನ ಅರೆ ಕೊರೆಗಳನ್ನು ಒತ್ತಿ ಹೇಳುವ ಕವಿಯ ನಿಲುವು ಪ್ರಮುಖವಾಗಿವೆ ಎಂದು ಹೇಳಬಹುದು. ಲಂಕೇಶ್ ತಮ್ಮ ಸಾಹಿತ್ಯ ಗುರುವೆಂದು ತಿಳಿದ ಕವಿ ಅವರ ವ್ಯಕ್ತಿತ್ವ

ಪರಿಚಯದ ಮೂಲಕ ಉಳಿದವರಿಗೆ ಹೇಗೆ ಅವರು ಮಾರ್ಗದರ್ಶಕರಾಗಿದ್ದಾರೆಂದು ನೆನೆಯುವ ಭಾವ ಮುಖ್ಯವಾಗಿದೆ. ಇವುಗಳ ಮೂಲಕ ಕವಿ ಕೇವಲ ಪ್ರೀತಿ - ಪ್ರೇಮ ಪ್ರಣಯ, ಹಾಸ್ಯ ವಿಡಂಬನೆಯಲ್ಲೇ ಉಳಿಯದೆ ಸಾಮಾಜಿಕ ಬದುಕಿನಲ್ಲಿ ಸಾರ್ವಜನಿಕರಾಗಿ ಬಾಳಿ ಹೋದವರ ಬದುಕಿನ ಬಗೆಗಿನ ಚಿಂತನೆಗಳನ್ನು ತಮ್ಮ ಕವಿತೆಗಳ ಮೂಲಕ ಓದುಗರಿಗೆ ಹೇಳುವ ರೀತಿ ವಿಶಿಷ್ಟವಾಗಿದೆ ಎನ್ನಬಹುದು.

ಅವರು ಅನುವಾದಿತ ಕವಿತೆಗಳನ್ನು ರಚಿಸಿದ್ದಾರೆ ಸಂಕಲನದ ಕೊನೆಗೆ ಅನುವಾದಿತ ಕವಿತೆಗಳನ್ನು ಕಾಣಬಹುದು. 'ನಿಂಬೆಗಿಡ' 'ಮರ' 'ಪ್ರಾರ್ಥನೆ' ಜುಟ್ಟು' 'ಆಟಗಳು' 'ಭಗ್ನ ಪ್ರತಿಮೆಗಳು' 'ಏಟ್ಸ್ ನೆನಪಿಗಾಗಿ' 'ಎರಡು ಪ್ರಶ್ನೆಗಳು' 'ನಡುವಯಸ್ಸಿನಲ್ಲಿ' 'ಕಾಗದದ ನಕ್ಷತ್ರಗಳು' 'ರುಬಾಯತ್' ಬರ್ಬರರ ನಿರೀಕ್ಷೆಯಲ್ಲಿ ಇತ್ಯಾದಿ ಕವಿತೆಗಳಲ್ಲಿ ಅವರ ಅನುವಾದವು ಅನುವಾದವೆನ್ನಿಸದ ಹಾಗೆ ಸಹಜವಾಗಿ ಮೂಡಿ ಬಂದಿದೆ. 'ನಿಂಬೆಗಿಡ' ಕವಿತೆಯನ್ನು ಸ್ವತ: ಹಾಡುಗಾರರಾಗಿರುವ ಲಕ್ಷ್ಮಣರಾವ್ ಅವರು ಪ್ರತಿಬಾರಿ ಹಾಡಿದಾಗಲೂ ಪ್ರೇಕ್ಷಕರ ಮೆಚ್ಚುಗೆ ಗಳಿಸುವುದು ಗಮನಾರ್ಹವಾಗಿವೆ.

'ರಜನೀಶರ ನಿಜಮುಖ' ಅನುವಾದಿತ ಕೃತಿಯಲ್ಲಿಯೂ ರಜನೀಶ ಜೀವನ ಮತ್ತು ಚಳುವಳಿಯನ್ನು ಕುರಿತ ಚಿತ್ರಣದಲ್ಲಿ ಸಹಜವಾಗಿ ರಜನೀಶರಂಥಹ ಪ್ರಸಿದ್ಧ ಪ್ರಭಾವಿ ವ್ಯಕ್ತಿಯ ಬಗ್ಗೆ ಚಿಂತನೆಗೆ ಹಚ್ಚುವ ರೀತಿಯ ಬರಹವನ್ನು ತಂದಿರುವುದು ಪ್ರಮುಖವೆಂದು ಹೇಳಬಹುದು. ಬಿ.ಆರ್. ಲಕ್ಷ್ಮಣರಾವ್ ಅವರ ಕಥೆ, ಕಾವ್ಯ, ಕಾದಂಬರಿ, ಅನುವಾದ ಕೃತಿಗಳ ವಿಶ್ಲೇಷಣೆಯ ಮೂಲಕ ಅವರ ಜನಪ್ರಿಯತೆಯ ಮಹತ್ವವನ್ನು ಗುರುತಿಸಲಾಗಿದೆ. ಹಾಗೆಯೇ ಸರಳ ಸಾಮಾನ್ಯ ನಿರೂಪಣೆಯ ಮೂಲಕವೇ ಗಂಭೀರ ಚಿಂತನೆಯೂ ಅವರ ಸಾಹಿತ್ಯದಲ್ಲಿ ಹೇಗೆ ವ್ಯಕ್ತವಾಗಿದೆ ಎಂದು ಗುರುತಿಸಬಹುದು. ಲಕ್ಷ್ಮಣರಾವ್ ಅವರ ಕಾವ್ಯದ ಕೆಲವು ಮಿತಿಗಳಿಂದಾಗಿ ಅವರು ಗಂಭೀರ ಚಿಂತನೆಯ ಕವಿಗಳಲ್ಲವೆಂಬ ಮಾತಿದೆ. ಆದರೆ ಅದೇ ಅವರ ಕಾವ್ಯ ಪ್ರತಿಭೆಯ ವಿಶಿಷ್ಟತೆಯಾಗಿದೆ ಎಂದು ಹೇಳಬಹುದು.

ಅವರು ಕ್ಯಾಸೆಟ್‌ಗಾಗಿ ಹಲವು ಗೀತೆಗಳನ್ನು ಬರೆದು ಪ್ರಸಿದ್ಧರಾಗಿರುವುದರಿಂದ ಅವರನ್ನು ಗಂಭೀರ ಕವಿಗಳಲ್ಲವೆಂದು ಹೇಳುವುದಾದರೂ ಗಂಭೀರ ಕವಿಗಳ ಗೀತೆಗಳ ಧ್ವನಿ ಸುರುಳಿಯ ಮೂಲಕ ಜನಪ್ರಿಯತೆ ಗಳಿಸಿರುವುದು ಇವೆ. ಅವರ ಕವಿತೆಗಳು ತನ್ನ ಹೊರಮೈಯಲ್ಲೇ ಕೊಡುವ ಸುಳಿವುಗಳೇ ಜನಪ್ರಿಯತೆಗೆ ಕಾರಣವಾಗಿದೆ ಎಂದು ಹೇಳಬಹುದು. ಹಾಡುಗಾರರಾಗಿರುವ ಲಕ್ಷ್ಮಣರಾವ್ ರವರಿಗೆ ಅವರ ಬರಹವು ಸಂಗೀತಕ್ಕೆ ಒಗ್ಗುವ ರೀತಿಯಲ್ಲಿರುವುದು ಸಹಜವೆನ್ನಬಹುದು. ಸಾಮಾನ್ಯ ಜನರಿಗೂ ಬಹಳ ಬೇಗ ತಲುಪುವುದು ಅವುಗಳ ಸರಳತೆಯ ಹೊರಮೈಮಾಟದಿಂದಲೇ ಎಂದು ಹೇಳಬಹುದು. ಸಾಹಿತ್ಯಕ ಮತ್ತು

ಸಾಮಾಜಿಕ ಸವಾಲುಗಳನ್ನು ಸಶಕ್ತವಾದ ರೀತಿಯಲ್ಲಿ ಕಟ್ಟಿಕೊಡಬಲ್ಲವು ಎಂಬುದು ' ಟುಟಟಾರ ' ಲಿಲ್ಲಿ ಪುಟ್ಟಿಯ ಹಂಬಲ' ದ ಕವಿತೆಗಳಲ್ಲಿ ವ್ಯಕ್ತವಾಗುತ್ತದೆ. ಕವಿತೆಗಳಲ್ಲಿ ವ್ಯಕ್ತವಾಗುವ ಕಥನ ಶೈಲಿಯು ಓದುಗರ ಮೆಚ್ಚುಗೆ ಗಳಿಸುತ್ತದೆ. 'ಭ್ರಮೆ' ಕವಿತೆಯಲ್ಲಿ ' ಜಾಕಬ್ – ರಾಶೆಲ್ಲಳ ' ಪ್ರೇಮಕಥೆ ಆಧರಿಸಿದ ಜಾನಪದ ಕಥನಶೈಲಿ ಕವಿಯ ಭಾವದಲ್ಲಿ ವಿಶಿಷ್ಟವಾಗಿ ಮೂಡಿ ಬಂದಿದೆ. ಕವಿತೆ ಓದುಗರಿಗೆ ಮೆಚ್ಚುಗೆಯಾಗುತ್ತದೆ.

ಬಿ.ಆರ್. ಲಕ್ಷ್ಮಣರಾವ್ ರವರ ಕವಿತೆಗಳು ಜನಪ್ರಿಯತೆಗೆ ಹೇಗೋ ಹಾಗೇ ಗಂಭೀರತೆ ಕಡೆಗೂ ಸಾಗುವ ಚಿಂತನೆಗೆ ಎಡೆ ಮಾಡಿಕೊಡುವ ಅವರ ' ಗೋಪಿಗಾಂಡಲೀನ' 'ಲಿಲ್ಲಿ ಪುಟ್ಟಿಯ ಹಂಬಲ' 'ಜೇಲಿ', 'ವರ್ತಮಾನ' 'ಗುಂಡಪ್ಪ ವಿಶ್ವನಾಥ್' 'ಅಮ್ಮ' ಫೋಟೋಗ್ರಾಫರ್ ಕ್ವಕ್ಲೋಟನ ಕೊನೆಯದಿನಸಗಳು, 'ಶಾಂಗ್ರಿಲಾ' 'ಪರಿಧಿ' ನನ್ನ ಗಾಂಧಿ' 'ಸಂಧಿಗ್ಧ' 'ನೆಹರು ಜೈಲಿಗೆ ಹೋದದ್ದೇಕೆ' 'ಯೂಲಿಸಿಸ್' 'ರಿಪ್‌ವ್ಯಾನ್ ವಿಂಕಲ್ ಇತ್ಯಾದಿ ಕವಿತೆಗಳಲ್ಲಿ ಗಂಭೀರತೆಯ ಕಡೆಗೆ ಓದುಗರನ್ನು ಸೆಳೆಯುವುದನ್ನು ಕಾಣಬಹುದಾಗಿದೆ. ಕವಿತೆಗಳಲ್ಲಿ ಕಂಡುಬರುವ ಗಹನತೆ, ವೈಚಾರಿಕತೆ, ಭಾವುಕತೆ, ಕಲೆಗಾರಿಕೆ, ಕವಿಯ ಕವಿತಾ ಸಾಮರ್ಥ್ಯದ ಗಟ್ಟಿತನದಿಂದಾಗಿ ಅವು ಗಂಭೀರ ಓದಿಗೆ ನಿಲುಕುವ ಕವಿತೆಗಳೆಂದು ಹೇಳಬಹುದು. ಕೇವಲ ಸರಳತೆ, ಹಾಸ್ಯ, ತುಂಟತನದಲ್ಲಿ ಕವಿಯ ಕಾವ್ಯ ಮುಳುಗಿ ಹೋಗದೇ ಗಂಭೀರ ಚಿಂತನೆಯ ಅಂಶಗಳಾದ ದೇವರು. ಧರ್ಮ. ರಾಜಕೀಯದಂತಹ ವಿಷಯಗಳನ್ನು ಕುರಿತು ವ್ಯಂಗ್ಯ ವಿಡಂಬನೆಯನ್ನು ವಿಷಾದ ಯುಕ್ತವಾದ ಕವಿತೆಗಳಲ್ಲಿ ಗುರುತಿಸಬಹುದು. 'ಶ್ಯಮಂತಕ್' 'ಶಾಂಗ್ರೀಲಾ' 'ಅಪ್ಪ' ನಗರವಿಹಾರ' 'ಅದೇ ಹಾಡು' 'ಏನೀ ಅದ್ಭುತವೇ' 'ದೇವರಿಗೆ ನಮಸ್ಕಾರ' ಕವಿತೆಗಳಲ್ಲಿ ಕಾಣಬಹುದು. ಸಾಮಾಜಿಕ ಅಥವಾ ಆಧ್ಯಾತ್ಮಿಕ, ಇಲ್ಲವೆ ಇಹದ ಬದುಕಿನಾಚೆಗಿನ ವಿಷಯಗಳ ಬಗ್ಗೆ ಗಂಭೀರವೆಂದು ಪರಿಬಾವಿಸುವ ನೆಲೆಯಲ್ಲಿ ಬರೆಯದೆ ಹೋದರು ಸರಳತೆಯ ಮೂಲಕವೇ ಅದನ್ನು ಸಾಧಿಸಿದ್ದಾರೆ. ಪ್ರೀತಿ, ಪ್ರೇಮದ ಭಾವ ಅವರ ಭಾವಗೀತೆಗಳಲ್ಲಿ ಭಾವಪೂರ್ಣವಾಗಿ ಹೊರಹೊಮ್ಮುವ ಮೂಲಕ ಅದು ಜನಪ್ರಿಯತೆ ಸಾಧಿಸಿದೆ. ಪ್ರೀತಿಯ ಅನನ್ಯತೆ, ಈ ಭೂಮಿಯ ಸೆಳತ, ಅಮ್ಮನ ಮಮತೆಯ ಬಗ್ಗೆ ವರ ತುಡಿತ 'ಅಮ್ಮ' ಕವಿತೆಯಲ್ಲಿ 'ಕಟ್ಟಕಡೆಯ ಸೊನ್ನೆ ಸುತ್ತಿದಾಗ, ಜೀವ ಬತ್ತಿದಾಗ ಅಮ್ಮನನ್ನು ಬೆಚ್ಚನೆಯ ಹೃದಯಗಳನ್ನು ಈ ಭೂಮಿಯನ್ನು ಮನಸ್ಸು ಬಯಸುತ್ತದೆ" ಎನ್ನುವಲ್ಲಿ ಪ್ರೀತಿಯ ಅಧಮ್ಯ ಶಕ್ತಿಯನ್ನು ಕುರಿತ ಅವರ ಈ ಸರಳ ಭಾವವೇ ಗಂಭೀರ ಚಿಂತನೆಗೂ ದಾರಿಯಾಗುತ್ತದೆಂಬುದು ಮುಖ್ಯವಾಗುತ್ತದೆ.

ಇವುಗಳಿಂದಾಗಿ ಅವರ ಕಥೆ ಕಾವ್ಯ ಕಾದಂಬರಿಯಲ್ಲಿ ವ್ಯಕ್ತವಾಗುವ ವಸ್ತು ವಿಷಯಗಳಲ್ಲಿ ಗಂಭೀರ ಮತ್ತು ಜನಪ್ರಿಯ ಅಂಶಗಳ ಸಮನ್ವಯ ಹೇಗೆ ಸಾಧಿತವಾಗಿದೆ

ಎಂಬುದು ಸ್ಪಷ್ಟವಾಗುತ್ತದೆ. ಸೂಕ್ಷ್ಮ ಗ್ರಹಿಕೆ ಕಲಾವಂತಿಕೆಯಿಂದ ಕೂಡಿದ ಕಥೆಗಳು, ಹಾಗೆಯೇ ವಸ್ತು ಪ್ರಧಾನ, ಭಾವ ಪ್ರಧಾನ, ನಾಟ್ಯ ಪ್ರಧಾನ ಗುಣಗಳಿಂದ ಅಭಿವ್ಯಕ್ತವಾಗುವ, ಎಲ್ಲರೂ ಒಪ್ಪುವ, ಎಲ್ಲರೂ ಹಾಡಬಹುದಾದ ಹಾಡುಗಳಾಗಿರುವ ಅವರ ಭಾವಗೀತೆಗಳು, ಅವರ ಸಾಹಿತ್ಯ ಮೇಲ್ನೋಟಕ್ಕೆ ಸರಳವಾಗಿ ಕಾಣಿಸಿದರೂ ಅವುಗಳ ಹಿಂದಿನ ಗಾಢವಾದ ನೋವು ವಿಷಾದ, ಗಂಭೀರತೆಗೆ ಸೆಳೆಯುತ್ತವೆ. ಸಾಹಿತ್ಯ ಜೀವಪರ, ಜನಪರ ಎಂಬುದಕ್ಕೆ ಅವರ ' ದಾಖಲೆ' ನಾನು ಕೊಂದ ಯುವಕ, ಕತೆಗಳನ್ನು ದಾಖಲಿಸಬಹುದು ಅವರ ಕವಿತೆಗಳು ಪೂರ್ಣ ಗಾಂಭೀರ್ಯವು ಅಲ್ಲದ ಅತ್ತ ಪೂರ್ಣ ಲಘುತ್ವವು ಅಲ್ಲದ ಜೀವಂತಿಕೆಯ ಕಡೆಗೆ ಸಾಗುತ್ತದೆ. ಅವರ ಕವನದ ಸಾಲುಗಳಲ್ಲಿ ಶೀರ್ಷಿಕೆಗಳಲ್ಲಿ ಬಳಸುವ ಅನ್ಯ ಭಾಷೆಯ ಪದಗಳು ಅನ್ಯ ಐತಿಹ್ಯದ ಪರಿಕಲ್ಪನೆಗಳನ್ನು ಕನ್ನಡ ವಾಗಿಸುವ ರೀತಿಯು ಜನಪ್ರಿಯ ಮತ್ತು ಗಂಭೀರ ಚಿಂತನೆಗಳಿಗೆ ಸಾಕ್ಷಿಯಾಗುತ್ತವೆ. ಕವನದ ಸಾಲುಗಳಲ್ಲಿ ಬಳಸುವ ಇಂಗ್ಲೀಷ್ ಪದ ಬಳಕೆ ಗೋಪಿ ಮತ್ತು ಗಾಂಡಲಿನ ಕವನದ ಸಾಲುಗಳಲ್ಲಿ ಬರುವ ರಿಪೋಲಿನಿಶೆ ಜಾಸ್‌ಗಾನ, ಬಾಂಗೋತಾನ, ಕ್ಯಾಬರೆ ನಿಯಾನಕಣ್ಣುಗಳು, ಟೋನಿ ಕರ್ಟೀಸ್ ನಗೆ, ನೆಗೆಟಿವ್‌ಗಳು, ನನ್ನ ನಡು V ನಲ್ಲಿ 'ಟುವಟಾರ' . 'ಶಾಂಗ್ರೀಲಾ' ಲೋಲೀಟಾ, ಸಿಂದಾಬಾದ್, ಗಲಿವರ್ ಕೋಲಂಬಸ್, ಇವುಗಳು ಅವರ ಕಾವ್ಯ ಪ್ರತಿಭೆಯ ವಿಶಿಷ್ಟತೆಯಲ್ಲಿ ಪ್ರಮುಖವಾಗುವ ಮೂಲಕ ಕವಿತೆಯ ಅರ್ಥವಿಸ್ತಾರವನ್ನು ಅನನ್ಯಗೊಳಿಸುತ್ತವೆ.

ಜಿ.ಆರ್. ಲಕ್ಷ್ಮಣರಾವ್ ಅವರು ತಮ್ಮ ಕಥೆ, ಕಾವ್ಯ, ಕಾದಂಬರಿಯಲ್ಲಿ ಅಭಿವ್ಯಕ್ತವಾಗುವ ವಸ್ತು, ವಿಷಯ, ಶೈಲಿ, ಸರಳತೆ, ಆಕರ್ಷಕವಾಗಿ ನಿರೂಪಿಸುವ ಸನ್ನಿವೇಶ, ಪಾತ್ರಗಳು, ಘಟನೆಯ ವಿವರಗಳು, ಪ್ರೀತಿ ಪ್ರೇಮದ ಭಾವನೆಯ ಅಭಿವ್ಯಕ್ತಿ, ಹೆಣ್ಣನ್ನು ಕುರಿತ ಅವರ ಚಿಂತನೆಗಳು, ವೈಯಕ್ತಿಕ ಅನುಭವಗಳನ್ನು ಮುಕ್ತವಾಗಿ ಹೊರಹಾಕುವ ವೈಶಿಷ್ಟಗಳು, ವಿಷಾದ ವಿನೋದವನ್ನು ಬೆರಸಿ ಹೇಳುವ ವಿಶಿಷ್ಟ ಕ್ರಮ, ಲವಲವಿಕೆ ತುಂಟತನ, ಚೇಷ್ಟೆಯ ಮೂಲಕ ಖುಷಿ ಕೊಡುವ ಅಂಶಗಳಿಂದಾಗಿ ಅವರನ್ನು ಜನಪ್ರಿಯ ಕವಿಯೆಂದು ಗುರುತಿಸಬಹುದು ಹಾಗಾಗಿ ಅವರ ಸಾಹಿತ್ಯವನ್ನು ದ್ವಿತೀಯ ದರ್ಜೆಯ ಸಾಹಿತ್ಯವೆಂದು ಪರಿಗಣಿಸುವುದಕ್ಕಿಂತ ಇವುಗಳನ್ನೆಲ್ಲ ಕಾವ್ಯಾತ್ಮಕತೆಯ ಅಸ್ವಾದನೆಯ ನೆಲೆಯಿಂದ ನೋಡುವುದೇ ಇಲ್ಲಿ ಪ್ರಧಾನವಾಗಿದ್ದು, ಅವರ ಸಾಹಿತ್ಯದಲ್ಲಿ ಜನಪ್ರಿಯತೆಯ ಜೊತೆಗೆ ಹೇಗೆ ಗಂಭೀರ ಅಂಶಗಳು ಸೇರಿವೆ ಎಂಬುದನ್ನು ಗುರುತಿಸಲಾಗಿದೆ. ಹಾಗೆಯೇ ಅವರನ್ನು ವಿಮರ್ಶೆಯ ನೆಲೆಯಲ್ಲಿ ಜನಪ್ರಿಯ ಕವಿ ಎನ್ನುವುದರಿಂದ ಹೊರಗಿಟ್ಟು ನೋಡುವುದರ ಮೂಲಕ ಅವರ ಸಾಹಿತ್ಯದ ಅನನ್ಯತೆ ಮತ್ತು ಬರಹದ ಮಹತ್ವನ್ನು ಗುರುತಿಸಿಕೊಳ್ಳಲಾಗಿದೆ.

" ಲಕ್ಷ್ಮಣರಾವ್ ಶ್ರೇಷ್ಠತೆ, ಗಾಂಭೀರ್ಯ ಮಹತ್ವಾಕಾಂಕ್ಷೆ ಎಂಬಂತಹ ಸಂಗತಿಗಳಿಗೆ ತಲೆ ಕೆಡಿಸಿಕೊಳ್ಳದ ಕವಿ. ನವ್ಯ ಕಾವ್ಯ ಬುದ್ಧಿಯ ಸಂಭ್ರಮದಲ್ಲಿದ್ದಾಗ ಅದರ ಹಿಂದಿನ ಕನ್ನಡ ಕಾವ್ಯ ಪರಂಪರೆಯ ತಿಳುವಿನೊಂದಿಗೆ ನವ್ಯಕ್ಕೆ ಹತ್ತಿರವಿದ್ದ ಅವರ ಮನೋಭಾವಕ್ಕೆ ಭಿನ್ನವಾದ ನವ್ಯದ ಭೂಮಿಕೆಯಲ್ಲಿ ಕಾವ್ಯ ರಚನೆ ಮಾಡಿದವರು, ನವ್ಯ ಕಾವ್ಯ ವೈಚಾರಿಕತೆಯ ಭಾರದಲ್ಲಿ ಸೊಂಟ ಹುಳುಕಿ ಬಾತುಕೊಂಡು ಸಹಜ ಬಳುಕನ್ನು ಕಳೆದುಕೊಂಡಿದ್ದಾಗ ಅದಕ್ಕೆ ಕಚಗುಳಿಯಿಟ್ಟು ಬಳುಕುವಂತೆ ಕವಿತೆಗಳನ್ನು ಬರೆದರು. ಈ ಕಚಗುಳಿಯಲ್ಲಿ ಪ್ರಣಯದ ಮಧುರ ಯಾತನೆ ಕಾಮದ ನರುಗಂಪು ಒಂದಷ್ಟು ತುಂಟತನ ಇಟ್ಟರು. ಸಾಮಾಜಿಕ ಬದುಕಿಗೆ ಒರಳುವಾಗ ವಿಷಾದ ವಿಡಂಬಣೆ, ವ್ಯಂಗ್ಯ ವಕ್ರೋಕ್ತಿಗಳನ್ನು ತಂದುಕೊಂಡರು ಬದುಕಿನ ಸಾಮಾನ್ಯ ಸಂಗತಿಗಳಿಗೂ ಸ್ಪಂಧಿಸಿ ಅನುಭವಕ್ಕೆ ಬಂದಂತೆ, ಅನುಭವಿಸಿದಂತೆ ತನ್ನ ಕಾವ್ಯ ಇರಬೇಕೆಂಬ ಧೋರಣೆಯಲ್ಲಿ ತನ್ನ ಅನುಭವವಿದು, ಅದರಿಂದ ಮೂಡಿದ ಕಾವ್ಯ ಇದೆಂದು, ಇದು ಅಗುವುದೇ ಹೀಗೆಂದು ಸಂಕೋಚವಿಲ್ಲದೆ ಕಾವ್ಯದ ಮೂಲಕ ಹೇಳಿದರು. ಹಾಡುಗವಿತೆ ಬರೆಯುವುದು ಕವಿಯ ಸೋಲು ಎಂಬ ಅಭಿಪ್ರಾಯವಿದ್ದಾಗಲೇ ಹಾಡು ಕವಿತೆಗಳನ್ನು ಬರೆದರು. (ಚಿಂತಾಮಣಿ ; ೨೦೦೬ ; ಪು ; ೨೧೧-೨೧೨) ಎನ್ನುವ ಸ.ರಘುನಾಥರ ಮಾತುಗಳಿಂದ ಜಿ.ಆರ್. ಲಕ್ಷ್ಮಣರಾವ್ ರವರು ತಮ್ಮ ವಿಶಿಷ್ಟವಾದ ಶೈಲಿಯ ಮೂಲಕವೇ ಜನಪ್ರಿಯತೆ ಹಾಗು ಗಂಭೀರ ಅಂಶಗಳೆರಡರ ಸಮನ್ವಯತೆ ಸಾಧ್ಯವಾಗಿದೆ. ಆ ಮೂಲಕ ಅವರ ಸಾಹಿತ್ಯ ಹೇಗೆ ಜನಪ್ರಿಯವಾಗಿದೆ ಎಂದು ಗುರುತಿಸಲು ಸಹಕಾರಿಯಾಗುತ್ತದೆ.

"ಸಾಹಿತ್ಯ ಮತ್ತು ಜನಪ್ರಿಯತೆ; ಬಿ.ಆರ್. ಲಕ್ಷ್ಮಣರಾವ್ ಅವರ ಸಾಹಿತ್ಯವನ್ನು ಅನುಲಕ್ಷಿಸಿ" ಎಂಬ ವಿಷಯವನ್ನು ಕುರಿತು ಕೈಗೊಳ್ಳಲಾದ ಪ್ರಸ್ತುತ ಅಧ್ಯಯನವು ತತ್ಸಂಬಂಧವಾದ ಎಲ್ಲಾ ಪ್ರಶ್ನೆಗಳಿಗೂ ಉತ್ತರವನ್ನು ಕಂಡುಕೊಳ್ಳುವಲ್ಲಿ ಯಶಸ್ವಿಯಾಗಿದೆ ಎಂದು ಹೇಳಲಾಗದು. ಅಧ್ಯಯನ ಪೂರ್ವದಲ್ಲಿದ್ದ ಕೆಲವು ಪ್ರಶ್ನೆಗಳಿಗೆ ಅಧ್ಯಯನದಿಂದ ತಕ್ಕ ಮಟ್ಟಿನ ಉತ್ತರಗಳು ದೊರೆತಿದ್ದರೆ ಅಧ್ಯಯನದ ವೇಳೆಗೆ ಮತ್ತಷ್ಟು ಪ್ರಶ್ನೆಗಳು ಹೊಸದಾಗಿ ಹುಟ್ಟಿಕೊಂಡಿದ್ದು ಇದೆ. 'ಜನಪ್ರಿಯ ಸಾಹಿತ್ಯ', 'ಜನಪ್ರಿಯ ಕಲೆ', 'ಜನಪ್ರಿಯ ಸಂಸ್ಕೃತಿ' ಎಂಬುದು ಆಧುನಿಕ ಸಾಹಿತ್ಯದ ಸಂದರ್ಭದಲ್ಲಿ ಚರ್ಚಿತವಾಗಿರುವ ವಿಷಯಗಳು. ಸಾಹಿತ್ಯದಲ್ಲಿ ಜನಪ್ರಿಯತೆ ಎಂಬುವು ಸಾಪೇಕ್ಷವಾದುದು ಎಂದಾದರೂ ಜನಪ್ರಿಯತೆ ಎಂಬುದು ದ್ವಂದ್ವ ಗೊಂದಲಗಳಿಂದ ಕೂಡಿದೆ. ಸಾಹಿತ್ಯದಲ್ಲಿ ಜನಪ್ರಿಯತೆಯನ್ನು ಗುರುತಿಸುವ ನಿರ್ದಿಷ್ಟ ಮಾನದಂಡಗಳು ಯಾವುವು? ಎಂಬುದರ ಬಗ್ಗೆ ಸ್ಪಷ್ಟತೆ ಸಿಗುವುದಿಲ್ಲ. ಹಾಗೆ ವಿಮರ್ಶೆ ಪರಿಗಣಿಸಿರುವ ಅಂಶಗಳು ಜನಪ್ರಿಯ ಮತ್ತು ಗಂಭೀರ ಸಾಹಿತ್ಯಗಳಲ್ಲಿಯೂ ಕಂಡುಬರುತ್ತದೆ. ಜನಪ್ರಿಯತೆಯ ಅಂಶವು ನಿರ್ದಿಷ್ಟವಾಗಿ ಇಂಥದೇ ಸಾಹಿತ್ಯಕ್ಕೆ ಅನ್ವಯವಾಗುವ ಮಾತೆಂದು ಹೇಳಲಾಗದು. ಯಾವ ಸಾಹಿತ್ಯಕ್ಕೆ ಈ ಮಾತನ್ನು ಆರೋಪಿಸಬಹುದೆಂಬ ಬಗ್ಗೆ ಗೊಂದಲ ಉಂಟಾಗುತ್ತದೆ.

ಜನಪ್ರಿಯತೆಯು ಎಲ್ಲಾ ಕಾಲದ, ಸಾಹಿತ್ಯದ ಎಲ್ಲಾ ಪ್ರಕಾರಗಳಿಗೂ ಅನ್ವಯವಾಗುತ್ತದೆ. ಸಾಹಿತ್ಯದಲ್ಲಿ ಜನಪ್ರಿಯತೆ ಎಂಬುವು ಸಹಜವಾದುದು ಎನಿಸಿದರೂ ಜನಪ್ರಿಯತೆಗೆ ಕಾರಣವಾದ ಅಂಶಗಳನ್ನು ಗುರುತಿಸುವುದು ಕಷ್ಟಸಾಧ್ಯವಾಗುತ್ತದೆ. ಜನಪ್ರಿತಯತೆ ಎಂಬುದು ಕವಿ ಇಲ್ಲವೆ ಸಾಹಿತ್ಯ ಸ್ಥಿರ ಲಕ್ಷಣವಾಗುವುದೇ? ಅದು ಬದಲಾಗದೆ ಎಲ್ಲಾ ಕಾಲಕ್ಕೂ ಒಂದೇ ರೀತಿಯಾಗಿರುತ್ತದೆಯೇ? ಎಂದುಕೊಂಡಾಗ ಜನಪ್ರಿಯತೆ ಕಾಲದಿಂದ ಕಾಲಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ ಬದಲಾಗುತ್ತಿರುತ್ತದೆ. ಈ ಬದಲಾವಣೆಗೆ ಕಾರಣ ಯಾವುದೆಂದು ಯಾವ ನೆಲೆಯಿಂದ ಕಂಡುಕೊಳ್ಳಬಹುದು ಎಂಬುದು ಅಸ್ಪಷ್ಟವಾಗುತ್ತದೆ. ಜನಪ್ರಿಯತೆಗೆ ಕಾರಣವಾದ ನಿರ್ದಿಷ್ಟವಾದ ಅಳತೆಗೋಲು ಯಾವುದು ಎಂಬುದು ಖಚಿತವಾಗಿಲ್ಲ. ಸಾಹಿತ್ಯ ಮತ್ತು ಜನಪ್ರಿತಯತೆ ನಡುವೆ ಅಂತಃ ಸಂಬಂಧವಿದೆ. ಗಂಭೀರ ಸಾಹಿತ್ಯವು ಜನಪ್ರಿಯತೆಯ ಆಧಾರದಿಂದಲೇ ರಚಿತವಾಗಿರುತ್ತದೆ. ಜನಪ್ರಿಯತೆಯ ಆಧಾರದ ಮೇಲೆ ಸಾಹಿತ್ಯದ

ಮಟ್ಟವನ್ನು ನಿರ್ಧರಿಸುವದು ಸಾಧುವೇ ? ವಿಮರ್ಶೆ ನಿರ್ವಚಿಸಿಕೊಂಡಿರುವಂತೆ ಹೆಚ್ಚಿನ ಓದುಗರನ್ನು ಹೊಂದಿರುವ ಸಾಹಿತ್ಯ ಜನಪ್ರಿಯ ಸಾಹಿತ್ಯ. ಗಂಭೀರ ಸಾಹಿತ್ಯಕ್ಕೆ ಜನಪ್ರಿಯತೆಯ ಆಧಾರವಿರುತ್ತದಲ್ಲವೇ ? ಎನ್ನುವ ಪ್ರಶ್ನೆಯೊಂದಿಗೆ 'ಜನಪ್ರಿಯತೆ' ಎಂಬುದು ಎಲ್ಲಾ ಸಾಹಿತ್ಯದಲ್ಲಿಯೂ ಇರುವ ಒಂದು ಗುಣವಲ್ಲವೆ? ಎನ್ನುವ ಅಂಶವು ಮುಖ್ಯವಾಗುತ್ತದೆ. ವಿಮರ್ಶೆಯ ಪಂಭಾಪಿಸಿರುವಂತೆ ಜನಪ್ರಿಯತೆಯ ಮಾನದಂಡದಿಂದ ಕವಿ ಮತ್ತು ಸಾಹಿತ್ಯಕ್ಕೆ ಸೂಕ್ತ ಮಹತ್ವ ಲಭಿಸುತ್ತದೆಯೇ ಎನ್ನುವುದು ಪ್ರಮುಖ. ವಿಮರ್ಶೆಯು ಜನಪ್ರಿಯ ಸಾಹಿತ್ಯವನ್ನು ಗಂಭೀರ ಓದಿಗೆ ನಿಲುಕದ ಗಂಭೀರ ಅಧ್ಯಯನಕ್ಕೆ ಅರ್ಹವಲ್ಲದ ಎರಡನೇ ದರ್ಜೆಯ ಸಾಹಿತ್ಯವೆಂದು ಪರಿಗಣಿಸುತ್ತದೆ. ಈ ಬಗೆಯ ಪರಿಗಣನೆ ಸಾಹಿತ್ಯಾಧ್ಯಯನಕ್ಕೆ ಸಾಧುವೆ? ಜನಪ್ರಿಯ ಸಾಹಿತ್ಯ ಗಂಭೀರ ಅಂಶಗಳನ್ನು ಒಳಗೊಂಡಿರುವುದಿಲ್ಲವೇ? ಎಂಬುದು ಪ್ರಶ್ನೆಯಾಗುತ್ತದೆ.

ಜನಪ್ರಿಯ ಕವಿಗಳ ಸಾಲಿನಲ್ಲಿ ಗುರುತಿಸಿಕೊಂಡಿರುವ ಬಿ.ಆರ್.ಲಕ್ಷ್ಮಣರಾವ್ ಅವರ ಸಾಹಿತ್ಯವನ್ನು ಸಾಹಿತ್ಯ ಮತ್ತು ಜನಪ್ರಿಯತೆಯ ಹಿನ್ನೆಲೆಯೊಂದಿಗೆ ಅಧ್ಯಯನ ನಡೆಸಿದಾಗ ಜನಪ್ರಿಯತೆಯು ಸಾಹಿತ್ಯದ ಗುಣಾತ್ಮಕ ಅಂಶವಾಗಿ ಪರಿಗಣಿಸಲಾಗಿದೆ. ವಿಮರ್ಶೆಯ ನೆಲೆಯಲ್ಲಿ ಅವರ ಸಾಹಿತ್ಯವನ್ನು ನೋಡದೆ, ಜನಪ್ರಿಯತೆಯನ್ನು ಸಾಹಿತ್ಯದ ಗುಣಾತ್ಮಕ ಅಂಶ ಎನ್ನುವ ನೆಲೆಗೆ ಇಲ್ಲಿ ಹೆಚ್ಚಿನ ಒತ್ತು ನೀಡಲಾಗಿದೆ. ಜನಪ್ರಿಯತೆಯೇ ಹೇಗೆ ಕವಿಯ ಮತ್ತು ಅವರ ಸಾಹಿತ್ಯದ ಮಹತ್ವಕ್ಕೆ ಪೂರಕವಾಗಿ ಬಂದಿದೆ, ಯಾವುದೇ ಬಗೆಯ ಸಾಹಿತ್ಯವು ಜನಪ್ರಿಯತೆಯ ಆಧಾರದ ಮೇಲೆ ರಚಿತವಾಗಿರುತ್ತದೆ, ಜನಪ್ರಿಯತೆ ಎಂಬುದು ಕೇವಲ ಜನಪ್ರಿಯ ಸಾಹಿತ್ಯಕ್ಕೆ ಮಾತ್ರ ಅನ್ವಯಿಸದೆ ಗಂಭೀರ ಸಾಹಿತ್ಯಕ್ಕೂ ಒಳಗೊಳ್ಳುತ್ತದೆ.

ವಿಮರ್ಶೆಯ ನೆಲೆಯಲ್ಲಿ ಸಾಹಿತ್ಯದ ಅಧ್ಯಯನ ನಡೆಸಿದಾಗ ಕವಿಗೆ ಇಲ್ಲವೆ ಕೃತಿಯ ಮಹತ್ವ ಸ್ಪಷ್ಟವಾಗುವುದೇ ? ಜನಪ್ರಿಯತೆ ಎಂಬ ಹಣೆಪಟ್ಟಿಯಿಂದ ಬಿ.ಆರ್.ಲಕ್ಷ್ಮಣರಾವ್ ಅವರನ್ನು ಹೊರಗಿಟ್ಟು ನೋಡಿದಾಗ ಅವರ ಸಾಹಿತ್ಯದ ಜನಪ್ರಿಯತೆಯ ಮರ್ಮವೇನೆಂಬುದರ ಸ್ಪಷ್ಟತೆಯೊಂದಿಗೆ ಅವರ ಸಾಹಿತ್ಯಕ್ಕೂ ಮಹತ್ವ ಲಭಿಸುತ್ತದೆ.

ಈ ನೆಲೆಯ ಅಧ್ಯಯನದಿಂದ ಬಿ.ಆರ್.ಲಕ್ಷ್ಮಣರಾವ್ ಅವರ ಜನಪ್ರಿಯತೆಯ ಮರ್ಮವೇನು ಎಂಬುದನ್ನು ಕಂಡುಕೊಳ್ಳುವ ಪ್ರಯತ್ನ ಮತ್ತು ಅವರ ಜನಪ್ರಿಯತೆಗೆ ಕಾರಣವಾದ ಅಂಶಗಳನ್ನು ಗುರುತಿಸುವುದು, ಅವರ ಸಾಹಿತ್ಯ ಹೇಗೆ ಗಂಭೀರ ಚಿಂತನೆಗೆ ಅರ್ಹವಾಗಿದೆ ಎಂಬುದನ್ನು ತಿಳಿಯುವುದು ಜನಪ್ರಿಯತೆ ಮತ್ತು ಗಂಭೀರ ಅಂಶಗಳೆರಡರ ಸಮನ್ವಯ ಅವರ ಬರಹದಲ್ಲಿ ಹೇಗೆ ಸಾಧಿತವಾಗಿದೆ ಎಂಬುದರ ಮೂಲಕ ಸಾಗಿದ ಅಧ್ಯಯನದ ಒಟ್ಟಾರೆ ಫಲಿತಗಳನ್ನು ಕೆಳಕಂಡಂತೆ ಕ್ರೂಢೀಕರಿಸಬಹುದು.

- ಕವಿಯ ಜೀವನಕ್ಕೂ ಮತ್ತು ಬರಹಕ್ಕೂ ನಡುವೆ ಸಂಬಂಧವಿರುತ್ತದೆ.
- ಕವಿಯ ವ್ಯಕ್ತಿತ್ವ, ಅನುಭವಗಳು ಬರಹದ ಮೂಲಕ ಅಭಿವ್ಯಕ್ತವಾಗುವ ಸಾಧ್ಯತೆಗಳನ್ನು ಕಾಣಬಹುದು.
- ಸಾಹಿತ್ಯ ಮತ್ತು ಜನಪ್ರಿಯತೆ ನಡುವೆ ಅಂತಃ ಸಂಬಂಧವಿದೆ.
- ಜನಪ್ರಿಯತೆ ಎಂಬುದು ಎಲ್ಲಾ ಸೃಜನಶೀಲ ಬರಹಗಳಲ್ಲಿಯೂ ಕಾಣಿಸಿಕೊಳ್ಳುವ ಅಂಶವಾಗಿರುತ್ತದೆ.
- ಜನಪ್ರಿಯತೆ ಎಂಬುದು ಸಾಹಿತ್ಯದ ಸ್ಥಿರವಾದ ಲಕ್ಷಣವಲ್ಲವೆಂಬುದು ಸ್ಪಷ್ಟವಾಗುತ್ತದೆ.
- ಜನಪ್ರಿಯತೆ ಎಂಬುದು ಒಂದೇ ರೀತಿಯಾಗಿರದೆ ಅದು ಕಾಲ, ದೇಶ, ವ್ಯಕ್ತಿಗಳಲ್ಲಿ ಬದಲಾವಣೆ ಹೊಂದಿರುತ್ತದೆ.
- ಜನಪ್ರಿಯತೆಯ ಮಾನದಂಡಗಳನ್ನು ಸಾಹಿತ್ಯದಲ್ಲಿ ಖಚಿತಪಡಿಸಿಕೊಳ್ಳುವುದು ಕಷ್ಟಸಾಧ್ಯವಾಗುತ್ತದೆ.
- ಜನಪ್ರಿಯತೆ ಎಂಬುದನ್ನು ಕಾದಂಬರಿ ಪ್ರಕಾರಕ್ಕೆ ಮಾತ್ರ ಅನ್ವಯಿಸದೆ ಸಾಹಿತ್ಯದ ಎಲ್ಲಾ ಪ್ರಕಾರಗಳಿಗೂ ಅನ್ವಯಿಸಿಕೊಳ್ಳಬಹುದಾಗಿದೆ.
- ವಿಮರ್ಶೆಯು ಪರಿಭಾವಿಸಿರುವ ಜನಪ್ರಿಯತೆಯ ಅಂಶಗಳು ಜನಪ್ರಿಯ ಸಾಹಿತ್ಯಕ್ಕೆ ಅನ್ವಯಿಸುವಂತೆ ಗಂಭೀರ ಸಾಹಿತ್ಯದಲ್ಲಿಯೂ ಕಂಡುಬರುತ್ತದೆ.
- ಜನಪ್ರಿಯತೆ ಎಂಬುದನ್ನು ಪ್ರಾರಂಭದ ಸಾಹಿತ್ಯವು ಒಳಗೊಂಡಿದ್ದು, ಆಗ ಅದು ಸಾಹಿತ್ಯದ ಗುಣಾತ್ಮಕ ಅಂಶವೆಂದು ಪರಿಭಾವಿಸಲಾಗಿತ್ತು. ಆಧುನಿಕ ವಿಮರ್ಶೆಯು ಜನಪ್ರಿಯತೆ ಎಂಬುದನ್ನು ನೇತ್ಯಾತ್ಮಕ ಅರ್ಥದಲ್ಲಿ ಪರಿಗಣಿಸಿದೆ.
- ಆಧುನಿಕ ವಿಮರ್ಶೆಯ ಸಂದರ್ಭದಲ್ಲಿ 'ಜನಪ್ರಿಯ ಸಾಹಿತ್ಯ' ಎಂಬುದು ಪ್ರಮುಖವಾಗಿ ಚರ್ಚಿತವಾಗುತ್ತಿದೆ.
- ಹೆಚ್ಚಿನ ಓದುಗ ವರ್ಗವನ್ನು ಗಳಿಸಿರುವ ಹೆಚ್ಚಿನ ಓದುಗರ ಮೆಚ್ಚುಗೆ ಗಳಿಸಿರುವ, ಗಂಭೀರ ಓದು ಅಧ್ಯಯನಗಳಿಗೆ ಅರ್ಹವಲ್ಲದ ರೋಚಕತೆ, ಅನಿರೀಕ್ಷಿತ ತಿರುವುಗಳ, ಸಮೃದ್ಧ ಘಟನಾವಳಿಗಳಿಂದ

ನಿರೂಪಣೆಯಿಂದ ಕೂಡಿದ ಕಥನ ಸಾಹಿತ್ಯವನ್ನು 'ಜನಪ್ರಿಯ ಸಾಹಿತ್ಯ' ಎಂದು ಪರಿಭಾವಿಸುವುದು ರೂಢಿಗೆ ಬಂದಿದೆ.

- ಜನಪ್ರಿಯ ಕವಿಗಳ ಸಾಲಿನಲ್ಲಿ ಗುರುತಿಸಿಕೊಂಡಿರುವ ಬಿ.ಆರ್. ಲಕ್ಷ್ಮಣರಾವ್ ಅವರ ಕಾವ್ಯವು ಹೇಗೆ ಜನಪ್ರಿಯತೆಗಳಿಸಿಕೊಂಡಿದೆ.

- ಅವರ ಕಾವ್ಯದಲ್ಲಿ ಅಭಿವ್ಯಕ್ತವಾಗಿರುವ ಜನಪ್ರಿಯತೆಯ ಅಂಶಗಳಾವುವು, ಎಂಬುದರ ಮೂಲಕ ಜನಪ್ರಿಯತೆಯ ಅಂಶಗಳೆಂದು ಪರಿಭಾವಿಸಿರುವಂತೆ ಪ್ರೀತಿ, ಪ್ರೇಮ, ಪ್ರಣಯ, ಹಾಸ್ಯ, ವಿನೋದ, ವಿಡಂಬನೆಗಳು ಹೇಗೆ ವ್ಯಕ್ತವಾಗಿವೆ.

- ಬಿ.ಆರ್.ಲಕ್ಷ್ಮಣರಾವ್ ಅವರು ತಮ್ಮ ಕವಿತೆಗಳಲ್ಲಿ ವ್ಯಕ್ತಪಡಿಸಿರುವ ಪ್ರೀತಿ, ಪ್ರೇಮ, ಪ್ರಣಯದ ವಿಷಯಗಳು ಹೇಗೆ ಜನ ಮೆಚ್ಚುಗೆ ಗಳಿಸಿಕೊಳ್ಳುವಲ್ಲಿ ಪ್ರಮುಖವಾದ ಅಂಶಗಳಾಗಿವೆ ಎಂಬುದು ವ್ಯಕ್ತವಾಗುತ್ತದೆ.

- ಬಿ.ಆರ್.ಲಕ್ಷ್ಮಣರಾವ್ ಅವರ ವೈಯಕ್ತಿಕ ಅನುಭವಗಳು ಅವರ ಕವಿತೆಗಳಲ್ಲೂ ಯಾವ ನೆಲೆಯ ಮೂಲಕ ಅಭಿವ್ಯಕ್ತಗೊಂಡಿವೆ, ಅಂತೆಯೇ ಅವರ ಚಿಂತನೆಗಳು ವೈಯಕ್ತಿಯ ನೆಲೆಯಿಂದ ಸಾಮಾಜಿಕತೆಯ ಕಡೆಗೆ ಹೊರಳುವಾಗ ಯಾವ ರೂಪ ಪಡೆಯುತ್ತವೆ ಎಂಬುದು ಕವಿತೆಗಳ ವಿಶ್ಲೇಷಣೆಯ ಮೂಲಕ ವೇದ್ಯವಾಗುತ್ತದೆ.

- ಬಿ.ಆರ್.ಲಕ್ಷ್ಮಣರಾವ್ ಅವರ ಕವಿತೆಗಳಲ್ಲಿ ಹಾಸ್ಯ, ವ್ಯಂಗ್ಯ, ವಿನೋದ ವಿಡಂಬನೆಗಳು ಹೇಗೆ ನಿರೂಪಿತವಾಗಿವೆ, ಹಾಸ್ಯದ ಮೂಲಕವೇ ಗಂಭೀರ ಚಿಂತನೆಯೆಡೆಗೆ ಅವರ ಕವಿತೆಗಳು ಹೇಗೆ ಸಾಗುತ್ತವೆ ಎಂಬುದು ಅವರ ಕವಿತೆಗಳ ಸಮೀಕ್ಷೆಯ ಮೂಲಕ ಸ್ಪಷ್ಟವಾಗುತ್ತದೆ.

- ಸಾಹಿತ್ಯ ಮತ್ತು ಸುಗಮ ಸಂಗೀತದ ನಡುವಿನ ಸಂಬಂಧವನ್ನು ತಿಳಿಯುವ ಮೂಲಕ ಸಾಹಿತ್ಯದ ಜನಪ್ರಿಯತೆಗೆ ಇವು ಹೇಗೆ ಪೂರಕವಾಗಿ ಬರುತ್ತವೆ ಎಂಬುದರ ಸ್ಪಷ್ಟತೆ ಅವರ ಭಾವಗೀತೆಗಳ ಧ್ವನಿಸುರುಳಿಗಳ ಸಮೀಕ್ಷೆ ಮೂಲಕ ತಿಳಿಯುತ್ತದೆ.

- ಸಾಹಿತ್ಯ ಓದುಗಬ್ಬವಾಗಿ ಒಂದು ನಿರ್ದಿಷ್ಟ ವಲಯದಲ್ಲಿ ಜನಪ್ರಿಯತೆ ಗಳಿಸುವಂತೆ, ಹಾಡುಗಬ್ಬವಾಗಿಯೂ ಹೆಚ್ಚಿನ ಸಂಖ್ಯೆಯ ಕೇಳುಗರನ್ನು ಪಡೆಯುವುದು, ಪ್ರಸಿದ್ಧ ಗಾಯಕರ

ಗಾಯನದ ಮೂಲಕ ಸಾಹಿತ್ಯ ಹೇಗೆ ಜನಪ್ರಿಯತೆ ಗಳಿಸುತ್ತದೆ ಎಂಬುದು ಅವರ ಹಾಡುಗಳ ಧ್ವನಿಸುರುಳಿಯ ಸಮೀಕ್ಷೆಯ ಮೂಲಕ ವೇದ್ಯವಾಗುತ್ತದೆ.

- ಬಿ.ಆರ್.ಲಕ್ಷ್ಮಣರಾವ್ ಅವರ ಕಥನ ಸಾಹಿತ್ಯದ ಜನಪ್ರಿಯತೆಗೆ ಕಾರಣವಾದ ಅಂಶಗಳಾವುವು ಎಂಬುದು ಅವರ ಸಮಗ್ರ ಕಥೆಗಳ ವಿಶ್ಲೇಷಣೆಯ ಮೂಲಕ ಸ್ಪಷ್ಟವಾಗುತ್ತದೆ.

- ಆಧುನಿಕ ವಿಮರ್ಶೆಯ ಪರಿಕಲ್ಪನೆಯ ನೆಲೆಯಲ್ಲಿ ಅವರ ಕಥೆ, ಕಾದಂಬರಿಗಳಲ್ಲಿ ವ್ಯಕ್ತವಾಗುವ ಜನಪ್ರಿಯತೆಯ ಅಂಶಗಳ ಸ್ಪಷ್ಟತೆಯನ್ನು ಅವರ ಕಥೆಗಳ ವಸ್ತು ವಿಷಯ ನಿರೂಪಣಾ ಶೈಲಿ ಇವುಗಳ ವಿಶ್ಲೇಷಣೆಯ ಮೂಲಕ ಸ್ಪಷ್ಟಪಡಿಸಿಕೊಳ್ಳಲಾಗಿದೆ.

- ಅವರ ಕಥೆ, ಕಾದಂಬರಿಗಳಲ್ಲಿ ಬರುವ ಪಾತ್ರ, ಸನ್ನಿವೇಶ, ಸಂಭಾಷಣೆ ಇವುಗಳ ನಿರೂಪಣೆಯ ಮೂಲಕ ಹೇಗೆ ಅವರ ಸಾಹಿತ್ಯ ಜನಪ್ರಿಯತೆ ಗಳಿಸಿಕೊಂಡಿದೆ ಎಂಬುದು ಸಮೀಕ್ಷೆಯಿಂದ ವ್ಯಕ್ತವಾಗುತ್ತದೆ.
- ಅವರ ಕಥೆ, ಕಾದಂಬರಿಗಳಲ್ಲಿ ಪ್ರೀತಿ-ಪ್ರೇಮ, ಪ್ರಣಯದ ವಸ್ತು ವಿಷಯಗಳು ಯಾವ ವರ್ಗವನ್ನು ಪ್ರತಿನಿಧಿಸುತ್ತವೆ, ಹೇಗೆ ನಿರೂಪಿತವಾಗಿವೆ, ಪ್ರೀತಿ-ಪ್ರೇಮ ಇವುಗಳು ಯಾವ ನೆಲೆಯಲ್ಲಿ ಚಿತ್ರಿತವಾಗಿವೆ, ಅವುಗಳಲ್ಲಿ ವ್ಯಕ್ತವಾಗುವ ಜೀವಪರವಾದ ಚಿಂತನೆಗಳೇನು ಎಂಬುದರ ವಿಶ್ಲೇಷಣೆಯಿಂದ ಅವರ ಕಥನ ಸಾಹಿತ್ಯದ ಜನಪ್ರಿಯತೆಯು ಸ್ಪಷ್ಟವಾಗುತ್ತದೆ.

- ಜನಪ್ರಿಯ ಮತ್ತು ಗಂಭೀರ ಎಂಬ ಎರಡು ಚಿಂತನೆಗಳು ಅವರ ಒಟ್ಟು ಸಾಹಿತ್ಯದಲ್ಲಿ ಹೇಗೆ ಸಮನ್ವಯತೆ ಸಾಧಿಸಿವೆ ಎಂಬುದು ಕಥೆ, ಕಾವ್ಯ, ಕಾದಂಬರಿ, ಇತ್ಯಾದಿ ಅವರ ಸೃಜನಶೀಲ ಬರಹಗಳ ವಿಶ್ಲೇಷಣೆಯ ಮೂಲಕ ವೇದ್ಯವಾಗುತ್ತದೆ.

- ಇಲ್ಲಿ ಬಿ.ಆರ್.ಲಕ್ಷ್ಮಣರಾವ್ ಅವರನ್ನು ಜನಪ್ರಿಯ ಕವಿ ಎಂಬಂತೆ ಗುರುತಿಸಿದರೂ ವಿಮರ್ಶೆಯ ಪರಿಕಲ್ಪನೆಯಲ್ಲಿ ಅವರ ಸಾಹಿತ್ಯ ಚಿಂತನೆಯನ್ನು ಮಾಡದೆ ಆಸ್ವಾದನೆಯ ದೃಷ್ಟಿಯಲ್ಲಿ ನೋಡುವುದರ ಮೂಲಕ ಅವರ ಜನಪ್ರಿಯತೆಯ ಮಹತ್ವ ಸ್ಪಷ್ಟವಾಗುತ್ತದೆ.

- ಜನಪ್ರಿಯ ಕವಿ ಎಂಬ ಕಾರಣದಿಂದಾಗಿ ಅವರ ಸಾಹಿತ್ಯವು ಅವಗಣನೆಗೆ ಗುರಿಪಡಿಸಬೇಕಾಗಿಲ್ಲ. ಜನಪ್ರಿಯತೆಯ ಮೂಲಕವು ಗಂಭೀರ ಚಿಂತನೆಯನ್ನು ಅವರ ಬರಹದಲ್ಲಿ ಕಾಣಬಹುದಾಗಿದೆ.

- ಸರಳತೆ, ಸಾಮಾನ್ಯ ನಿರೂಪಣೆ, ಸಾಹಿತ್ಯದ ಗುಣವು ಹೌದು ಎಂಬುದು ಅವರ ಒಟ್ಟಾರೆ

ಬರಹದಲ್ಲಿ ಅಂದರೆ ಕಥೆ, ಕಾದಂಬರಿ, ಕಾವ್ಯದಲ್ಲಿ ಹೇಗೆ ನಿರೂಪಿತವಾಗಿವೆ ಎಂಬುದು ಅವರ ಸಾಹಿತ್ಯದ ವಿಶ್ಲೇಷಣೆಯಿಂದ ಅರಿವಾಗುತ್ತದೆ.

- ಯಾವುದೇ ಪಥ, ಪಂಥದಲ್ಲಿ ಗುರುತಿಸಿಕೊಳ್ಳದೆ ತಮ್ಮದೇ ಆದ ವಿಶಿಷ್ಟತೆಗಳ ಮೂಲಕ ಜಿ.ಆರ್.ಲಕ್ಷ್ಮಣರಾವ್ ಅವರು ಹೇಗೆ ಜನಪ್ರಿಯತೆಯನ್ನು ಸಾಧಿಸಿದ್ದಾರೆ, ಪಂಥ, ಪ್ರಕಾರದ ಪರಿಕಲ್ಪನೆಯನ್ನು ಮೀರುವುದು ಜನಪ್ರಿಯತೆಗೆ ಕಾರಣವಾಗುತ್ತದೆ ಎಂಬುದು ಅವರ ಬರಹದ ವಿಶಿಷ್ಟತೆಯ ಮೂಲಕ ಸ್ಪಷ್ಟವಾಗುತ್ತದೆ.

ಪ್ರಸ್ತುತ ಅಧ್ಯಯನದಲ್ಲಿ 'ಜನಪ್ರಿಯತೆ' ಬಗ್ಗೆ, ಜನಪ್ರಿಯತೆಗೆ ಕಾರಣವಾಗುವ ಅಂಶಗಳ ಬಗ್ಗೆ, ಜನಪ್ರಿಯತೆಯ ಖಚಿತವಾದ ಮಾನದಂಡಗಳ ಬಗ್ಗೆ ಹುಟ್ಟಿಕೊಳ್ಳುವ ಗೊಂದಲ, ಹಾಗೆಯೇ ಆಧುನಿಕ ವಿಮರ್ಶೆಯು ಜನಪ್ರಿಯ ಸಾಹಿತ್ಯ, ಜನಪ್ರಿಯ ಕವಿ ಎಂದು ವಿಭಾಗಿಸಿ, ಜನಪ್ರಿಯ ಸಾಹಿತ್ಯದ ಬಗ್ಗೆ ತಾಳುವ ನಿಲುವುಗಳನ್ನು ಸಾಹಿತ್ಯದ ಜನಪ್ರಿಯತೆಯನ್ನು ಗುರುತಿಸಿಕೊಳ್ಳುವ ಕುರಿತಂತೆ ಹಲವು ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ, ಜಿ.ಆರ್.ಲಕ್ಷ್ಮಣರಾವ್ ಅವರ ಸಾಹಿತ್ಯದ ಪ್ರಸ್ತುತ ಅಧ್ಯಯನದಲ್ಲಿ ಇಂತಹ ಪ್ರಶ್ನೆಗಳಿಗೆಲ್ಲಾ ಸಾಧ್ಯವಾದಷ್ಟು ಮಟ್ಟಿಗೆ ಉತ್ತರ ಕಂಡುಕೊಳ್ಳುವ ದಿಕ್ಕಿನಲ್ಲಿ ಅಧ್ಯಯನ ಸಾಗಿದೆ. ಆದರೆ ಈಗಾಗಲೇ ಗಮನಿಸಿದಂತೆ ಆ ಪ್ರಯತ್ನದಲ್ಲಿ ಪೂರ್ಣ ರೂಪದಲ್ಲಿ ಫಲ ಪಡೆಯಲಾಗಿದೆ ಎಂದು ಹೇಳಲಾಗದು. ಅಧ್ಯಯನ ಪೂರ್ವದ ಮೂಲ ಪ್ರಶ್ನೆಗಳಿಗೆ ಪೂರಕವಾಗಿ ಹೊಸ ಪ್ರಶ್ನೆಗಳು ರೂಪತಾಳಿವೆ. ಇಲ್ಲಿ ಹುಟ್ಟಿಕೊಳ್ಳುವ ಪ್ರಶ್ನೆಗಳು, ಗೊಂದಲಗಳು ಪ್ರಸ್ತುತ ಅಧ್ಯಯನದ ಮಿತಿಗಳೆಂದು ಸೂಚಿಸುವುದರೊಂದಿಗೆ ಅವು ಈ ಕ್ಷೇತ್ರಕೆ ಸಂಬಂಧಿಸಿದಂತೆ ಮುಂದೆ ಕೈಗೊಳ್ಳಬಹುದಾದ ಅಧ್ಯಯನದ ಸಾಧ್ಯತೆಗಳಿಗೆ ದಾರಿಯಾಗಿವೆ ಎಂದು ಹೇಳಬಹುದು.

ಜನಪ್ರಿಯತೆ ಮತ್ತು ಸಾಹಿತ್ಯಕ್ಕೆ ಸಂಬಂಧಿಸಿದಂತೆ ಪರಿಕಲ್ಪನೆಯಲ್ಲಿ ವಿಭಿನ್ನವಾದ ನೆಲೆಯ ಅಧ್ಯಯನಗಳು ನಡೆಯಬೇಕಾಗಿದೆ. ಪ್ರಾಚೀನ ಸಾಹಿತ್ಯ, ಮತ್ತು ಜನಪ್ರಿಯತೆ, ವಚನ ಸಾಹಿತ್ಯ ಮತ್ತು ಜನಪ್ರಿಯತೆ, ದಾಸ ಸಾಹಿತ್ಯ ಮತ್ತು ಜನಪ್ರಿಯತೆ. ಎಂಬುದರ ಬಗೆಗಿನ ಪ್ರತ್ಯೇಕ ಅಧ್ಯಯನದ ಸಾಧ್ಯತೆಯಿದೆ. ಸಾಹಿತ್ಯದ ವಿವಿಧ ಪ್ರಕಾರಗಳಾದ ಕಥೆ, ಕಾದಂಬರಿ, ಕಾವ್ಯ, ನಾಟಕ, ಪ್ರಬಂಧ, ಭಾವಗೀತೆ, ಹನಿಗವಿತೆಗಳು, ಹಾಸ್ಯ ಸಾಹಿತ್ಯ ಮುಂತಾದ ವಿಷಯಗಳು ಮತ್ತು ಜನಪ್ರಿಯತೆಯ ನಡುವಣ ಸಂಬಂಧಗಳನ್ನು ಪ್ರತ್ಯೇಕವಾಗಿಟ್ಟುಕೊಂಡು ಗುರುತಿಸಬೇಕಾಗಿದೆ. ಸಾಹಿತ್ಯ ಕೃತಿಗಳಲ್ಲಿ ಬರುವ ಪೌರಾಣಿಕ, ಚಾರಿತ್ರಿಕ, ಸಾಮಾಜಿಕ ವಸ್ತು ಮತ್ತು ಜನಪ್ರಿಯತೆ ಎಂಬುದರ ಬಗ್ಗೆಯೂ ಪ್ರತ್ಯೇಕವಾದ ಅಧ್ಯಯನದ ಸಾಧ್ಯತೆಗಳಿವೆ.

ಆಧುನಿಕ ಸಾಹಿತ್ಯದಲ್ಲಿ ಪ್ರಮುಖವಾದ ಕಾವ್ಯ ಪ್ರಕಾರದ ಭಾವಗೀತೆಗಳು ಮತ್ತು ಜನಪ್ರಿಯತೆ ಎಂಬುದರ ಬಗ್ಗೆ ಪ್ರತ್ಯೇಕ ಅಧ್ಯಯನ ಸಾಧ್ಯತೆಯಿದೆ. ಜನಪ್ರಿಯ ಕವಿಗಳೆಂದು ಪರಿಗಣಿಸಿರುವ ಕವಿಗಳ

ಬರಹಗಳ ಬಗ್ಗೆ ತೌಲನಿಕವಾದ ಅಧ್ಯಯನದ ಸಾಧ್ಯತೆಗಳಿವೆ. ಗಂಭೀರ ಸಾಹಿತಿಗಳ ಬರಹದಲ್ಲಿನ ಜನಪ್ರಿಯತೆ, ಮತ್ತು ಜನಪ್ರಿಯ ಕವಿಗಳ ಬರಹದಲ್ಲಿನ ಜನಪ್ರಿಯತೆಯ ಅಂಶಗಳನ್ನು ಕುರಿತು ತೌಲನಿಕವಾಗಿಯು ಅಭ್ಯಸಿಸಬಹುದು. ಸಾಹಿತ್ಯ ಮತ್ತು ಜನಪ್ರಿಯತೆಗೆ ಸಂಬಂಧಿಸಿದಂತೆ ವಿವಿಧ ಕಾಲ ಘಟ್ಟದಲ್ಲಿ ರಚಿತವಾದ ಕೃತಿಗಳನ್ನು ವಿಭಾಗ ಮಾಡಿಕೊಂಡು ಪ್ರತ್ಯೇಕವಾಗಿ ಅಧ್ಯಯನ ಕೈಗೊಳ್ಳಬಹುದಾಗಿದೆ.

ಜನಪ್ರಿಯ ಮತ್ತು ಗಂಭೀರ ಕವಿಗಳ ಜನಪ್ರಿಯತೆಯ ಬಗ್ಗೆ, ಜನಪ್ರಿಯವೆಂದು ಗುರುತಿಸಿಕೊಂಡಿರುವ ಇತರೆ ಕವಿಗಳ ಸಾಹಿತ್ಯವನ್ನು ಕುರಿತ ತೌಲನಿಕ ಅಧ್ಯಯನವನ್ನು ಕೈಗೊಳ್ಳಬಹುದು. ಈ ರೀತಿಯಲ್ಲಿ ವಿಭಿನ್ನ ನೆಲೆಯಲ್ಲಿ ಅಧ್ಯಯನಗಳು ನಡೆಯುವಂತಾದರೆ ಸಾಹಿತ್ಯ ಮತ್ತು ಜನಪ್ರಿಯತೆಯ ಪರಿಕಲ್ಪನೆ, ಜನಪ್ರಿಯ ಕವಿಗಳ ಜನಪ್ರಿಯ ಸಾಹಿತ್ಯದ ಬಗ್ಗೆ ಹೊಸ ಹೊಸ ವಿಚಾರಗಳು ಮತ್ತಷ್ಟು ರೂಪ ತಳೆಯಲು ಸಾಧ್ಯವಾಗಬಹುದು. ಸಾಹಿತ್ಯ ಮತ್ತು ಜನಪ್ರಿಯತೆಯ ವಿಷಯವನ್ನು ಕುರಿತು ಅಧ್ಯಯನ ನಡೆಸುವ ಸಂದರ್ಭದಲ್ಲಿ ಓದುಗರ ಸಮೀಕ್ಷೆಯನ್ನು ಆಧರಿಸಿ ಅಧ್ಯಯನ ಕೈಗೊಳ್ಳಲು ಸಾಧ್ಯವಾದಲ್ಲಿ ಅಂಥ ಅಧ್ಯಯನಕ್ಕೆ ವಿನೂತನ ಆಯಾಮ ಪ್ರಾಪ್ತವಾಗುವುದು. ಆ ದಿಕ್ಕಿನಲ್ಲಿ ಪ್ರಸ್ತುತ ಅಧ್ಯಯನವು ಇನ್ನಷ್ಟು ಬಗೆಯ ಅಧ್ಯಯನಗಳಿಗೆ ದಾರಿಯಾಗಬಹುದು ಎಂಬ ಆಶಯವನ್ನು ಹೊಂದಲಾಗಿದೆ.

# ಅನುಬಂಧ

I. ಬಿ.ಆರ್. ಲಕ್ಷ್ಮಣ್‌ರಾವ್ ಅವರ ಬದುಕಿನ ಪ್ರಮುಖ ಘಟ್ಟಗಳು

II. ಆಕರ ಸೂಚಿ.

ಅ. ಪ್ರಧಾನ ಆಕರಗಳು

೧) ಬಿ.ಆರ್.ಲಕ್ಷ್ಮಣ್‌ರಾವ್ ಅವರ ಸಾಹಿತ್ಯ

೨) ಧ್ವನಿಸುರುಳಿಗಳು

ಆ. ಅನುಷಂಗಿಕ ಆಕರಗಳು

I ಬಿ.ಆರ್. ಲಕ್ಷ್ಮಣರಾವ್ ಅವರ ಬದುಕಿನ ಪ್ರಮುಖ ಘಟ್ಟಗಳು

| | | |
|---|---|---|
| ೧. | ಜನನ | ೦೯.೦೯.೧೯೪೬ |
| ೨. | ಬಿ.ಎ. ಪದವಿ | ೧೯೬೭ |
| ೩. | ಶಿಕ್ಷಕರಾಗಿ ವೃತ್ತಿ ಆರಂಭ | ೧೯೬೮ |
| ೪. | ಬಿಎಡ್ ಪದವಿ | ೧೯೭೫ |
| ೫. | ಎಂ.ಎ.ಪದವಿ | ೧೯೮೬ |
| ೬. | ಮೊದಲ ಕಥೆ ಪ್ರಕಟ | ೧೯೬೫ |
| ೭. | ಮೊದಲ ಕವಿತೆ ಪ್ರಕಟ | ೧೯೬೮ |
| ೮. | ಮೊದಲ ಕವನ ಸಂಕಲನ ಪ್ರಕಟ | ೧೯೭೧ |
| ೯. | ಮೊದಲ ಕಥಾ ಸಂಕಲನ ಪ್ರಕಟ | ೧೯೮೦ |
| ೧೦. | ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ | ೧೯೮೧ |
| ೧೧. | ಗೋರೂರು ಸಾಹಿತ್ಯ ಪ್ರಶಸ್ತಿ | ೧೯೯೮ |
| ೧೨. | ಚುಟುಕು ರತ್ನ ಪ್ರಶಸ್ತಿ | ೧೯೯೮ |
| ೧೩. | ವಿಶ್ವೇಶ್ವರಯ್ಯ ಸಾಹಿತ್ಯ ಪ್ರಶಸ್ತಿ | ೨೦೦೦ |
| ೧೪. | ಪು.ತಿ.ನ. ಕಾವ್ಯ ಪುರಸ್ಕಾರ | ೨೦೦೪ |
| ೧೫. | ಚಿಂತಾಮಣಿ ಅಭಿನಂದನಾ ಗ್ರಂಥ ಸಮರ್ಪಣೆ | ೨೦೦೬ |

II ಆಕರ ಸೂಚಿ

ಅ. ಪ್ರಧಾನ ಆಕರಗಳು

೧) ಬಿ.ಆರ್ ಲಕ್ಷ್ಮಣರಾವ್ ಅವರ ಸಾಹಿತ್ಯ

ಕಾವ್ಯ


೧. ಗೋಪಿ ಮತ್ತು ಗಾಂಡಲೀನ; ೧೯೭೧; ಅಕ್ಷರ ಪ್ರಕಾಶನ, ಸಾಗರ

೨. ಟುವಟಾರ; ೧೯೭೮; ಕ್ರೈಸ್ಟ್ ಕಾಲೇಜು ಕನ್ನಡ ಸಂಘ, ಬೆಂಗಳೂರು.

೩. ಲಿಲ್ಲಿಪುಟ್ಟಿಯ ಹಂಬಲ ; ೧೯೮೧ ; ನೆಲಮನೆ ಪ್ರಕಾಶನ, ಮೈಸೂರು.

೪. ಕೊಲಂಬಸ್ ; ೧೯೮೫ ; ಸುಂದರ ಪ್ರಕಾಶನ, ಧಾರವಾಡ

೫. ಶಾಂಗ್ರಿಲಾ ; ೧೯೮೭ ; ಅಕ್ಷರ ಪ್ರಕಾಶನ, ಹೆಗ್ಗೋಡು.

೬. ವಾಸಂತಿ ; ೧೯೮೮ ; ಕಿರಣ ಪ್ರಕಾಶನ, ಬೆಂಗಳೂರು.

೭. ಅಪರಾಧಂಗಳ ಮನ್ನಿಸೋ ; ೧೯೯೨ ; ಲಿಪಿ ಪ್ರಕಾಶನ, ಬೆಂಗಳೂರು.

೮. ನನ್ನ ಗೀತೆ ; ೧೯೯೩ ; ಲಿಪಿ ಪ್ರಕಾಶನ, ಬೆಂಗಳೂರು.

೯. ನ–ನಗು–, ನೀ–ನಗು ; ೧೯೯೪ ; ಲಿಪಿ ಪ್ರಕಾಶನ, ಬೆಂಗಳೂರು.

೧೦. ಮಧ್ಯಸ್ಥ ; ೧೯೯೭ ; ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೧೧. ಭಾರತ ಬಿಂದು ರಶ್ಮಿ ; ೧೯೯೭ ; ಲಿಪಿ ಪ್ರಕಾಶನ, ಬೆಂಗಳೂರು.

೧೨. ಎಡೆ ; ೧೯೯೮ ; ಲಿಪಿ ಪ್ರಕಾಶನ, ಬೆಂಗಳೂರು.

೧೩. ಇವಳು ನದಿಯಲ್ಲ ; ೨೦೦೫ ; ಅಂಕಿತ ಪ್ರಕಾಶನ, ಬೆಂಗಳೂರು.

೧೪. ಸುಬ್ಬಾಭಟ್ಟರ ಮಗಳೇ ; ೨೦೦೫ ; ಅಂಕಿತ ಪ್ರಕಾಶನ, ಬೆಂಗಳೂರು.

೧೫. ಹನಿಗವಿತೆಗಳು ; ೨೦೦೬ ; ಅಂಕಿತ ಪ್ರಕಾಶನ, ಬೆಂಗಳೂರು.

೧೬. ಕ್ಯಾಮೆರಾ ಕಣ್ಣು ; ೨೦೦೪, ೨೦೦೫ ; ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು.

೧೭. ಪ್ರೇಮಾಂತರ ; ೨೦೧೧ ; ವಸಂತ ಪ್ರಕಾಶನ, ಬೆಂಗಳೂರು.

೧೮. ಜೀವಜಲ ; ೨೦೧೧ ; ಸ್ವಪ್ನ ಬುಕ್ ಹೌಸ್, ಬೆಂಗಳೂರು.

**ಕಥನ ಸಾಹಿತ್ಯ**

೧. ಗೆಸ್ಟರ್ ; ೧೯೮೦ ; ಆನಂದ ಪ್ರಕಾಶನ, ಮೈಸೂರು.

೨. ಹೀಗೊಂದು ಪ್ರೇಮಕಥೆ ; ೨೦೦೬ ; ರವಿ ಮುದ್ರಣಾಲಯ, ಬೆಂಗಳೂರು.

೩. ಕಬ್ಬೆಕ್ಕು ; ೧೯೯೪ ; ಉದಯ ಪ್ರಕಾಶನ, ಬೆಂಗಳೂರು.

೪. ನಿರಂತರ ; ೨೦೦೫ ; ಶಕ್ತಿ ಪ್ರಕಾಶನ, ಬೆಂಗಳೂರು.

**ನಾಟಕ**

೧. ನಂಗ್ಯಾಕೋ ಡೌಟು ; ೨೦೦೯ ; ಅಂಕಿತ ಪ್ರಕಾಶನ, ಬೆಂಗಳೂರು.

**ಲೇಖನ**

೧. ಇತ್ಯಾದಿ ; ೨೦೦೨ ; ಸಿ.ವಿ.ಜೆ. ಪ್ರಕಾಶನ, ಬೆಂಗಳೂರು.

೨. ಆಗಿಂದಾಗ್ಗೆ ; ೨೦೧೦ ; ಧಾತ್ರಿ ಪುಸ್ತಕ ಪ್ರಕಾಶನ, ಬೆಂಗಳೂರು.

**ಅನುವಾದ ಸಾಹಿತ್ಯ**

೧. ರಜನೀಶ್ ನಿಜರೂಪ ; ೧೯೯೬ ; ಸಾಧನ ಪ್ರಕಾಶನ, ಬೆಂಗಳೂರು.

೨. **Columbus and other poem's** ; ೨೦೦೬ ; ಸುಂದರ ಪ್ರಕಾಶನ, ಬೆಂಗಳೂರು.

**ಸಂಪಾದನೆ**

೧. ಕವಿತೆ ; ೧೯೮೮ ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨) **ಧ್ವನಿಸುರುಳಿಗಳು**

೧. **ಸುಬ್ಬಾಭಟ್ಟರ ಮಗಳೆ** ; ೧೯೮೭ ; ಲಹರಿ ಸಂಸ್ಥೆ

೨. **ವಾಸಂತಿ** ; ೧೯೮೯ ; ಸಿ.ಬಿ.ಎಸ್.ಸಂಸ್ಥೆ

೩. **ಆಲಿಂಗನ** ; ೧೯೯೦ ; ಲಹರಿ ಸಂಸ್ಥೆ

೪. **ನನ್ನವಳು** ; ೨೦೦೩ ; ಆನಂದ್ ಆಡಿಯೋ ಸಂಸ್ಥೆ

೫. **ಹಾಡೆ ಮಾತಾಡೇ** ; ೨೦೦೪ ; ಲಹರಿ ಸಂಸ್ಥೆ

೬. **ಕಲಿಯೋಣ ಬನ್ನಿ** ; ೨೦೦೫ ; ಮನೋಹರಿ ಸಂಸ್ಥೆ

೭. **ಹೂ ನಗೆ** ; ೨೦೦೫ ; ಲಹರಿ ಸಂಸ್ಥೆ

೮. **ಹೇಳಿ ಹೋಗು ಕಾರಣವ** ; ೨೦೦೬ ; ಲಹರಿ ಸಂಸ್ಥೆ

೯. **ಗೆಳೆಯರಿರಲಿ ಈ ಬಾಳಿನಲಿ** ; ೨೦೦೬ ; ಲಹರಿ ಸಂಸ್ಥೆ

೧೦. **ನಾವಿರುವುದೇ ಹೀಗೆ** ; ೨೦೦೬ ; ಲಹರಿ ಸಂಸ್ಥೆ

೧೧. **ಕೊಲ್ಲುವುದಾದರೆ ಕೊಂದು ಬಿಡು** ; ೨೦೦೭ ; ಆಕಾಶ್ ಆಡಿಯೋ ಸಂಸ್ಥೆ

೧೨. **ಜೀವಸಖಿ** ; ೨೦೦೯ ; ಆನಂದ್ ಆಡಿಯೋ ಸಂಸ್ಥೆ

೧೩. **ದೇವ ವೀಣೆ** ; ೨೦೧೦ ; ಸಮುದ್ರ ರೆಕಾರ್ಡ್ಸ್ ಸಂಸ್ಥೆ

೧೪. **ಸ್ನೇಹ** ; ೨೦೧೧ ; ಲಹರಿ ಸಂಸ್ಥೆ

**ಆ) ಅನುಷಂಗಿಕ ಆಕರಗಳು**

**ಪ್ರಕಟಿತ ಗ್ರಂಥಗಳು**


೧. ಅನಂತ ಮೂರ್ತಿ.ಯು.ಆರ್.; ೧೯೭೩ ; **ಸನ್ನಿವೇಶ** ; ಅಕ್ಷರ ಪ್ರಕಾಶನ, ಬೆಂಗಳೂರು.

೨. ಅನಂತ ಮೂರ್ತಿ.ಯು.ಆರ್. ; ೨೦೦೪ ; **ಪ್ರಜ್ಞೆ-ಪರಿಸರ, ಸಾಹಿತ್ಯದ ಒಳಹೊರಗು** ; ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೩. ಅಮೂರ.ಜಿ.ಎಸ್ ; ೨೦೦೬ ; **ಕನ್ನಡ ಕಥನ ಸಾಹಿತ್ಯ ; ಕಾದಂಬರಿ** ; ಸ್ವಪ್ನ ಬುಕ್ ಹೌಸ್, ಬೆಂಗಳೂರು.

೪. ಕೀರ್ತಿನಾಥ ಕುರ್ತಕೋಟಿ ; ೨೦೦೮ ; **ಯುಗಧರ್ಮ ಹಾಗೂ ಸಾಹಿತ್ಯ ದರ್ಶನ** ; ಕುರ್ತಕೋಟಿ ಮೆಮೋರಿಯಲ್ ಟ್ರಸ್ಟ್, ಧಾರವಾಡ.

೫. ಗಂಗೂ ಆರ್. ಮೂಲಿಮನಿ ; ೨೦೦೩ ; **ನಾ.ಡಿಸೋಜ ; ಒಂದು ಸಾಹಿತ್ಯಕ ಅಧ್ಯಯನ** ; ಸುಂದರ ಪ್ರಕಾಶನ ; ಧಾರವಾಡ.

೬. ಗಿರಡ್ಡಿ ಗೋವಿಂದರಾಜ ; ೨೦೦೨ (ಸಂ) ; **ಓದುವ ದಾರಿಗಳು** ; ಕರ್ನಾಟಕ ಸಾಹಿತ್ಯ

ಅಕಾಡಮಿ, ಬೆಂಗಳೂರು.

೭. ನಾಗಭೂಷಣ ಸ್ವಾಮಿ.ಓ.ಎಲ್ ; ೧೯೯೮ ; **ವಿಮರ್ಶೆಯ ಪರಿಭಾಷೆ** ; ಅಂಕಿತ ಪುಸ್ತಕ, ಬೆಂಗಳೂರು.

೮. ನಾಗರಾಜ.ಡಿ.ಆರ್ ; ೧೯೮೭ ; **ಶಕ್ತಿ ಶಾರದೆಯ ಮೇಳ** ; ಅಕ್ಷರ ಪ್ರಕಾಶನ, ಸಾಗರ.

೯. ನಾಗರಾಜಯ್ಯ ಹಂಪ ; ೧೯೮೮ (ಸಂ) **ಕೈವಾರ ಸಾಹಿತ್ಯ ಸಮ್ಮೇಳನ** ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೦. ನಾಯಕ.ಜಿ.ಎಚ್ ; ೨೦೦೩ , **ಸ್ಥಿತಿ ಪ್ರಜ್ಞೆ** ; ಪ್ರಸಾರಾಂಗ ; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧. ನಾರಾಯಣ.ಕೆ.ವಿ ; ೧೯೯೭ ; **ಬೇರು ಕಾಂಡ ಚಿಗುರು** ; ವಿವೇಕ ಪ್ರಕಾಶನ, ಬೆಂಗಳೂರು.

೧೨. ಬರಗೂರು ರಾಮಚಂದ್ರಪ್ಪ ; ೧೯೮೯ ; **ಸಂಸ್ಕೃತಿ ಮತ್ತು ಸೃಜನಶೀಲತೆ** ; ಸುನಾದ ಪ್ರಕಾಶನ, ಬೆಂಗಳೂರು.

೧೩. ಮುಗಳಿ.ರಂ.ಶ್ರೀ ; ೨೦೦೯ ; **ಕನ್ನಡ ವಿಮರ್ಶೆಯ ತಾತ್ವಿಕ ವಿವೇಚನೆ** ; ಹೇಮಂತ ಸಾಹಿತ್ಯ, ಬೆಂಗಳೂರು.

೧೪. ರಹಮತ್ ತರಿಕೆರೆ ; ೨೦೦೪ ; **ಸಾಂಸ್ಕೃತಿಕ ಅಧ್ಯಯನ** ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೫. ರಾಘವೇಂದ್ರರಾವ್.ಎಚ್.ಎಸ್. ; ೧೯೮೯ ; **ನಿಲುವು** ; ಕ್ರೈಸ್ಟ್ ಕಾಲೇಜು, ಕನ್ನಡ ಸಂಘ, ಬೆಂಗಳೂರು.

೧೬. ರಾಘವೇಂದ್ರ ರಾವ್ ಎಚ್.ಎಸ್. ; ೧೯೯೯ ; **ಪ್ರಗತಿಶೀಲತೆ** ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೭. ರಾಜೇಂದ್ರ ಚೆನ್ನಿ ; ೨೦೦೩ ; **ಅಮೂರ್ತತತೆ ಮತ್ತು ಪರಿಸರ** ; ಅಭಿನವ ಪ್ರಕಾಶನ, ಬೆಂಗಳೂರು.

೧೮. ರಾಮಚಂದ್ರನ್.ಸಿ.ಎನ್.; ೧೯೯೮ ; **ಓದುಗರು ಮತ್ತು ಓದುವಿಕೆ ಪಾಶ್ಚಾತ್ಯ ವಾಚಕ ಸ್ಪಂದನ ಸಿದ್ಧಾಂತಗಳು** ; ಆನಂದಕಂದ ಗ್ರಂಥಮಾಲೆ ಮಲ್ಲಾಡಿಹಳ್ಳಿ, ಚಿತ್ರದುರ್ಗ.

೧೯. ರಾಮಚಂದ್ರನ್.ಸಿ.ಎನ್ ; ೨೦೦೩ ; **ಸಾಹಿತ್ಯ ವಿಮರ್ಶೆ** ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೦. ರಾಮಚಂದ್ರನ್.ಸಿ.ಎನ್ ; ೧೯೯೫ ; **ಆಶಯ ಆಕೃತಿ** ; ಅಭಿನವ ಪ್ರಕಾಶನ, ಬೆಂಗಳೂರು.

೨೧. ಲಂಕೇಶ್.ಪಿ : ೧೯೭೦ ; ೧೯೯೩ ; (ಸಂ) **ಅಕ್ಷರ ಹೊಸ ಕಾವ್ಯ** ; ಪತ್ರಿಕೆ ಪ್ರಕಾಶನ, ಬೆಂಗಳೂರು.

೨೨. ವಿವಿಧ ಲೇಖಕರು ; ೧೯೯೪ ; **ಕನ್ನಡದಲ್ಲಿ ಜನಪ್ರಿಯ ಸಾಹಿತ್ಯ** ; ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೩. ಶೇಷಗಿರಿರಾವ್ .ಎಲ್.ಎಸ್ : ೨೦೦೨ ; **ಹೊಸಗನ್ನಡ ಸಾಹಿತ್ಯ ಚರಿತ್ರೆ** ; ಅಂಕಿತ ಪ್ರಕಾಶನ, ಬೆಂಗಳೂರು.

೨೪. ಶ್ಯಾಮರಾಯ.ತ.ಸು ; (ಸಂ) ೧೯೯೧ ; **ಧನ್ಯಜೀವಿ** ; ಅನಾಥ ಸೇವಾಶ್ರಮ, ವಿಶ್ವಸ್ಥ ಸಮಿತಿ, ಮಲ್ಲಾಡಿಹಳ್ಳಿ, ಚಿತ್ರದುರ್ಗ.

೨೫. ಸರ್ಫ್ರಾಜ್ ಚಂದ್ರಗುತ್ತಿ ; ೨೦೦೭ ; **ಸುಗಮ ಸಂಗೀತ ಮತ್ತು ಆಧುನಿಕ ಕನ್ನಡ ಕವಿತೆ** ; ಸಹನಾ ಪ್ರಕಾಶನ, ಬೆಂಗಳೂರು.

**ಅಪ್ರಕಟಿತ ಸಂಶೋಧನಾ ಪ್ರಬಂಧಗಳು**

೧. ದುರ್ಗಾ ಪ್ರವೀಣ.ಎಂ.ಎಸ್ ; ೨೦೦೩ ; **ಆಧುನಿಕ ಕನ್ನಡ ಸಾಹಿತ್ಯ ಹಾಗೂ ಜನಪ್ರಿಯತೆಯ ಪ್ರಶ್ನೆ** ; ಹಂಪಿ ವಿಶ್ವವಿದ್ಯಾಲಯ.

೨. ನರಸಿಂಹರಾಜ.ಟಿ. ; ೨೦೦೫ ; **ಬಿ.ಎಲ್.ವೇಣು ಅವರ ಸಾಹಿತ್ಯ ಅಧ್ಯಯನ** ; ಕುವೆಂಪು ವಿಶ್ವವಿದ್ಯಾಲಯ.

೩. ನಾಗಾರ್ಜುನ ಹಾ.ಮಾ ; ೨೦೦೨ ; **ತ.ಪು. ವೆಂಕಟರಾಮನ್ ಕಾದಂಬರಿಗಳಲ್ಲಿ ಜನಪ್ರಿಯತೆಯ ಅಂಶಗಳು** ; ಕುವೆಂಪು ವಿಶ್ವವಿದ್ಯಾಲಯ.

೪. ಬಸವರಾಜ ; ೨೦೦೮ ; **ಬಿ.ಆರ್.ಲಕ್ಷ್ಮಣರಾವ್ ಕಾವ್ಯದಲ್ಲಿ ಪ್ರೇಮದ ನೆಲೆಗಳು** ; ಒಂದು ವಿಶ್ಲೇಷಣೆ ; ಎಂ.ಫಿಲ್ ಪದವಿಗಾಗಿ ಪ್ರಬಂಧ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ಮಾಧವರಾವ್.ಎಚ್.ಎಸ್. ಓದುಗ **ಮತ್ತು ಸಾಹಿತ್ಯಾಭಿರುಚಿಯನ್ನು ಕುರಿತ ಸಮೀಕ್ಷಾತ್ಮಕ ಅಧ್ಯಯನ**, ಬೆಂಗಳೂರು ವಿಶ್ವವಿದ್ಯಾಲಯ.

